# ನಿರುದ್ಯೋಗ ನಿವಾರಣೆಗಾಗಿ
# ಕ್ರಾಂತಿಕಾರಕ ದಾರಿ !

## ನೂಲುವವರಿಗೆ ಸುಸಂಧಿ !

ಇಷ್ಟು ದಿವಸ ಸಂಜೆಯ ವರೆಗೆ ಕಷ್ಟಪಟ್ಟು ನೂಲುವವರಿಗೆ ಈ ಜೀವನ ವೇತನವು ಕೇವಲ **೬ ಆಣೆ** ಮಾತ್ರ ದೊರೆಯುತ್ತಿದ್ದರೆ ಈಗ್ಗ ಗ್ರಾಮೋದ್ಯೋಗ ಮಂಡಳದಿಂದ ಪ್ರಚಾರದಲ್ಲಿ ಬಂದ **ಅಂಬರ ಚರಖಾ**ದಿಂದ ಸುಲಭವಾಗಿ **೧೦ ಆಣೆ** ಯಿಂದ **೧೨ ಆಣೆ**ಯ ವರೆಗೆ ದೊರೆಯುವದು. ಈ ಚರಖಾದಲ್ಲಿ ೪ ಕದರುಗಳಿದ್ದು ಕೇವಲ ಕೈಯಿಂದಲೇ ಸರಳವಾಗಿ ತಿರುಗಿಸಬಹುದು. ನಮ್ಮ ಮಂಡಳದಿಂದ ಅಲ್ಲಲ್ಲಿ ಈ ಚರಖಾದ ಉಪಯೋಗವನ್ನು ಮಾಡುವ ಕುರಿತು ಶಿಕ್ಷಣ ವನ್ನು ಕೊಡಲಾಗುವದು. ಇವುಗಳ ಉಪಯೋಗದಿಂದ ನಿರುದ್ಯೋಗ ನಿವಾರಣೆ ಮಾಡಿಕೊಳ್ಳಿರಿ.

ಅಖಿಲ ಭಾರತ ಖಾದೀ ಹಾಗೂ ಗ್ರಾಮೋದ್ಯೋಗ ಮಂಡಳದಿಂದ ಮನ್ನಣೆಪಡೆದ ಖಾದೀ ಹಾಗೂ ಗ್ರಾಮೋದ್ಯೋಗ ಸಂಘ ಸಂಸ್ಥೆಗಳಲ್ಲಿ ತಯಾರಾದ ವಸ್ತುಗಳನ್ನೇ ಪ್ರೋತ್ಸಾಹಿಸಿ ಕೊಂಡು ನಿರುದ್ಯೋಗ ನಿವಾರಣೆಯನ್ನು ಮಾಡಿರಿ.

೧. ಈ ಸಂಸ್ಥೆಗಳಲ್ಲಿ ತಯಾರಾದ ವಸ್ತುಗಳಿಗೆ ಅಲ್ಲಿ ದುಡಿಯುವ ಜನರಿಗೆ ಸರಿಯಾದ ಜೀವನ ವೇತನವು ದೊರೆಯುತ್ತದೆ.

೨. ಶುದ್ಧ ಕೈಯಿಂದಲೇ ತಯಾರಾದ ವಸ್ತುಗಳು ದೊರೆಯುತ್ತವೆ.

೩. ನುರಿತ ಜನರ ಮೇಲ್ವಿಚಾರಣೆಯಲ್ಲಿ ತಯಾರಾಗುತ್ತವೆ.

ಈ ಸಂಸ್ಥೆಗಳಲ್ಲಿ ಶುದ್ಧ ಖಾದಿ, ಚೊಕ್ಕ ಕುಸುಬಿಯ ಎಣ್ಣೆ, ಅಖಾದ್ಯ ಎಣ್ಣೆಯಿಂದ ತಯಾರಾದ ಸಾಬೂಣ, ಕಡ್ಡೀಪೆಟ್ಟಿಗೆ, ಕೈಕಾಗದ, ಹುಲ್ಲುಚಾಪಿ, ತಾಳೆಬೆಲ್ಲ ತಯಾರಾಗುತ್ತವೆ.

ಸಂಘಟಕರು

# ಕಸ್ತೂರಿ

ಕನ್ನಡ ಡೈಜೆಸ್ಟ್

ಮುಖ್ಯ ಸಂಪಾದಕರು :
**ಮೊಹರೆ ಹನುಮಂತರಾಯರು**

ಪ್ರಕಾಶಕರು :
**ಲೋಕಶಿಕ್ಷಣ ಟ್ರಸ್ಟ್-ಹುಬ್ಬಳ್ಳಿ**

ಕಚೇರಿ :
**ಸಂಯುಕ್ತ ಕರ್ನಾಟಕ ಕಾರ್ಯಾಲಯ**
**ಹುಬ್ಬಳ್ಳಿ**

ಮುದ್ರಕರು :
**ಸಂಯುಕ್ತ ಕರ್ನಾಟಕ ಮುದ್ರಣಾಲಯ**
**ಹುಬ್ಬಳ್ಳಿ**

ಚಿತ್ರಕಾರರು :
**ಸದಾಶಿವ**
**ಮಾರ್ಶಲ್ ಡಿಸೋಜ**

ಮುಖಪುಟ ಚಿತ್ರ :
**ನಾರಾಯಣ ಕಂಚಿ**

ಚಂದಾ ದರ :
ವಾರ್ಷಿಕ (ಅಂಚೆಸೇರಿ) ರೂ. ೮-೦-೦
ಬಿಡಿ ಸಂಚಿಕೆ — ರೂ. ೦-೧೨-೦


## ಲೇಖಕರಿಗೆ ಸೂಚನೆ

ಕಸ್ತೂರಿಯಲ್ಲಿ ಪ್ರಕಟನೆಗಾಗಿ ಲೇಖ, ಪ್ರಬಂಧ, ಕಥೆ ಮೊದಲಾದವನ್ನು ಸ್ವೀಕರಿಸಲಾಗುವದು. ಕಾಗದದ ಒಂದೇ ಮಗ್ಗಲಿಗೆ ವಿರಳವಾಗಿ ಬರೆದು ಕಳಿಸಬೇಕು. ಲೇಖಕರು ತಮ್ಮ ಹೆಸರು ವಿಳಾಸಗಳನ್ನು ಸ್ಪಷ್ಟವಾಗಿ ತಿಳಿಸಬೇಕಲ್ಲದೆ, ಅನುವಾದ, ರೂಪಾಂತರ ಇಲ್ಲವೆ ಸಾಧಾರ ಲೇಖಗಳಾದರೆ ಅವುಗಳ ಮೂಲ ಲೇಖಕ ಹಾಗು ಪ್ರಕಾಶಕರ ಹೆಸರು ವಿಳಾಸಗಳನ್ನೂ ಒದಗಿಸಬೇಕು. ಅಸ್ವೀಕೃತ ಲೇಖಗಳು ತಿರುಗಿ ಬೇಕಾಗಿದ್ದರೆ **ಲೇಖಗಳ ಸಂಗಡವೇ** ತಿರುಗಿ ಕಳಿಸಲು ಅವಶ್ಯಬೀಳುವಷ್ಟು ಅಂಚೆ ತಿಕೀಟುಗಳನ್ನೂ ಕಳಿಸಿರಬೇಕು. ಲೇಖ ಸ್ವೀಕೃತವಾದರೆ ಯಥಾವಕಾಶ ಪ್ರಕಟಿಸಲಾಗುವದು; ಆದರೂ ಸಾಮಾನ್ಯವಾಗಿ ಸ್ವೀಕೃತ ಲೇಖಗಳ ಸ್ವೀಕಾರದ ಸುದ್ದಿಯನ್ನು ಲೇಖ ತಲುಪಿದ ನಾಲ್ಕು ವಾರದೊಳಗಾಗಿ ಲೇಖಕರಿಗೆ ತಿಳಿಸಲಾಗುವದು. ಲೇಖಕರು ತಮ್ಮ ಲೇಖಗಳ ಸ್ಥಳಪ್ರತಿಗಳನ್ನು ಕಾಯ್ದಿಟ್ಟುಕೊಳ್ಳುವದೊಳಿತು.

ಲೇಖ ಪ್ರಕಟವಾದರೆ "ಕಸ್ತೂರಿ" ಯು ಆಗಿಂದಾಗ್ಗೆ ಗೊತ್ತುಪಡಿಸಿಕೊಂಡ ಕ್ರಮದಲ್ಲಿ ಪ್ರತಿಫಲವನ್ನು ಆದಷ್ಟು ಬೇಗ ಕೊಡಲಾಗುವದು. ಲೇಖಗಳಲ್ಲಿ ಸೂಕ್ತ ಬದಲಾವಣೆ ಮಾಡಿಕೊಳ್ಳುವ ಅಧಿಕಾರ ಸಂಪಾದಕರಿಗಿದೆ.

---

## ಚಂದಾದಾರರಿಗೆ ಸೂಚನೆ

ಪ್ರತಿತಿಂಗಳ "ಕಸ್ತೂರಿ" ಆ ಹಿಂದಣ ತಿಂಗಳ ಕೊನೆಯ ವಾರದೊಳಗೆ ಪ್ರಕಟವಾಗುವುದು. ಅದು ಚಂದಾದಾರರಿಗೆ ಆಯಾ ತಿಂಗಳ ೫ ನೇ ದಿನಾಂಕದೊಳಗೆ ತಲಪುವದು. ಹಾಗೆ ಬಾರದಿದ್ದರೆ ಚಂದಾದಾರರು ತಮ್ಮ ಟಪಾಲು ಕಟ್ಟೆಯಲ್ಲಿ ಮೊದಲು ವಿಚಾರಿಸಿ ನಮಗೆ ತಿಳಿಸಬೇಕು. ಚಂದಾದಾರರು ಕಾರ್ಯಾಲಯದೊಡನೆ ಪತ್ರವ್ಯವಹಾರ ಮಾಡುವಾಗ್ಗೆ ತಮ್ಮ ಚಂದಾ ನಂಬರು ಕಾಣಿಸಲು ಮರೆಯಬಾರದು.

---

## ಸೂಚನೆ :

'ಕಸ್ತೂರಿ'ಯನ್ನು ಕುರಿತು ನೂರಾರು ಓದುಗರಿಂದ ಪತ್ರಗಳು ಬಂದಿದ್ದು ಅವುಗಳಲ್ಲಿ ಕೆಲವನ್ನು ಆಯ್ದು ಮುಂದಿನ ಸಂಚಿಕೆಯಲ್ಲಿ ಪ್ರಕಟಿಸುವೆವು.

# ಈ ಸಂಚಿಕೆಯಲ್ಲಿ



# ಕಸ್ತೂರಿ

ವರ್ಷ ೧ ಅಕ್ಟೋಬರ ೧೯೫೬ ಸಂಚಿಕೆ ೨

**ಮಹಾತ್ಮರ ಕೊನೆಯ ದಿನಗಳ ರೋಮಾಂಚಕ ಸನ್ನಿವೇಶ, ಅವರ ಉಪವಾಸಗಳ ಮಂತ್ರಶಕ್ತಿಯ ಮನೋವೇಧಕ ಚಿತ್ರವಿದು.**

# ಗಾಂಧೀಜಿಯ ಕೊನೆಯ ಉಪವಾಸಗಳು

ರಾಷ್ಟ್ರೀಯ ಐಕ್ಯಭಾವನೆಗಿಂತ ಧಾರ್ಮಿಕ ಭೇದಭಾವನೆಗಳು ಬಲಶಾಲಿಯಾಗಿದ್ದುದರಿಂದ ಭಾರತದ ವಿಭಜನೆಯನ್ನು ಮಹಾತ್ಮಾ ಗಾಂಧೀಜಿಯವರು ತಡೆಯಲಾರದೆ ಹೋದರು. ಹಿಂದು-ಮುಸ್ಲಿಂರನ್ನು ಒಂದುಗೂಡಿಸಲು ಗಾಂಧೀಜಿ, ನೆಹರೂ ಮತ್ತು ಇನ್ನಿತರರು ಮಾಡಬಹುದಾದ ಕಾರ್ಯಗಳಿಗಿಂತ, ಹೇಳಬಹುದಾದ ಮಾತುಗಳಿಗಿಂತ ಹೆಚ್ಚಾಗಿ ಭೇದಭಾವನೆಗಳನ್ನು ಕೆರಳಿಸುವ ಮಾತಿನ ಮಲ್ಲರ ನುಡಿ ಜನರನ್ನು ಆಕರ್ಷಿಸಿತು.



ದ್ವೇಷ ಮತ್ತು ಅಧಿಕಾರಲಾಲಸೆಗಳ ತೊತ್ತಾದ ಧರ್ಮಾಂಧತೆಯ ಬಲದಿಂದ, ರಕ್ತದ ಮಡುವಿನಲ್ಲಿ, ಕೈಗೆ ಬಂದ ಸ್ವಾತಂತ್ರ್ಯವು ಗಾಂಧೀಜಿಗೆ ಸಂತೋಷವನ್ನುಂಟುಮಾಡಲಿಲ್ಲ. ಅದನ್ನು ತಿರಸ್ಕರಿಸುವ ಶಕ್ತಿ ಮತ್ತು ಧೈರ್ಯ ಅವರಲ್ಲಿತ್ತು; ಇದೇ ಅವರ ಹಿರಿಮೆಯ ನಿಜ ತಿರುಳು. ಭಾರತವು ೧೫-೮-೧೯೪೭ ರಂದು ಸ್ವಾತಂತ್ರ್ಯವನ್ನು ಪಡೆಯಿತು. ಆದರೆ ಸ್ವಾತಂತ್ರ್ಯೋತ್ಸವದಲ್ಲಿ ತಾನು

**ಲುಯಿ ಫಿಶರರ “ ಗಾಂಧಿ ” ಪುಸ್ತಕದಿಂದ ಸಂಗ್ರಹ**

ಭಾಗ ವಹಿಸಲಾರೆನೆಂದು ಗಾಂಧೀಜಿ ಸಾರಿದರು. ಅವರು ಮತ್ತೆ ಕಲಕತ್ತೆಯಲ್ಲಿ ಜಾತೀಯ ದಂಗೆಗಳ ವಿರುದ್ಧ ಹೋರಾಡತೊಡಗಿದ್ದರು. ರಾಷ್ಟ್ರದ ನವಜೀವನದ ಅಧಿಕೃತ ಪ್ರಾರಂಭದ ಕಾಲಕ್ಕೆ ರಾಜಧಾನಿಗೆ ಬರಬೇಕೆಂದು ಬಂದ ಆಮಂತ್ರಣವನ್ನು ಅವರು ತಿರಸ್ಕರಿಸಿದರು; ದೇಶಕ್ಕೆ ಯಾವ ಸಂದೇಶವನ್ನೂ ಕೊಡಲಿಲ್ಲ.

ಅಗಸ್ಟ ೨೯ ರಂದು ಅವರು ರಾಜಕುಮಾರಿ ಅಮೃತಕೌರರಿಗೆ ಒಂದು ಪತ್ರ ಬರೆದರು: "ಮಾನವ ಕುಲ ಒಂದು ಮಹಾಸಾಗರ. ಮಹಾಸಾಗರದಲ್ಲಿ ಕೆಲ ಹನಿಗಳು ಹೊಲಸಾದರೆ ಇಡೀ ಸಾಗರವೇ ಹೊಲಸಾಗುವದಿಲ್ಲ." ಗಾಂಧೀಜಿ ಮಾನವ ಕುಲದಲ್ಲೂ ತಮ್ಮಲ್ಲೂ ತಮ್ಮ ಶ್ರದ್ಧೆಯನ್ನು ಹಾಗೆಯೇ ಉಳಿಸಿಕೊಂಡರು. "ನಾನು ಅಪಜಯವನ್ನರಿಯದ ಹುಟ್ಟಾ ಯೋಧ" ಎಂದವರು ಕಲಕತ್ತೆಯ ಒಂದು ಪ್ರಾರ್ಥನಾಸಭೆಯಲ್ಲಿ ಜನರಿಗೆ ಆಶ್ವಾಸನವಿತ್ತರು. ವಿಭಜನೆ ಸತ್ಯವಾಗಿರುವದೇನೋ ನಿಜ, ಆದರೆ "ಸದ್ವರ್ತನೆಯಿಂದ ಒಂದು ಅನಿಷ್ಟವನ್ನು ಕಡಿಮೆ ಮಾಡಿಕೊಳ್ಳುವದು ಮತ್ತು ಕೊನೆಯಲ್ಲಿ ಅನಿಷ್ಟದಲ್ಲೇ ಇಷ್ಟವನ್ನು ಸಾಧಿಸುವದು ಯಾವಾಗಲೂ ಸಾಧ್ಯವಿದೆ."

೧೯೪೭ರ ಅಗಸ್ಟ ತಿಂಗಳಲ್ಲಿ ಗಾಂಧೀಜಿಯವರ ಕಲಕತ್ತೆಯ ವಾಸ್ತವ್ಯವು ಅಂತರ್ಜಾತೀಯ ಬಿರುಗಾಳಿಯನ್ನು ಶಾಂತಗೊಳಿಸಿತು. ತುಂಡುದಟ್ಟಿ (ಪಂಜೆ)ಯ ಈ ಮಾಂತ್ರಿಕನನ್ನು ಪತ್ರಿಕೆಗಳು ಹೊಗಳಿದವು. ಆದರೆ ಹಿಂದು-ಮುಸ್ಲಿಮರಿಬ್ಬರಿಗೂ ಹಾನಿಕರವಾದ ಬಂಗಾಲದ ವಿಭಜನೆಯು ಅವರಿಬ್ಬರನ್ನೂ ಮತ್ತೆ ಹುಚ್ಚೆಬ್ಬಿಸಿತು. ವಿಭಜನೆಯು ತಾನು ಬಗೆಹರಿಸಿದ ಸಮಸ್ಯೆಗಳಿಗಿಂತಲೂ ಹೆಚ್ಚಿನ ಸಂಖ್ಯೆಯಲ್ಲಿ ಸಮಸ್ಯೆಗಳನ್ನು ಮುಂದೊಡ್ಡಿತು. ತಿಂಗಳು ಮುಗಿಯಿತು ಎನ್ನುವಾಗ ದ್ವೇಷದ ಹೊಳೆ ತುಂಬಿ ಹರಿದು ಗಾಂಧೀಜಿ ವಾಸಿಸುತ್ತಿದ್ದ ಮನೆಯನ್ನೇ ಪ್ರವೇಶಿಸಿತು. ಅಗಸ್ಟ ೩೧ರ ರಾತ್ರಿ ಗಾಂಧೀಜಿ ಅದೇ ಹಾಸಿಗೆಯ ಮೇಲೆ ಅಡ್ಡಾಗಿದ್ದರು. ಮುಸ್ಲಿಮರ ಇರಿತದಿಂದ ಸತ್ತನೆಂದು ಹೇಳಲಾದ ಓರ್ವ ಹಿಂದುವಿನ ಶವವನ್ನು ಹೊತ್ತುಕೊಂಡು ರೊಚ್ಚಿಗೆದ್ದು ಅಂಕೆಮೀರಿದ ಹಿಂದುಗಳ ಗುಂಪೊಂದು ಬೊಬ್ಬಿಡುತ್ತ ಗಾಂಧೀಜಿಯವರಿದ್ದ ಮನೆಯನ್ನು ಹೊಕ್ಕಿತು. ಕಲ್ಲು ತೂರಿ ಮುಷ್ಟಿಯಿಂದ ಗುದ್ದಿ ಅವರು ಕಿಡಿಕಿಯ ಗಾಜುಗಳನ್ನು ಪುಡಿಪುಡಿ ಮಾಡಿದರು; ಬಾಗಿಲುಗಳನ್ನು ಒದ್ದರು; ವಿದ್ಯುತ್ ತಂತಿಗಳನ್ನು ಹರಿಯಲೆತ್ನಿಸಿದರು. ಅವರನ್ನು ಶಾಂತಗೊಳಿಸಲೆಂದು ಗಾಂಧೀಜಿ ಎದ್ದರು. ಮರುದಿನ ಸರದಾರ ವಲ್ಲಭಭಾಯಿಯವರಿಗೆ ಬರೆದ ಪತ್ರದಲ್ಲಿ ಅವರು, "ನಾನು ಅವರನ್ನುದ್ದೇಶಿಸಿ ಕೂಗಿಕೊಳ್ಳತೊಡಗಿದೆ. ಆದರೆ ಕೇಳುವವರಾರು?" ಎಂದು ಬರೆದರು. ಗಾಂಧೀಜಿಯವರನ್ನು ರಕ್ಷಿಸಲು ಮುಸ್ಲಿಮರು ಅವರ ಸುತ್ತು ಸಾಲುಗಟ್ಟಿ ನಿಂತರು. ಗಾಂಧೀಜಿಯವರ ಮೇಲೆ ಒಂದು ಇಟ್ಟಂಗಿಯನ್ನು ತೂರಲಾಯಿತು. ಅವರ ಬಳಿಯಲ್ಲಿ ನಿಂತಿದ್ದ ಓರ್ವ ಮುಸ್ಲಿಮನಿಗೆ ಅದು ಬಡಿಯಿತು. ಗಲಭೆಗಾರರಲ್ಲಿ ಓರ್ವನು ಬೀಸಿದ ಉದ್ದನ್ನ ಲಾಠಿಯ ಏಟು ಮಹಾತ್ಮಾಜಿಯವರ ತಲೆಗೆ ಬೀಳಬೇಕಾದ್ದು ಕೂದಲೆಳೆಯಷ್ಟರಿಂದ ತಪ್ಪಿತು. ಗಾಂಧೀಜಿ ದುಃಖದಿಂದ ತಲೆಯಲ್ಲಾಡಿಸಿದರು. ಕೊನೆಗೆ ಪೋಲೀಸರು ಬಂದು ಅಶ್ರುವಾಯುವನ್ನುಪಯೋಗಿಸಿ ಜನರನ್ನು ಚದುರಿಸಿದರು.

ಗಾಂಧೀಜಿ ಉಪವಾಸ ಮಾಡಲು ನಿರ್ಧರಿಸಿದರು. ಸಪ್ಟೆಂಬರ ೧ ರಂದು ಪತ್ರಿಕೆಗಳಿಗಿತ್ತ ಹೇಳಿಕೆಯಲ್ಲಿ ಅವರೆಂದರು: "ಗುಲ್ಲೆಬ್ಬಿಸುತ್ತಿರುವ ಜನಜಂಗುಳಿಯ ಎದುರಿಗೆ ಹೋಗಿ ನಿಲ್ಲುವದರಿಂದ ಎಲ್ಲ ಸಮಯಗಳಲ್ಲಿಯೂ ಉಪಯೋಗವಾಗುವದಿಲ್ಲ. ನಿನ್ನೆ ರಾತ್ರಿಯಂತೂ ಖಂಡಿತವಾಗಿಯೂ ಅದರಿಂದ ಉಪಯೋಗವಾಗಲಿಲ್ಲ. ನನ್ನ ಮಾತುಗಳು ಮಾಡಲಾರದ್ದನ್ನು ಬಹುಶಃ ನನ್ನ ಉಪವಾಸ ಮಾಡಬಹುದು. ಕಲಕತ್ತೆಯಲ್ಲಿ ಅದರ ಪರಿಣಾಮವಾಯಿತಾದರೆ ಅದು ಪಂಜಾಬದಲ್ಲಿ ಕಾದಾಡುತ್ತಿರುವವರ ಹೃದಯವನ್ನೂ ಮೃದು ಮಾಡಬಹುದು. ಆದುದರಿಂದ ಇಂದು ರಾತ್ರಿ ೮-೧೫ ಕ್ಕೆ ನಾನು ಉಪವಾಸವನ್ನಾರಂಭಿಸುತ್ತೇನೆ. ಕಲಕತ್ತೆಗೆ ವಿವೇಕೋದಯವಾದಲ್ಲಿ

ಮತ್ತು ವಿವೇಕೋದಯವಾದಾಗಲೇ ಈ ನನ್ನ ಉಪವಾಸ ಕೊನೆಗೊಳ್ಳುವದು." ಇದು ಆಮರಣ ಉಪವಾಸವಾಗಿತ್ತು.

ಸಪ್ಟಂಬರ ೨ ರಂದು ಜನರ ಗುಂಪುಗಳು ಗಾಂಧೀಜಿಯವರ ನಿವಾಸಕ್ಕೆ ಬರತೊಡಗಿದವು. ಅವರ ಜೀವವನ್ನುಳಿಸಲು ತಾವು ಬೇಕಾದ್ದನ್ನು ಮಾಡಲು ಸಿದ್ಧರಿದ್ದೇವೆಂದು ಈ ಜನ ಹೇಳಿದರು. ಇದು ತಪ್ಪು ಹಾದಿ ಎಂದರು ಗಾಂಧೀಜಿ. ತಮ್ಮ ಉಪವಾಸಗಳು "ವಿವೇಕವನ್ನು ಜಾಗೃತಗೊಳಿಸಿ ಮನಸ್ಸಿನ ಮಾಲಿನ್ಯವನ್ನುಅಳಿಸುವದಕ್ಕಾಗಿಇವೆ. ನನ್ನ ಜೀವವುಳಿಸುವ ಮಾತಿಗಿಂತಲೂ ಹೃದಯ ಪರಿವರ್ತನೆಯೇ ಮುಖ್ಯವಾಗಿದೆ" ಎಂದರವರು. ಪ್ರಮುಖ ಮುಸ್ಲಿಮರು ಬಂದರು. ಅಂತರ್ಜಾತೀಯ ಸೌಹಾರ್ದವನ್ನುಂಟುಮಾಡಲು ಪ್ರಯತ್ನಿಸುವದಾಗಿ ಅವರು ಹೇಳಿದಂತೆ, ಪಾಕಿಸ್ತಾನೀ ನಾವಿಕರ ಸಂಘದ ಅಧಿಕಾರಿಯೊಬ್ಬನು ಕೂಡ ಬಂದು ಅದೇ ಮಾತನ್ನು ಹೇಳಿದನು. ಸಪ್ಟಂಬರ ೪ ರಂದು ನಗರಸಭೆಯು ೨೪ ತಾಸುಗಳಿಂದ ನಗರವು ಸಂಪೂರ್ಣ ಶಾಂತವಾಗಿದೆ ಎಂದು ವರದಿ ಮಾಡಿತು. ೫೦೦ ಜನ ಪೋಲೀಸರು, ಅವರ ಬ್ರಿಟಿಶ್ ಅಧಿಕಾರಿಗಳು ಕೂಡ, ಕೆಲಸ ಮಾಡುತ್ತಿರುವಾಗಲೇ ಒಂದು ದಿನದ ಸಹಾನುಭೂತಿಪರ ಉಪವಾಸವನ್ನಾಚರಿಸಿದರು. ಕ್ರೂರ ಕೊಲೆಗಡಕರು, ಪುಂಡರ ಮುಂದಾಳುಗಳು ಗಾಂಧೀಜಿಯವರ ಶಯ್ಯೆಯ ಬಳಿಗೆ ಬಂದು ಕೃಶವಾಗುತ್ತಿದ್ದ ಅವರ ದೇಹವನ್ನು ಕಂಡು ಕಣ್ಣೀರಿಟ್ಟರು ; ದುಷ್ಕೃತ್ಯಗಳಿಂದ ದೂರವಿರುವದಾಗಿ ಅವರು ವಚನವಿತ್ತರು. ವ್ಯಾಪಾರಿಗಳ ಮತ್ತು ಕೆಲಸಗಾರರ, ಹಿಂದು, ಮುಸ್ಲಿಂ ಮತ್ತು ಕ್ರಿಶ್ಚನ್ನರ ಶಿಷ್ಟಮಂಡಲಗಳು ಗಾಂಧೀಜಿಯ ಸಮ್ಮುಖದಲ್ಲಿ ಕಲಕತ್ತೆಯಲ್ಲಿ ಇನ್ನು ಮುಂದೆ ಏನೂ ಗೊಂದಲವಾಗುವದಿಲ್ಲವೆಂದು ಶಪಥಗೈದವು. ಗಾಂಧೀಜಿ ಅವರನ್ನು ನಂಬಿದರು, ಆದರೆ ಈ ಸಲ ಈ ಆಶ್ವಾಸನವನ್ನು ಬರೆಹದಲ್ಲಿ ಬಯಸಿದರು. ಮತ್ತು ಅವರು ಅದಕ್ಕೆ ಅಂಕಿತ ಹಾಕುವ ಮೊದಲು, "ನಿಮ್ಮ ಶಪಥವನ್ನು ನೀವು ಮುರಿದರೆ ಆಗ ನಾನು ಮರಣದಲ್ಲಿ ಮುಕ್ತಾಯವಾಗುವ ಎಂದೂ ತಿರುಗಿತೆಗೆದುಕೊಳ್ಳಲು ಬಾರದ ಉಪವಾಸವನ್ನು ಪ್ರಾರಂಭಿಸುವೆನು ಎಂದು ನಿಮಗೆ ತಿಳಿದಿರಲಿ" ಎಂದು ಅವರಿಗೆ ಹೇಳಿದರು. ಅವರೆಲ್ಲ ದೂರ ಸರಿದು, ವಿಚಾರಮಾಡಿ, ಚರ್ಚಿಸಿ ಲಿಖಿತ ಆಶ್ವಾಸನಕ್ಕೆ ಅಂಕಿತ ಹಾಕಿದರು. ಆಗ ಗಾಂಧೀಜಿ ತಮ್ಮ ೭೩ ತಾಸುಗಳ ಉಪವಾಸವನ್ನು ಮುರಿದರು.

ಆ ದಿನದಿಂದ, ಮುಂದೆ ಅನೇಕ ತಿಂಗಳುಗಳವರೆಗೆ ಪಂಜಾಬ ಹಾಗೂ ಇನ್ನಿತರ ರಾಜ್ಯಗಳಲ್ಲಿ ಧಾರ್ಮಿಕ ಹತ್ಯಾಕಾಂಡಗಳ ಹಾವಳಿ ನಡೆದಿದ್ದರೂ ಕಲಕತ್ತೆ ಮತ್ತು ವಿಭಕ್ತ ಬಂಗಾಲದ ಹಿಂದು-ಮುಸ್ಲಿಂ ವಿಭಾಗಗಳು ಜಾತೀಯ ದಂಗೆಯಿಂದ ಅಲಿಪ್ತವಾಗಿ ಉಳಿದವು. ಮಹಾತ್ಮರಿಗಿತ್ತ ವಚನವನ್ನು ಬಂಗಾಲವು ಪಾಲಿಸಿತು.

ಸಪ್ಟಂಬರ ೭ ರಂದು ಗಾಂಧೀಜಿ ಕಲಕತ್ತೆಯಿಂದ ಪಂಜಾಬಕ್ಕೆ ಹೊರಟರು. ಅವರ ತೋಟದ ಇನ್ನೊಂದು ಭಾಗಕ್ಕೆ ಆರೈಕೆ ಬೇಕಾಗಿತ್ತು. ಹಾದಿಯಲ್ಲಿ ದಿಲ್ಲಿಯಲ್ಲಿ ರೇಲ್ವೆಗಾಡಿ ನಿಂತಾಗ ಸರದಾರ ಪಟೇಲ, ಆರೋಗ್ಯ ಮಂತ್ರಿ ರಾಜಕುಮಾರಿ ಅಮೃತ ಕೌರ ಮತ್ತು ಇನ್ನಿತರ ಸಹಕಾರಿಗಳನೇಕರು ಗಾಂಧೀಜಿಯನ್ನು ಕಂಡು ದಿಲ್ಲಿಯಲ್ಲಿ ದಂಗೆಗಳ ಕೋಲಾಹಲ ನಡೆದಿದೆ ಎಂಬ ಖೇದದಾಯಕ ಸುದ್ದಿಯನ್ನು ಹೇಳಿದರು. ಗಾಂಧೀಜಿ ಗಾಡಿಯಿಂದಿಳಿದರು. ಅಸ್ಪೃಶ್ಯರ ವಸತಿಯಲ್ಲಿ ಪುಂಡರು ಸುಲಭದಲ್ಲಿ ಏರಿ ಬರಬಹುದಾದ್ದರಿಂದ ಅಲ್ಲಿ ನೀವು ಸುರಕ್ಷಿತವಾಗಿರಲಾರಿರಿ ಎಂದು ಮಿತ್ರವರ್ಗ ಹೇಳಿತು. ಆದುದರಿಂದ ಅವರು ತಾವು "ಅರಮನೆ" ಯೆಂದು ಕರೆಯುತ್ತಿದ್ದ ಬಿರ್ಲಾ ಭವನದಲ್ಲಿ ವಾಸ ಮಾಡಿದರು.

ದಂಗೆಯಿಂದ ಹೊಸ ಮತ್ತು ಹಳೆ ದಿಲ್ಲಿಗಳ ಸಂಪರ್ಕ ಸಾಧನಗಳು ಹಾಳಾಗಿದ್ದವು. ಹಾಲು, ಹಣ್ಣು, ಕಾಯಿಪಲ್ಯ ಸಿಗುತ್ತಿರಲಿಲ್ಲ. ನಗರವು 'ರುದ್ರಭೂಮಿ'ಯಂತೆ ಕಂಡುಬರುತ್ತಿತ್ತು. ಹಿಂಡುಗಟ್ಟಲೆ ಜನರು ಬಂದು ದಿಲ್ಲಿಯಲ್ಲಿ ತುಂಬಿಕೊಳ್ಳುತ್ತಿದ್ದರು. ಪಂಜಾಬದಿಂದ ಬಂದ ಶೀಖ ನಿರಾಶ್ರಿತರು, ಪಂಜಾಬದಲ್ಲಿ ಮುಸ್ಲಿಮರು ನಡೆಸಿದ

ಅತ್ಯಾಚಾರಗಳ ನಿಜವಾದ ಮತ್ತು ಉತ್ಪ್ರೇಕ್ಷೆಯ ಕಥೆಗಳನ್ನು ಹೇಳುತ್ತ ದಿಲ್ಲಿಯ ಮುಸ್ಲಿಮರ ಮೇಲೆ ಸೇಡಿನ ಕ್ರಮಗಳನ್ನು ಕೈಕೊಳ್ಳಲು ಉತ್ತೇಜನವೀಯುತ್ತಿದ್ದರು; ಅಂಥ ಕ್ರಮಗಳಲ್ಲಿ ಉತ್ಸಾಹದಿಂದ ಭಾಗವಹಿಸುತ್ತಿದ್ದರು. ಬೀದಿಬೀದಿಗಳಲ್ಲಿ ಮೃತ್ಯುವಿನ ತಾಂಡವ ನಡೆದಿತ್ತು. ಯಾರ ಜೀವನದ ನೆಚ್ಚಿಗೆಯೂ ಇರಲಿಲ್ಲ.

ಹುಚ್ಚೆದ್ದ ಜನರ ಮತ್ತು ಸತ್ತವರ ಈ ನಗರದಲ್ಲಿ ಮಹಾತ್ಮಾ ಗಾಂಧಿಯವರು ಶಾಂತಿ ಮತ್ತು ಪ್ರೇಮಗಳ ತತ್ವವನ್ನು ಪ್ರಚಾರ ಮಾಡಲು ಯತ್ನಿಸಿದರು. ಜನರ ಕುದಿಯುತ್ತಿದ್ದ ದ್ವೇಷದ ಮಹಾ ಪ್ರವಾಹಕ್ಕೆ ಅಡ್ಡವಾಗಿ ನಿಂತು ಧೃಡ ನಿರ್ಧಾರದಿಂದ, ಶಾಂತ ಚಿತ್ತದಿಂದ, ಸ್ಥೈರ್ಯದಿಂದ ಮಾತಾಡಿದರು: ''ಮುಸ್ಲಿಮರು ನಗರವನ್ನು ಬಿಟ್ಟು ಹೋಗಕೂಡದು; ಅವರನ್ನು ಹಿಂಸಿಸಿದ ಹಿಂದು ಮತ್ತು ಶೀಖರು ತಮ್ಮ ಧರ್ಮಕ್ಕೆ ಕಲಂಕ ತಂದುದಲ್ಲದೆ ಭಾರತಕ್ಕೆ ತುಂಬಿ ಬರಲಾರದ ಹಾನಿಯನ್ನುಂಟುಮಾಡಿರುವರು; ಶಸ್ತ್ರಾಸ್ತ್ರಗಳನ್ನಿಟ್ಟುಕೊಂಡಿರುವವರು ಅವನ್ನು ತಂದು ನನಗೊಪ್ಪಿಸಬೇಕು; ಅಷ್ಟಿಷ್ಟು ಶಸ್ತ್ರಾಸ್ತ್ರಗಳನ್ನು ಜನ ತಾವಾಗಿಯೆ ತಂದು ನನಗೊಪ್ಪಿಸುತ್ತಿದ್ದಾರೆ.'' ಕಠೋರ ಶಿಸ್ತಿನ, ಕಡುಮುಸ್ಲಿಂ ವಿರೋಧಿಯಾದ, ಸೈನಿಕ ಸ್ವರೂಪದ ಸಂಸ್ಥೆಯಾದ ರಾಷ್ಟ್ರೀಯ ಸ್ವಯಂಸೇವಕ ಸಂಘದ ೫೦೦ ಜನರ ಸಭೆಗೆ ಹೋಗುವ ಸಾಹಸವನ್ನು ಅವರು ಮಾಡಿ, "ನಿಮ್ಮ ಅಸಹನೆಯಿಂದ ನೀವು ಹಿಂದು ಧರ್ಮವನ್ನು ಕೊಲ್ಲುವಿರಿ. ಪಾಕಿಸ್ತಾನದಲ್ಲಿ ಅತ್ಯಾಚಾರವಾಯಿತೆಂದ ಮಾತ್ರಕ್ಕೆ ಹಿಂದುಗಳ ಅತ್ಯಾಚಾರ ಸಮರ್ಥನೀಯವಾಗುವದಿಲ್ಲ. ಕೇಡಿಗೆ ಪ್ರತಿಯಾಗಿ ಕೇಡನ್ನುಂಟುಮಾಡುವದರಿಂದ ಲಾಭವಿಲ್ಲ," ಎಂದು ಹೇಳಿದರು. "ನಾನು ಮುಸ್ಲಿಮರ ಸ್ನೇಹಿತನು ನಿಜ, ಅದರಂತೆ ಹಿಂದುಗಳ ಮತ್ತು ಶೀಖರ ಸ್ನೇಹಿತನೂ ಅಹುದು. ಎರಡೂ ಕಡೆಗಳವರ ತಲೆ ಕೆಟ್ಟಂತೆ ಕಾಣಿಸುತ್ತಿದೆ."

ತಮ್ಮ ಭಾಷಣ ಮುಗಿಸಿ ಅವರು ತಮಗೆ ಯಾರು ಬೇಕಾದವರು ಪ್ರಶ್ನೆಗಳನ್ನು ಕೇಳಬಹುದೆಂದರು. "ದುಷ್ಕೃತ್ಯ ಮಾಡಿದವನನ್ನು ಕೊಲ್ಲಲು ಹಿಂದು ಧರ್ಮ ಅಪ್ಪಣೆ ಕೊಡುವದೇ?" ಎಂದೊಬ್ಬ ಆರ್. ಎಸ್. ಎಸ್. ಸದಸ್ಯ ಕೇಳಿದ.

"ಸ್ವತಃ ದುಷ್ಕೃತ್ಯ ಮಾಡುವವನು ಇನ್ನೊಬ್ಬ ದುಷ್ಕರ್ಮಿಯನ್ನು ಶಿಕ್ಷಿಸಲಾರ," ಗಾಂಧೀಜಿ ಉತ್ತರವಿತ್ತರು.

ಗಾಂಧೀಜಿ ದಿನವಿಡೀ ನಗರದಲ್ಲಿ ಅಲ್ಲಿಂದಿಲ್ಲಿಗೆ ಅಡ್ಡಾಡುತ್ತಿದ್ದರು. ರಕ್ತಪಿಪಾಸಿತ ಜನರು ಗುಂಪು ಕೂಡುತ್ತಿದ್ದಾರೆಂಬ ಸುದ್ದಿ ಬಂದೊಡನೆ ಆ ಸ್ಥಳಕ್ಕೆ ಧಾವಿಸುತ್ತಿದ್ದರು. ಮುಗುಳ್ನಗೆ ಸೂಸುತ್ತ, ಪರಂಪರಾಗತ ಪದ್ಧತಿಯಲ್ಲಿ ಕೈ ಜೋಡಿಸಿಕೊಂಡು ಗಾಂಧೀಜಿ ಕಿಕ್ಕಿರಿದ ಜನಸಮೂಹದ ನಡುವೆ ನಡೆದಾಗ ಪ್ರಕ್ಷುಬ್ಧವಾಗಿದ್ದ ಆ ಮಾನವಸಾಗರವು ಇಬ್ಭಾಗವಾಗುತ್ತಿತ್ತು. ಕೋಪದ ತೆರೆಗಳು ಕರಗಿಹೋಗುತ್ತಿದ್ದವು. ಗಡ್ಡ ರುಮಾಲಗಳ ೧ ಲಕ್ಷ ಶೀಖರ ಮತ್ತು ಅವರ ಕುಟುಂಬದವರ ಸಮಾರಂಭವೊಂದಕ್ಕೆ ಹೋಗಿ ಅವರು ಮುಸ್ಲಿಮರ ಮೇಲೆ ಎಸಗುತ್ತಿದ್ದ ಅತ್ಯಾಚಾರಗಳನ್ನು ಖಂಡಿಸಿದರು. ಶೀಖರು ಕುಡಿದು ದಂಗೆ ಹಾಕುತ್ತಿದ್ದಾರೆ ಎಂದವರು ಆರೋಪಿಸಿದರು. ''ನಿಮ್ಮ ಹೃದಯಗಳನ್ನು ಪವಿತ್ರವಾಗಿಸಿಕೊಳ್ಳಿ. ಅಂದರೆ ಎಲ್ಲ ಜಾತಿಗಳವರೂ ನಿಮ್ಮನ್ನನುಸರಿಸಿ ಬರುತ್ತಾರೆಂದು ನಿಮಗೆ ಕಂಡುಬರುವದು." ಪ್ರಾರ್ಥನಾ ಸಭೆಗಳಲ್ಲಿ ನಿರಾಶ್ರಿತರಿಗಾಗಿ ಕಂಬಳಿಗಳನ್ನು ಕೊಳ್ಳಲು ಅವರು ಹಣ ಕೂಡಿಸಿದರು. ನಿರಾಶ್ರಿತ ಶಿಬಿರಗಳಿಗೆ ಹೋಗಿ ಅಲ್ಲಿರುವವರಿಗೆ ನೂಲಲು ಮತ್ತು ತಮ್ಮ ವಸತಿಗಳನ್ನು ಸ್ವಚ್ಛವಾಗಿಟ್ಟುಕೊಳ್ಳಲು ಅವರು ಹೇಳಿದರು. ಪ್ರತಿನಿತ್ಯ ಸಂಜೆ ಅವರು ಹೆಚ್ಚಾಗಿ ಹಿಂದುಗಳೇ ಕೂಡಿರುತ್ತಿದ್ದ ತಮ್ಮ ಪ್ರಾರ್ಥನಾಸಭೆಯಲ್ಲಿ 'ಕುರಾನ್'ದ ಶ್ಲೋಕಗಳನ್ನು ಓದಲು ಯಾರದಾದರೂ ಆಕ್ಷೇಪವಿದೆಯೆ? ಎಂದು ಕೇಳುತ್ತಿದ್ದರು. ಸಾಮಾನ್ಯವಾಗಿ ಇಬ್ಬರು ಮೂವರ ಆಕ್ಷೇಪವಿದ್ದೇ ಇರುತ್ತಿತ್ತು. ಆಕ್ಷೇಪ

ವಿರುವವರು ಶ್ಲೋಕಗಳನ್ನು ಓದುವಾಗ ಶಾಂತರಾಗಿ ಕುಳಿತಿರುವರೇ? ಎಂದು ನಂತರ ಗಾಂಧೀಜಿ ಕೇಳುತ್ತಿದ್ದರು. ಹೌದು. ಅವರು ಕೂಡ್ರಲು ಒಪ್ಪುತ್ತಿದ್ದರು. ಕೂಡಿದವರಲ್ಲಿ ಹೆಚ್ಚಿನವರು ಈ ಆಕ್ಷೇಪವೆತ್ತಿದವರ ಮೇಲೆ ರೋಷಗೊಳ್ಳುವದಿಲ್ಲವೇ? ಇಲ್ಲವೆಂಬ ಉತ್ತರ ಬರುತ್ತಿತ್ತು. ಇಷ್ಟಾದ ಮೇಲೆ ಗಾಂಧೀಜಿ ಕುರಾನದ ಶ್ಲೋಕಗಳನ್ನು ಓದುತ್ತಿದ್ದರು. ಇದು ಶಿಸ್ತು ಮತ್ತು ಸಹನೆಗಳ ಜೀವಂತ ಪಾಠವಾಗಿದ್ದಿತು. ಪ್ರತಿಯೊಬ್ಬನೂ ಉಳಿದ ಪ್ರತಿಯೊಬ್ಬನ ಅಭಿಪ್ರಾಯಕ್ಕೆ ಒಪ್ಪಿಕೊಳ್ಳುವದು ಸಾಧ್ಯವಿರಲಿಲ್ಲ. ಆದರೂ ಭಿನ್ನಾಭಿಪ್ರಾಯವಿದ್ದರೂ ಅವರು ಹಿಂಸೆಗೆಳಸದೆ ಶಾಂತರಾಗಿರುವದು ಸಾಧ್ಯವಿದೆಯೆಂದು ಅವರು ಉಪದೇಶಿಸಿದರು.

ಪಂಜಾಬ ಮತ್ತು ಪಾಕಿಸ್ತಾನಗಳಿಗೆ ಹೋಗಿ ಅಲ್ಲಿಯ ಜನರನ್ನು ಸಂತಯಿಸಬೇಕೆಂದು ಗಾಂಧೀಜಿ ಬಯಸಿದ್ದರು. ಪಾಕಿಸ್ತಾನ ಸಂಚಾರದ ವಿಚಾರಕ್ಕೆ ಆಗಲೇ ಮೂರ್ತಸ್ವರೂಪ ಬರತೊಡಗಿತ್ತು. ಆದರೆ ಅವರು ದಿಲ್ಲಿಯನ್ನು ಬಿಟ್ಟು ಹೋಗಲು ಹಿಂಜರಿದರು. ಆಗಾಗ ಹಿಂಸಾಕೃತ್ಯಗಳು ನಡೆದೇ ಇದ್ದವು. ಮುಸ್ಲಿಂ ಅಂಗಡಿಕಾರನೊಬ್ಬನು ಪರಿಸ್ಥಿತಿ ಶಾಂತವಾಗಿದೆಯೆಂದು ಬಗೆದು ಅಂಗಡಿಯ ಬಾಗಿಲನ್ನು ತೆರೆದಾಗ, ಬಂದೂಕಿನ ಗುಂಡೊಂದು ಅವನನ್ನು ಭೂಮಿಗೊರಗಿಸಿತು. ನಗರದ ಅನೇಕ ಭಾಗಗಳಲ್ಲಿ ಬಹಿರಂಗವಾಗಿ ಅಡ್ಡಾಡುವದು ಮುಸ್ಲಿಮರಿಗೆ ಇನ್ನೂ ಗಂಡಾಂತರದ್ದಾಗಿಯೆ ಇದ್ದಿತು. ಗಾಂಧೀಜಿಗೆ ಮತ್ತೆ ದಂಗೆ ಪ್ರಾರಂಭವಾಗುವ ಲಕ್ಷಣ ಕಾಣಿಸಿತು. ಅವರು ಉಪವಾಸಮಾಡಲು ನಿಶ್ಚಯಿಸಿದರು. "ಈ ವಿಚಾರ ನನಗೆ ಮಿಂಚಿನಂತೆ ಹೊಳೆಯಿತು," ಎಂದೆಂದು ಅವರು ತಮ್ಮ ನಿರ್ಧಾರವನ್ನು ನೆಹರು, ಪಟೇಲ ಅಥವಾ ಡಾಕ್ಟರರ ಸಲಹೆ ಪಡೆಯದೆ ಪ್ರಕಟಿಸಿಬಿಟ್ಟರು.

ಇದೇ ಅವರ ಕೊನೆಯ ಉಪವಾಸವಾಗಿದ್ದಿತು. ಈ ಉಪವಾಸ ಭಾರತೀಯರ ಹೃದಯದಲ್ಲಿ ಒಳ್ಳೆಯತನದ ಪ್ರತಿಬಿಂಬವನ್ನು ಕೊರೆಯಿತು.

ಮಹಾತ್ಮಾ ಗಾಂಧಿಯವರು ತಮ್ಮ ಕೊನೆಯ ಉಪವಾಸವನ್ನು ೧೩-೧-೧೯೪೮ ರಂದು ಮುಂಜಾನೆ ಪ್ರಾರಂಭಿಸಿದರು. ಇದು ಅವಶ್ಯವೆನಿಸಿದರೆ ಆಮರಣವಾಗಬಹುದಾದ ಉಪವಾಸ, ವಿಭಕ್ತವಾದ ಭಾರತದ ಎರಡೂ ಭಾಗಗಳಲ್ಲಿರುವ ಸಕಲ ಹಿಂದು ಮುಸ್ಲಿಮರ ವಿವೇಕ ಜಾಗೃತಿಗಾಗಿ ಮಾಡುತ್ತಿರುವ ಉಪವಾಸ, ಎಂದವರು ಹೇಳಿದರು. "ಪ್ರತಿಯೊಬ್ಬರೂ ಇದಕ್ಕೆ ಪ್ರತಿಕ್ರಿಯೆ ತೋರಿದರೆ ನಾನು ಸುಖಿಯಾಗುವೆನು. ಒಂದು ಪಂಗಡ, ಶೀಖರು ಎನ್ನಿ, ಪ್ರತಿಕ್ರಿಯೆ ತೋರಿದರೆ ಅದೊಂದು ಚಮತ್ಕಾರವೆಂದು ಬಗೆದು ನಾನವರ ನಡುವೆ ವಾಸಿಸುವೆನು" ಎಂದರವರು. "ನಾನು ಸಾಯಬಹುದು ಎಂದು ನನಗೆ ಗೊತ್ತಿದೆ, ಆದರೆ ಭಾರತ, ಹಿಂದು ಧರ್ಮ, ಶೀಖ ಧರ್ಮ, ಇಸ್ಲಾಮ ಧರ್ಮಗಳ ನಾಶವನ್ನು ನಿಸ್ಸಹಾಯವಾಗಿ ನೋಡುವದಕ್ಕಿಂತ ಮರಣ ಬಂದರೆ ನನಗೆ ಅದೊಂದು ವರವಾಗುವದು. ನನ್ನದೆಲ್ಲ ದೇವರ ಕೈಲಿದೆ. ಮಿತ್ರರು ಚಿಂತಿಸಬಾರದು'' ಎಂದು ಗಾಂಧೀಜಿ ಹೇಳಿದರು.

ತಮ್ಮ ಡಾಕ್ಟರರನ್ನು ಅವರು ಧಿಕ್ಕರಿಸಿದರು. ತಮ್ಮ ದೇಹ ಪರೀಕ್ಷೆ ಮಾಡಿಸಿಕೊಳ್ಳುವದು ಅವರಿಗೆ ಬೇಡವಾಗಿತ್ತು. ಉಪ್ಪು ಬೆರೆಸದ ಅಥವಾ ಬೆರೆಸಿದ ನೀರನ್ನಾಗಲಿ, ಲಿಂಬೆ ಹಣ್ಣಿನ ರಸವನ್ನು ಸೇರಿಸಿದ ನೀರನ್ನಾಗಲಿ ಕುಡಿಯಲು ಅವರು ನಿರಾಕರಿಸಿದರು. ಪ್ರತಿನಿತ್ಯ ಅವರ ತೂಕ ಎರಡು ರತ್ತಲುಗಳಷ್ಟು ಕಡಿಮೆಯಾಗತೊಡಗಿತು. ಅವರ ಮೂತ್ರಪಿಂಡದ ಕೆಲಸ ಸರಿಯಾಗಿ ನಡೆಯುತ್ತಿರಲಿಲ್ಲ. ಶಕ್ತಿ ಕ್ಷೀಣಿಸುತ್ತಿತ್ತು. ಆದರೆ ಅವರು ಆ ಬಗ್ಗೆ ಚಿಂತಿಸಲಿಲ್ಲ. "ನನ್ನನ್ನು ದೇವರಿಗೆ ಒಪ್ಪಿಸಿಕೊಂಡಿದ್ದೇನೆ" ಎಂದರು.

ಉಪವಾಸದ ಮೂರನೆಯ ದಿನವದು! ಭಾರತೀಯರು, ವಿದೇಶೀಯರು—ಸಾವಿರಾರು ಜನರ ಸಾಲಿಗೆ ಸಾಲೇ ಬಿರ್ಲಾ ಭವನದ ಪೋರ್ಚಿನ

ಲ್ಲಿದ್ದ ಗಾಂಧೀಜಿಯ ಮಂಚದ ಹತ್ತಡಿ ದೂರ ದಲ್ಲಿ ಅವರ ದರ್ಶನ ಪಡೆಯುತ್ತ ಸಾಗಿತ್ತು. ಗಾಂಧೀಜಿ ಮುದುಡಿಕೊಂಡು ಮಲಗಿದ್ದರು. ಗರ್ಭಸ್ಥ ಶಿಶುವಿನಂತೆ ಮೊಣಕಾಲುಗಳನ್ನು ಮಡಚಿ ಹೊಟ್ಟೆಗೆ ಹತ್ತಿಸಿಕೊಂಡು ಮುಷ್ಟಿಗ ಳನ್ನು ಎದೆಯಕೆಳಗೆ ಇಟ್ಟುಕೊಂಡು ಅವರು ಮಲಗಿದ್ದರು. ದೇಹವನ್ನೂ ತಲೆಯನ್ನೂ ಮುಚ್ಚಿ ಮುಖ ಮಾತ್ರ ಬಿಟ್ಟು ಬಿಳಿ ಖದ್ದರ ಶಾಲನ್ನು ಹೊದಿಸಲಾಗಿತ್ತು. ಅವರ ಕಣ್ಣುಗಳು ಮುಚ್ಚಿ ದ್ದವು. ಅವರು ನಿದ್ದೆಹೋದಂತೆ ಇಲ್ಲವೆ ಅರ್ಧ ಪ್ರಜ್ಞಾವಸ್ಥೆಯಲ್ಲಿದ್ದಂತೆ ತೋರುತ್ತಿತ್ತು. ಅವರ ಮುಖದಮೇಲೆ ತೀವ್ರವಾದ ನೋವಿನ ಛಾಯೆ ಎದ್ದು ಕಾಣಿಸುತ್ತಿತ್ತು. ಹಾಗಿದ್ದರೂ ನಿದ್ದೆಯಲ್ಲಿ ಅಥವಾ ಅರ್ಧಪ್ರಜ್ಞಾವಸ್ಥೆಯಲ್ಲಿ ಕೂಡ ಆ ನೋವಿಗೆ ಏನೋ ದಿವ್ಯತೆ ಪ್ರಾಪ್ತವಾದಂತೆ ಕಂಡುಬರುತ್ತಿತ್ತು. ಅದು ಶ್ರದ್ಧೆಯಿಂದ ದಮನ ಮಾಡಲ್ಪಟ್ಟ ಮತ್ತು ಸೇವಾಭಾವನೆಯಿಂದ ಸಂಯಮಿಸಲ್ಪಟ್ಟ ನೋವಾಗಿದ್ದಿತು. ಅವರು ಸಂಪೂರ್ಣ ಶಾಂತಿಯಿಂದ ಇದ್ದರೆಂದು ಅನಿಸು ತ್ತಿತ್ತು. ಎಚ್ಚರಾದಾಗ ಅವರು ಮುಗುಳ್ನಕ್ಕರು. ಪ್ರಾರ್ಥನಾ ಸಭೆಗೆ ಅವರು ಹೋಗಬಯಸಿದರು. ಆದರೆ ಅವರಿಗೆ ಎದ್ದು ನಿಲ್ಲಲಾಗಲಿಲ್ಲ. ಆದ್ದರಿಂದ ಅವರು ಪ್ರಾರ್ಥನಾ ಸಭೆಯಲ್ಲಿದ್ದ ಧ್ವನಿವಾಹಕ ಯಂತ್ರಕ್ಕೆ ಜೋಡಿಸಲ್ಪಟ್ಟ ಮೈಕ್ರೊಫೋನಿನಲ್ಲಿ ಮಾತನಾಡಿದರು. ಅಖಿಲ ಭಾರತ ಆಕಾಶವಾ ಣಿಯು ಅವರ ಈ ಮಾತುಗಳನ್ನು ರಾಷ್ಟ್ರಕ್ಕೆಲ್ಲ ಬಿತ್ತರಿಸಿತು.

ಕ್ಷೀಣವಾದ ದನಿಯಲ್ಲಿ ಪ್ರಾರಂಭಿಸಿ ಗಾಂಧೀಜಿ ಹೀಗೆ ನುಡಿದರು: "ಎರಡನೆಯವರ ಕೃತಿಗಳ ಬಗ್ಗೆ ಚಿಂತಿಸಬೇಡಿರಿ. ನಮ್ಮಲ್ಲಿಯ ಪ್ರತಿಯೊಬ್ಬನೂ ತನ್ನ ಹೃದಯಕ್ಕೆ ಬೆಳಕು ಹಿಡಿದು ಪರೀಕ್ಷಿಸಿಕೊಳ್ಳಬೇಕು. ತನ್ನ ಹೃದಯ ವನ್ನು ಸಾಧ್ಯವಿದ್ದಮಟ್ಟಿಗೆ ಪರಿಷ್ಕರಿಸಿಕೊಳ್ಳ ಬೇಕು. ಸ್ವಲ್ಪವಾದರೂ ನೀವು ನಿಮ್ಮನ್ನು ಶುದ್ಧೀ ಕರಿಸಿಕೊಂಡರೆ ನೀವು ಭಾರತಕ್ಕೆ ಉಪಕಾರ ಮಾಡುವಿರಿ ಮತ್ತು ನನ್ನ ಉಪವಾಸದ ಅವಧಿ ಯನ್ನು ಕಡಿಮೆ ಮಾಡುವಿರಿ. ಆದರೆ ನೀವು ನನ್ನ ವಿಚಾರವನ್ನೇ ಪ್ರಾಧಾನ್ಯವೆಂದು ತಿಳಿಯಲಾಗದು. ಯಾರೂ ಸಾವನ್ನು ತಪ್ಪಿಸಿಕೊಳ್ಳಲಾರರು. ಅಂದ ಮೇಲೆ ಅದಕ್ಕೆಅಂಜುವದೇಕೆ? ನಿಜವಾಗಿ ಸಾವು ನಮ್ಮನ್ನು ಕಷ್ಟದಿಂದ ವಿಮೋಚಿಸುವ ಮಿತ್ರನೇ ಆಗಿದೆ."

ಮುಂದೆ ಅವರಿಂದ ಮಾತಾಡಲಾಗಲಿಲ್ಲ. ಅವರ ಸಂದೇಶದ ಉಳಿದ ಭಾಗವನ್ನು ಓದಿ ಹೇಳಲಾಯಿತು.

ಉಪವಾಸದ ನಾಲ್ಕನೆಯ ದಿನ "ನೀವು ಬದುಕುಳಿದರೂ ಶಾಶ್ವತವಾದ ವೈಕಲ್ಯದಿಂದ ಬಳಲುವಿರಿ" ಎಂದು ಡಾಕ್ಟರರು ಗಾಂಧೀ ಜಿಗೆ ಎಚ್ಚರಿಕೆಯಿತ್ತರು. ಗಾಂಧೀಜಿ ನೀರನ್ನು ಕುಡಿಯುತ್ತಿರಲಿಲ್ಲ. ಮೂತ್ರವಿಸರ್ಜನೆ ಮಾಡಿ ದಲೂ ಇಲ್ಲ. ಡಾಕ್ಟರರ ಎಚ್ಚರಿಕೆಯ ಮಾತು ಗಳಿಗೆ ಕಿವಿಗೊಡದೆ ಅವರು ಎರಡು ನಿಮಿಷಗಳ ವರೆಗೆ ಮೈಕ್ರೋಫೋನಿನಲ್ಲಿ ಪ್ರಾರ್ಥನಾ ಸಭೆ ಯನ್ನುದ್ದೇಶಿಸಿ ಮಾತನಾಡಿ, "ಉಪವಾಸದ ನಾಲ್ಕನೆಯ ದಿನ ಈ ಸಲದಷ್ಟು ಉತ್ಸಾಹ ನನ್ನಲ್ಲಿ ಯಾವಾಗಲೂ ಇರಲಿಲ್ಲ" ಎಂದು ಹೆಮ್ಮೆಯಿಂದ ಹೇಳಿದರು. ಅವರ ದನಿ ಕೂಡ ಹಿಂದಿನ ದಿನ ಕ್ಕಿಂತ ಬಲವಾಗಿತ್ತು.

ಜನವರಿ ೧೭ ರಂದು ಅವರ ತೂಕ ೧೦೭ ಪೌಂಡಿಗೆ ಸ್ಥಿರವಾಯಿತು. ಮುಸ್ಲಿಮರು ಹಿಂತಿ ರುಗಿ ಬಂದರೆ ಸುರಕ್ಷಿತವಾಗಿ ಇರಬಲ್ಲರೇ ಎಂಬು ದನ್ನು ಖಚಿತಪಡಿಸಿಕೊಂಡು ಬರಲು ಗಾಂಧೀಜಿ ಪ್ಯಾರೇಲಾಲರನ್ನು ನಗರಸಂಚಾರಕ್ಕೆ ಕಳಿಸಿ ದರು. ಮಹಾರಾಜರಿಂದ, ಪಾಕಿಸ್ತಾನದ ಮುಸ್ಲಿ ಮರಿಂದ, ಭಾರತದ ಎಲ್ಲ ಭಾಗಗಳಿಂದ ನೂರಾರು ತಂತಿಗಳು ಬಂದವು. ಗಾಂಧೀಜಿ ಕೃತಜ್ಞತೆ ಸೂಚಿಸಿದರೂ ಒಂದು ಎಚ್ಚರಿಕೆಯಿ ತ್ತರು: "ನನಗೆ ಅತ್ಯಂತ ಪವಿತ್ರವೆಂದೆನಿಸುವ ಈ ಸಂದರ್ಭದಲ್ಲಿ ನನ್ನ ಉಪವಾಸವನ್ನು ಕೊನೆ ಗೊಳಿಸುವ ಉದ್ದೇಶದಿಂದ ನನ್ನಲ್ಲಿ ತಪ್ಪು ಕಲ್ಪನೆ ಹುಟ್ಟುವಂತೆ ಮಾಡಿದರೆ ಈ ರಾಜ-ಮಹಾರಾಜ ರಾಗಲಿ, ಹಿಂದುಗಳಾಗಲಿ, ಶೀಖರಾಗಲಿ ಅಥವಾ

ಇನ್ನಾರೇ ಆಗಲಿ ಭಾರತಕ್ಕೆ ಸೇವೆಯನ್ನೇನೂ ಸಲ್ಲಿಸಿದಂತಾಗುವದಿಲ್ಲ. ಆತ್ಮಶುದ್ಧಿಗಾಗಿ ಉಪವಾಸ ಮಾಡುತ್ತಿರುವ ಕಾಲದಲ್ಲಿ ನಾನು ಸುಖಿಯಾಗಿರುವಷ್ಟು ಮತ್ತಾವ ಕಾಲದಲ್ಲೂ ಆಗಿರುವದಿಲ್ಲ ಎಂಬುದನ್ನು ಇವರು ತಿಳಿದುಕೊಳ್ಳಬೇಕು."

ಜನವರಿ ೧೮ ರಂದು ಗಾಂಧೀಜಿಗೆ ಇನ್ನಿಷ್ಟು ಹಿತವೆನಿಸಿತು. ಮೃದುವಾಗಿ ತಮ್ಮ ಮೈತಿಕ್ಕಲು ಅವರು ಅವಕಾಶವಿತ್ತರು. ಅವರ ತೂಕ ೧೦೭ ಪೌಂಡುಗಳಷ್ಟೆ ಇತ್ತು.

ಮತ್ತೆ, ಅಂದು ಮುಂಜಾನೆ ಒಂದು ನೂರು ಶೀಖ, ಹಿಂದು, ಮುಸ್ಲಿಂ, ಕ್ರಿಶ್ಚನ್ ಮತ್ತು ಯಹೂದಿ ಪ್ರತಿನಿಧಿಗಳು ಮತ್ತು ಸೈನಿಕ ಸ್ವರೂಪದ ಆರ್. ಎಸ್. ಎಸ್. ಸಂಸ್ಥೆಯ ಪ್ರತಿನಿಧಿಗಳು, ಹಿಂದು ಮಹಾಸಭೆಯ ಪ್ರತಿನಿಧಿಗಳು, ಪಾಕಿಸ್ತಾನದ ಹಾಯ ಕಮೀಶನರರು, ನೆಹರು, ರಾಜೇಂದ್ರಪ್ರಸಾದ ಹಾಗೂ ಮೌಲಾನಾ ಆಝಾದರು ಗಾಂಧೀಜಿಯ ಸಮ್ಮುಖದಲ್ಲಿ ಬಂದು ನಿಂತರು. ಇವರೆಲ್ಲ ಮುಸ್ಲಿಮರ ಜೀವಿತ-ವಿತ್ತಗಳ ಮತ್ತು ಧರ್ಮದ ರಕ್ಷಣೆ ಮಾಡುವದಾಗಿ ಲಿಖಿತ ಆಶ್ವಾಸನವಿತ್ತರಲ್ಲದೆ ಮುಸ್ಲಿಮರು ಯಾವ ಸ್ಥಳಗಳಲ್ಲಿ ಅಡ್ಡಾಡಲು ಅಂಜುತ್ತಿದ್ದರೋ ಅಲ್ಲಿ ಅವರಿಗೆ ನಿರ್ಭಯವಾಗಿ ಸಂಚರಿಸಲು ಸಾಧ್ಯವಾಗುವಂತೆ ಮಾಡುವ ಹೊಣೆ ಹೊತ್ತರು. ಮಸೀದೆಗಳನ್ನು ಪುನಃ ಮುಸ್ಲಿಮರ ವಶಕ್ಕೆ ಒಪ್ಪಿಸಿ ಅಲ್ಲಿರುವ ಹಿಂದು ನಿರಾಶ್ರಿತರನ್ನು ಹೊರಗಟ್ಟಿ, ಓಡಿಹೋದ ಅಥವಾ ಅಡಗಿಕೊಂಡ ಮುಸ್ಲಿಂ ವ್ಯವಹಾರಸ್ಥರು ಮತ್ತೆ ತಮ್ಮ ವ್ಯವಹಾರ ಸಾಗಿಸುವಂತೆ ದಾರಿಮಾಡಿಕೊಡುವದಾಗಿ ಹೇಳಿದರು. ಇವೆಲ್ಲವನ್ನೂ ಸೈನ್ಯ ಇಲ್ಲವೆ ಪೋಲೀಸರ ಸಹಾಯವಿಲ್ಲದೆ ಸಾಧಿಸಲಾಗುವದು; ಹೀಗಾಗುವಂತೆ ಜನರೇ ನೋಡಿಕೊಳ್ಳುವರು ಎಂದು ಆಶ್ವಾಸನವಿತ್ತರು. ಇದಕ್ಕೆ ನಿದರ್ಶನವಾಗಿ ಅದಾಗಲೇ ಹಿಂದು-ಮುಸ್ಲಿಂರಲ್ಲಿ ಸ್ನೇಹಸ್ಥಾಪನೆಯಾದ ಹೃದಯಸ್ಪರ್ಶಿ ದೃಶ್ಯಗಳನ್ನು ಉಪವಾಸದಿಂದ ದಣಿದಿದ್ದ ಮಹಾತ್ಮರಿಗೆ ವರ್ಣಿಸಿ ನಿವೇದಿಸಲಾಯಿತು.

ಆಗ, ಅಶಕ್ತರಾಗಿದ್ದರೂ ಉತ್ಸಾಹಿಗಳಾಗಿದ್ದ ಗಾಂಧೀಜಿ ಮಂಚದಮೇಲೆ ಅಡ್ಡಾಗಿದ್ದಂತೆಯೆ ತಲೆಯನ್ನೆತ್ತಿ ಬಂದಿದ್ದವರೊಡನೆ ಮಾತಾಡಿದರು. "ಅಲಹಾಬಾದದಲ್ಲಿ ಅತ್ಯಾಚಾರಗಳಾಗಿರುವ ಸುದ್ದಿ ಪತ್ರಿಕೆಗಳಲ್ಲಿ ಬಂದಿದೆ. ಇಲ್ಲಿ ಹಿಂದು ಮಹಾಸಭೆ ಮತ್ತು ಆರ್ ಎಸ್. ಎಸ್. ದ ಅಧಿಕಾರಿಗಳಿದ್ದಾರೆ. ಈ ಅತ್ಯಾಚಾರಗಳ ಹೊಣೆ ಅವರದೇ ಆಗಿದೆ. ಹಿಂದುಗಳು, ಶೀಖರು ಮತ್ತು ಮುಸ್ಲಿಮರೆಲ್ಲ ಬಂಧುಗಳು ಎಂಬುದನ್ನು ಇಡೀ ಭಾರತಕ್ಕೆ ನೀವು ಮನಗಾಣಿಸಿ ಕೊಡದಿದ್ದರೆ ಅದರಿಂದ ಭಾರತ, ಪಾಕಿಸ್ತಾನಗಳೆರಡಕ್ಕೂ ಕೇಡಿದೆ. ಇವೆರಡೂ ಜಗಳಾಡತೊಡಗಿದರೆ ಏನಾದೀತು?" ಈ ವಿಚಾರದಿಂದ ಅವರ ಹೃದಯ ಕರಗಿಹೋಗಿ ಅವರ ಗುಳಿಬಿದ್ದ ಗಲ್ಲಗಳ ಮೇಲೆ ಕಣ್ಣೀರು ಹರಿಯಿತು. ಅವರೆದುರು ನಿಂತವರು ಅತ್ತರು. ಗಾಂಧೀಜಿಯವರು ಮತ್ತೆ ದುಃಖವನ್ನು ಸಂಯಮಿಸಿಕೊಂಡಾಗ ಅವರ ಧ್ವನಿ ಎರಡನೆಯವರಿಗೆ ಕೇಳದಷ್ಟು ಸಣ್ಣದಾಗಿತ್ತು. ಅವರು ತಮ್ಮ ಮಾತುಗಳನ್ನು ಡಾ. ಸುಶೀಲಾ ನಯ್ಯರರ ಕಿವಿಯಲ್ಲಿ ಉಸುರಿದರು. ಡಾ. ನಯ್ಯರರು ಅದನ್ನು ಗಟ್ಟಿಯಾಗಿ ಉಚ್ಚರಿಸಿದರು. "ನೀವು ನನ್ನನ್ನು ಮೋಸಗೊಳಿಸುತ್ತಿದ್ದಿರಾ? ನೀವು ನನ್ನಜೀವವನ್ನುಳಿಸಲು ಮಾತ್ರಪ್ರಯತ್ನಿಸುತ್ತಿರುವಿರಾ? ನನಗೆ ಪಾಕಿಸ್ತಾನಕ್ಕೆ ಹೋಗಬೇಕಾಗಿದೆ. ಶಾಂತಿಯನ್ನು ಕಾಪಾಡಿಕೊಂಡು ನನಗೆ ಆ ಅವಕಾಶವನ್ನು ಒದಗಿಸಿಕೊಡುವಿರಾ?" ಎಂದು ಗಾಂಧೀಜಿ ಕೇಳಿದರು.

ಕಾಂಗ್ರೆಸ್ಸಿನ ಮುಸ್ಲಿಂ ಧುರೀಣ ಮೌಲಾನಾ ಆಝಾದರು, ಆರ್. ಎಸ್. ಎಸ್. ಧುರೀಣರು, ಪಾಕಿಸ್ತಾನದ ರಾಯಭಾರಿಗಳು ಮತ್ತು ಓರ್ವ ಶೀಖ ಗೃಹಸ್ಥರು ಆಶ್ವಾಸನದ ಬಿನ್ನಹದ ಮಾತುಗಳನ್ನಾಡಿದರು. ಗಾಂಧೀಜಿ ತಮ್ಮ ಮಂಚದ ಮೇಲೆ ಮೌನದಿಂದ, ವಿಚಾರಮಗ್ನರಾಗಿ ಕುಳಿತಿದ್ದರು. ಆ ನಿಮಿಷದಲ್ಲಿ ತಾವು ಸಾಯಬೇಕೇ ಎಂಬುದನ್ನು ಅವರು ನಿರ್ಧರಿಸುತ್ತಿದ್ದರು. ಉಪವಾಸ ಮುರಿಯುವುದಾಗಿ ಅವರು ಸಾರಿದರು.

ಮೊದಲಿಗೆ ಪಾರಸಿ, ನಂತರ ಮುಸ್ಲಿಂ, ಬಳಿಕ ಜಪಾನೀ ಶ್ರುತಿವಾಕ್ಯಗಳನ್ನು ಓದಲಾಯಿತು. ಆ ಮೇಲೆ —

**ಅಸತೋ ಮಾ ಸದ್ಗಮಯ ।**
**ತಮಸೋ ಮಾ ಜ್ಯೋತಿರ್ಗಮಯ ।**
**ಮೃತ್ಯೋರ್ಮಾ ಅಮೃತಂ ಗಮಯ ।**

(ಅಸತ್ಯದಿಂದ ಸತ್ಯದ ಕಡೆಗೆ, ಕತ್ತಲೆಯಿಂದ ಬೆಳಕಿನೆಡೆಗೆ, ಮೃತ್ಯುವಿನಿಂದ ಅಮರತ್ವದ ಕಡೆಗೆ ನನ್ನನ್ನು ಮುನ್ನಡೆಸು) ಎಂಬ ಹಿಂದು ಶ್ಲೋಕವನ್ನು ಪಠಿಸಲಾಯಿತು.

ಅಂದು ಸಂಜೆ ಪ್ರಾರ್ಥನಾಸಭೆಯಲ್ಲಿ ಮಾತನಾಡುತ್ತ ಗಾಂಧೀಜಿ ತಮಗೀಯಲ್ಪಟ್ಟ ವಚನಗಳನ್ನು ಈ ರೀತಿಯಾಗಿ ಅರ್ಥಮಾಡಿ ಹೇಳಿದರು: "ಏನೇ ಆಗಲಿ, ಏನೇ ಬರಲಿ, ಹಿಂದು, ಮುಸ್ಲಿಂ, ಶೀಖ, ಕ್ರಿಶ್ಚನ್, ಯಹೂದಿಗಳಲ್ಲಿ ಎಂದೂ ಭಂಗವಾಗದ ಸಂಪೂರ್ಣವಾದ ಮೈತ್ರಿ ಉಳಿಯುವದು.''

ಲೇಕ ಸಕ್ಸೆಸದಲ್ಲಿ ಸಂಯುಕ್ತರಾಷ್ಟ್ರ ಸಂಘದ ಭದ್ರತಾ ಮಂಡಳದಲ್ಲಿ ಪಾಕಿಸ್ತಾನದ ವಿದೇಶ ಮಂತ್ರಿ ಸರ್ ಮಹಮ್ಮದ ಝಾಫರುಲ್ಲಾ ಖಾನರು, "ಗಾಂಧೀಜಿಯವರ ಈ ಉಪವಾಸದಿಂದ ಭಾರತ-ಪಾಕಿಸ್ತಾನಗಳಲ್ಲಿ ನೂತನ ಸ್ನೇಹ ಸೌಹಾರ್ದಗಳ ಭಾವತರಂಗಗಳು ಉಕ್ಕಿ ಹರಿಯತೊಡಗಿವೆ" ಎಂದರು. ನಿಜವಾಗಿಯೂ ಗಾಂಧೀಜಿ ಅದ್ಭುತ ಮಾಂತ್ರಿಕರೇ. ರಾಜಕಾರಣಿಗಳು ಮತ್ತೆ ಕೈವಾಡ ನಡೆಸಿರದಿದ್ದರೆ ಈ ಮಂತ್ರದ ಅದ್ಭುತ ಪ್ರಭಾವ ಅಚ್ಚಳಿಯದೆ ಉಳಿಯಬಹುದಿತ್ತೇನೋ!

ಉಪವಾಸ ಮುಕ್ತಾಯದಿಂದ ಗಾಂಧೀಜಿಯವರ ಸಹಜ ಉಲ್ಲಸಿತ ವೃತ್ತಿ ಪುನಃ ತಲೆದೋರಿತು. ಅವರು ಮತ್ತೆ ಉತ್ಸಾಹದಿಂದ ಕಾರ್ಯಪ್ರವೃತ್ತರಾದರು. ಅಂಜಿಕೆ-ಅಳುಕುಗಳಿಲ್ಲದೆ ಅವರು ಮೃತ್ಯುವನ್ನೆದುರಿಸಿದ್ದರಿಂದ ಅವರಿಗೆ ಆಯುರ್ವೃದ್ಧಿಯಾದಂತೆ ತೋರಿತು.

---

## ಗಾಂಧೀಜಿಯ ನುಡಿಮುತ್ತು

ನನ್ನ ಮನೆಯನ್ನು ಸುತ್ತಲೂ ಗೋಡೆಗಳಿಂದ ಭದ್ರಪಡಿಸಿ ಕಿಡಕಿಗಳನ್ನು ಮುಚ್ಚಿಡಲು ನಾನೊಲ್ಲೆ. ಸಕಲ ದೇಶಗಳ ಸಂಸ್ಕೃತಿಯ ಗಾಳಿಯೂ ನನ್ನ ಮನೆಯ ಸುತ್ತ ಬೀಸುತ್ತಿರಲಿ. ಆದರೆ ನನ್ನನ್ನು ಕಾಲು ತಪ್ಪಿಸಿ ಹಾರಿಸಿಬಿಡಲು ಯಾವ ಗಾಳಿಗೂ ನಾನು ಅನುವು ಕೊಡಲಾರೆ. ನನ್ನ ಧರ್ಮ ಕಾರಾಗೃಹದ ಧರ್ಮವಲ್ಲ. ಅದರಲ್ಲಿ ದೇವಸೃಷ್ಟಿಯ ಅತಿ ಕ್ಷುಲ್ಲಕ ಪ್ರಾಣಿಗೂ ಸ್ಥಳವಿದೆ. ಆದರೆ ವರ್ಣದ, ಧರ್ಮದ ಅಥವಾ ಕುಲದ ದುರಹಂಕಾರಕ್ಕೆ ಮಾತ್ರ ಅಲ್ಲಿ ಆಶ್ರಯವಿಲ್ಲ.

—ಮಹಾತ್ಮಾ ಗಾಂಧಿ

ಈ ಸಲ ಭಾರತೀಯ ಸಾಹಿತ್ಯ ಅಕಾದಮಿಯ ಬಹುಮಾನ ಪಡೆದ ಕನ್ನಡ ಸಾಹಿತಿಯ ವ್ಯಕ್ತಿತ್ವ ಮತ್ತು ಸಾಧನೆಯ ಪರಿಚಯ

# ಡಾ. ರಂಗನಾಥ ಮುಗಳಿ

ಒಮ್ಮೆ ಪ್ರೊ. ಮುಗಳಿಯವರು ಒಂದೂರಿಗೆ ಉಪನ್ಯಾಸಕ್ಕೆ ಹೋಗಬೇಕಾಗಿತ್ತು. ಹೊಳೆದಾಟಿ ಆ ಊರನ್ನು ಸೇರಬೇಕಾಗಿತ್ತು. ದಾರಿಯಲ್ಲಿಯೇ ಮುಗಳಿಯವರಿಗೆ ಸುದ್ದಿ ದೊರೆಯಿತು. ಎಲ್ಲಿಯೋ ದೊಡ್ಡ ಮಳೆಯು ಇಗಿ ಹೊಳೆ ತುಂಬಿ ಬಂದಿದೆ ಎಂದು. ಸುಮ್ಮನೆ ಏಕೆ ಹೋಗಬೇಕೆಂದು ಕೆಲವರು ವಾದವನ್ನೂ ಹಾಕಿದರು ಆದರೆ ಮುಗಳಿಯವರು ಕೇಳಲಿಲ್ಲ ಹೊಳೆ ದಂಡೆಯ ತನಕ ಹೋದರು. ದಾಟಲುಅಸಾಧ್ಯವಾಗುವಂತೆ ನೀರು ತುಂಬಿ ಹರಿಯುತ್ತಿತ್ತು. ಮುಗಳಿಯವರು ಈಚೆಯ ದಂಡೆಗೆ, ಇವರನ್ನು ಕರೆಸಿದವರು ಆಚೆಯ ದಂಡೆಗೆ. ಮುಗಳಿಯವರು ತಾವು ಇದ್ದಲ್ಲಿಂದಲೇ ಕೂಗಿ ತಾವು ಬಂದ ಸಂಗತಿಯನ್ನು ಅವರಿಗೆ ತಿಳಿಸಿದರು !




ಮೊದಲಿನಿಂದ ಇಲ್ಲಿಯ ವರೆಗೂ ಈ ಕರ್ತವ್ಯ ಪ್ರಜ್ಞೆ ಮುಗಳಿಯವರ ಸ್ವಭಾವದ ತಿರುಳಾಗಿ ಬಂದಿದೆ. ಸಾಹಿತಿಗಳೆಲ್ಲರೂ ವಿಕ್ಷಿಪ್ತರು, ಕಾಲಾತೀತರು ಎಂಬ ವಾಸ್ತವ ಸತ್ಯಕ್ಕೆ ಅಪವಾದವಾಗಿದ್ದಾರೆ ಅವರು. ಊಟ ಉಡಿಗೆ,ನಿದ್ದೆ, ವಾಕಿಂಗು ಅಭ್ಯಾಸ, ವೃತ್ತಿ. ಹೊರಗಿನ ಕಾರ್ಯಕ್ರಮ :ಎಲ್ಲದರಲ್ಲಿ ನಿಯಮಿತತನವನ್ನು ಅವರು ಕಾಪಾಡಿಕೊಂಡು ಬಂದಿದ್ದಾರೆ. ಆದರೆ ಅದು ಯಾಂತ್ರಿಕವಾಗಿಲ್ಲ; ಗಡಿಯಾರದ ನೀರಸತೆಯಾಗಲಿ,ಸರಕಾರಿ ವಾರಂಟಿನ ನಿಷ್ಠುರತೆಯಾಗಲಿ ಅದಕ್ಕಿಲ್ಲ. ಅದಕ್ಕೆ ಅವರು ರಸಿಕತೆಯ, ಕಲೆಯ ಬಣ್ಣ ಕೊಟ್ಟಿದ್ದಾರೆ ಅವರ ಬಾಳಿನ ಓರಣದಲ್ಲಿ, ಅಚ್ಚುಕಟ್ಟುತನದಲ್ಲಿ ಆಳವಾದ ತಿಳಿವಳಿಕೆ ಇದೆ; ಅಂತಃಕರಣದ ಕೋಮಲತೆ ಇದೆ; ಕವಿಯ ವಿಶಾಲ ದರ್ಶನವಿದೆ.

ಅಂದವಾಗಿ ಹಿಕ್ಕಿದ ಕ್ರಾಪು, ಸೌಜನ್ಯದ ಎರಕವಾದ ಮುಖ, ಹೊಳೆಯುವ ಕಣ್ಣುಗಳು, ನೋಡುವವರಲ್ಲಿ ಆತ್ಮವಿಶ್ವಾಸವನ್ನು ಹುಟ್ಟಿಸುವ, ನಾನೂ ನಿಮ್ಮವ ಎಂಬ ಭಾವನೆಯನ್ನು ಹುಟ್ಟಿ

ಸುವ ಮುಗುಳುನಗೆ - ಮುಗಳಿಯವರ ಈ ಬಾಹ್ಯ ರೂಪ ಅವರ ಅಂತರಂಗದ ಸೌಂದರ್ಯಕ್ಕೆ ಪ್ರತೀಕವಾಗಿದೆ. ಅವರ ವೇಷ ಭೂಷೆಗಳಲ್ಲಿ ಕೂಡ ಅವರ ಜೀವನದ ರೀತಿಯನ್ನು ಸಹಜವಾಗಿ ಗುರುತಿಸಬಹುದು. ಜೀವನದ ಋಜು ಮಾರ್ಗದಲ್ಲಿ, ಆದರ್ಶದ ಉತ್ತಮಿಕೆಯಲ್ಲಿ ದೃಢವಾದ ನಂಬಿಕೆಯನ್ನು ಇಟ್ಟುಕೊಂಡು ಜೀವನ ನಡೆಸಿದ ಅವರು, ಅದರ ಹೊರ ಆವರಣ, ಆ ನಂಬಿಕೆ ಶ್ರದ್ಧೆಗಳನ್ನು ಪ್ರತಿಫಲಿಸುವಂತೆ ಕಾಪಾಡಿಕೊಂಡಿದ್ದಾರೆ. ಸುತ್ತುಮುತ್ತಲಿನ ಓರೆಕೋರೆಗಳನ್ನು, ಕುಂದುಕೊರತೆಗಳನ್ನು, ವಿರಸಗಳನ್ನು ರಸಿಕತೆಯ ಬೆಳಕಿನಲ್ಲಿ ನೋಡಿ ನಿವಾರಿಸಿದ್ದಾರೆ. ಹಲವಾರು ದುಃಖ ಸಂಕಟಗಳನ್ನು ಅನುಭವಿಸಿ, ನೋವು ನಲಿವುಗಳನ್ನುಂಡು, ಚೆಲುವು ಒಲವುಗಳನ್ನರಿತು, ಆ ಜೀವ ಒಂದು ಹದಕ್ಕೆ ಬಂದಿದೆ. ಇಟ್ಟ ಪ್ರತಿಯೊಂದು ಹೆಜ್ಜೆ ಉತ್ತಮಿಕೆಯ ಕಡೆಗಿರಬೇಕೆಂಬ ತಿಳಿವಳಿಕೆ ಅವರಲ್ಲಿ ಸದಾ ಜಾಗೃತವಾಗಿರುತ್ತದೆ. ದುಃಖದ ಅನಿವಾರ್ಯತೆಯ ಬಗ್ಗೆ, ವಿಧಿಯ ನಿಷ್ಠುರ ಶಾಸನದೆದುರಿಗೆ ಅವರೆಂದೂ ರೋಸಿಕೊಂಡಿಲ್ಲ. ಅಪಾರವಾದ ಸಹನೆ ಯಾವಾಗಲೂ ಅವರ ಸ್ವಭಾವದ ಬೆನ್ನೆಲುಬಾಗಿದೆ. ಇದು ಸಂಸ್ಕೃತಿಯಲ್ಲದೆ ಮತ್ತೇನು ? ಮೊದಲಿನಿಂದಲೂ ಬುದ್ಧಿವಂತಿಕೆ ಇವರಿಗೆ ದೈವದತ್ತವಾದ ವರ. ಆದರೂ ಅದಕ್ಕೆ ಅಭ್ಯಾಸ ಹಾಗೂ ಸತತ ಪ್ರಯತ್ನಗಳ ಜೋಡು ಕೊಟ್ಟಿದ್ದಾರೆ. ಬುದ್ಧಿಗೂ ಅಂತಃಕರಣಕ್ಕೂ ಯಾವಾಗಲೂ ಆಜನ್ಮ ವೈರವಿದ್ದದ್ದನ್ನು ನಾವು ಜಗತ್ತಿನಲ್ಲಿ ಕಾಣುತ್ತೇವೆ. ಆದರೆ ಮುಗಳಿಯವರು ಎರಡನ್ನೂ ಮೇಳವಿಸಿಕೊಂಡು ಬಂದಿದ್ದಾರೆ.

ಮುಗಳಿಯವರು ಹೆಸರಾದ ಪ್ರೊಫೆಸರರು. ಉತ್ತರ ಕರ್ನಾಟಕದಲ್ಲಿ ಕನ್ನಡ ಸಾಹಿತ್ಯವನ್ನು ನೀರು ಕುಡಿದಂತೆ ಕಲಿಸಬಲ್ಲ ಕೆಲವೇ ಪ್ರೊಫೆಸರರಲ್ಲಿ ಅವರೊಬ್ಬರು. ಯಾವ ಕವಿಯ ಬಗ್ಗೆ ಹೇಳಲಿ, ಶ್ರದ್ಧೆಯಿಂದ, ಉತ್ಸಾಹದಿಂದ, ಪಾಠ ಹೇಳಿ ವಿದ್ಯಾರ್ಥಿಗಳ ಹೃದಯದಲ್ಲಿ ಮರೆಯಲಾರದ ಪರಿಣಾಮವನ್ನು ಮಾಡಬಲ್ಲ ರಹಸ್ಯ ಅವರಿಗೇ ಗೊತ್ತು. ವ್ಯಾಕರಣದಂತಹ ಕಠಿಣ ವಿಷಯವನ್ನೂ ಕಾವ್ಯಮಯವಾಗಿ ಹೇಳಬಲ್ಲರು. ಅವರ ವಿದ್ಯಾರ್ಥಿಗಳು ಇಂದು ನಾಡಿನ ತುಂಬ ಕಾಣಸಿಗುತ್ತಾರೆ. ಅವರಲ್ಲಿ ಎಷ್ಟೋ ಜನ ಗಣ್ಯ ವಿದ್ವಾಂಸರಾಗಿದ್ದಾರೆ. ಕೇವಲ ಕಲಿಸುವದಷ್ಟೇ ಪ್ರೊಫೆಸರನ ಉದ್ಯೋಗ ಎಂದು ಅವರೆಂದೂ ತಿಳಿದುಕೊಂಡಿಲ್ಲ. ಎಷ್ಟೋ ವಿದ್ಯಾರ್ಥಿಗಳಿಗೆ ಸಹಾಯ ಮಾಡಿದ್ದಾರೆ; ನಿರಾಶೆಯಿಂದ ಆರ್ತರಾದವರನ್ನು ಹತ್ತಿರ ಕರೆದು, ಮೈದಡವಿ ಆಸೆಯ ಬೆಳಕನ್ನು ನೀಡಿದ್ದಾರೆ; ಪ್ರೋತ್ಸಾಹವನ್ನು ಕೊಟ್ಟು ಮುಂದೆ ನಡೆಯುವಂತೆ ಪ್ರೇರಿಸಿದ್ದಾರೆ. ಅವರ ಪ್ರತಿಭೆಯಂತೆ ಅವರ ಜೀವನವೂ ವಿದ್ಯಾರ್ಥಿಗಳಿಗೆ ಆದರ್ಶಪ್ರಾಯವಾಗಿದೆ.

ಮುಗಳಿಯವರ ವಾಗ್ಮಿತೆ ನಾಡಿಗೇ ಗೊತ್ತಿದ್ದ ವಿಷಯ. ದನಿ ಎತ್ತರವೂ ಅಲ್ಲ, ಅಶ್ರುತವಾಗುವಷ್ಟು ಮೆಲ್ಲಗೂ ಅಲ್ಲ; ವೀಣೆಯ ನಾದದಂತೆ ಮಧುರವಾಗಿದೆ. ಪ್ರಾರಂಭ, ಬೆಳವಣಿಗೆ, ಮುಕ್ತಾಯ ಇವೆಲ್ಲವುಗಳಲ್ಲಿಯೂ ಸಮಾಧಾನ, ಸರಸತೆ, ಅಲ್ಲಲ್ಲಿ ಮೃದುವಾದ ವಿನೋದ ಹಾಸುಹೊಕ್ಕಾಗಿ ಬರುತ್ತವೆ. ಮುಗಳಿಯವರು ಭಾಷಣ ಮಾಡುತ್ತಿರುವಾಗ ಅವರಿಗಷ್ಟೇ ಅಲ್ಲ, ಕೇಳುವವರಿಗೂ ಆತುರವಿರಲಾರದು. ಅವರ ಶೈಲಿ ಕ್ಷಣಕ್ಕೊಂದು ವಿಚಿತ್ರವನ್ನು ತೋರಿಸುವ ಮೇಘಮಾಲೆಯಲ್ಲ; ಕಣ್ಣು ಕುಕ್ಕಿಸಿ ಸೋಜಿಗವನ್ನುಂಟುಮಾಡುವ ಮಿಂಚೂ ಅಲ್ಲ, ಹುಣ್ಣಿವೆಯ ಬೆಳದಿಂಗಳಿನಂತೆ ಶಾಂತವಾಗಿ ಕಣ್ಣಿಗೆ ಮನಸ್ಸಿಗೆ ತಂಪನ್ನುಂಟುಮಾಡುತ್ತದೆ. ಭಾಷಣ ಮುಗಿದ ಮೇಲೆ ಅವರು ಹಾಡುವ ಅವರ ಕವಿತೆಗಳು, ಸಂಪಿಗೆಯ ಸುವಾಸನೆಯಂತೆ ಬಹುಕಾಲ ಮನಸ್ಸಿನಲ್ಲಿ ಉಳಿಯುತ್ತವೆ.

ಮುಗಳಿಯವರ ಈ ಸುಕುಮಾರ ವ್ಯಕ್ತಿತ್ವದ ಮುದ್ರೆ ಬಹುಶಃ ಅವರ ಎಲ್ಲ ಕೃತಿಗಳ ಮೇಲೆ ಬಿದ್ದಿದೆ. ಸಾಹಿತ್ಯ ಜನಜೀವನದ ಪ್ರತಿಬಿಂಬವೇ ಆದರೂ ಪ್ರತಿಯೊಬ್ಬ ಲೇಖಕ ಜೀವನವನು ತನ್ನದೇ ವಿಶಿಷ್ಟವಾದ ದೃಷ್ಟಿಯಿಂದ ನೋಡಿ

ತಿಳಿದು, ಅನುಭವಿಸಿ ನಿರೂಪಿಸುತ್ತಾನೆ. ಮುಗಳಿಯವರ ಜೀವನದಲ್ಲಿ ಅನೇಕ ವಿರಸಗಳ ಸೆಕೆ ಬಡಿದಿದೆ. ಆದರೆ ಅದನ್ನೆಲ್ಲ ಅತ್ಯಂತ ತಾಳ್ಮೆಯಿಂದ ಸಹಿಸಿ ಅವರು ಮುಂದೆ ನಡೆದಿದ್ದಾರೆ. ಕಗ್ಗಲ್ಲಿನಲ್ಲಿಯೂ ಚಲುವಿನೆರಕದ ಪ್ರತಿಮೆಯನ್ನು ಮೂಡಿಸುವ ಸಾಹಸಕಾರ್ಯವನ್ನು ಅವರು ಮಾಡಿದ್ದಾರೆ. ಅಂತಲೇ ಅವರ ಸಾಹಿತ್ಯ ಅವರ ಜೀವನದುಸಿರಾಗಿದೆ; ಕಣ್ಣುಕಾಣಿಕೆಯಾಗಿದೆ; ಎದೆಯ ಮೊರೆಯಾಗಿದೆ; ಪ್ರತಿಭೆ ಗೈದ ಜೀವನ ವಿಮರ್ಶೆಯಾಗಿದೆ. 'ಅಪಾರ ಕರುಣೆ', 'ಚಾತಕ ವ್ರತ', 'ಹೊಸಗಾಲದ ನವಿಲು', 'ಬಂದೆಯಾ ಬೆಳುದಿಂಗಳೇ', 'ಓಂ ಅಶಾಂತಿ', 'ಕಾರಣಪುರುಷ' ಮೊದಲಾದ ಕವಿತೆಗಳು ಅವರ ಭಾವಕೋಮಲತೆಗೆ, ಮೃದುಸಂಸ್ಕಾರಕ್ಕೆ, ರಸದರ್ಶನಕ್ಕೆ ನಿತ್ಯ ಸಾಕ್ಷಿಗಳಾಗಿವೆ. ಕನ್ನಡ ಕಾವ್ಯದ ನವೋದಯದ ಕಾಲದಲ್ಲಿ ಅರಳಿಬಂದ ಅವರ ಗೀತಗಳು ನಾಡಿಗೆ ಎಂದೂ ಮರೆಯಲಾರದ ಕಾಣಿಕೆಗಳಾಗಿವೆ. ಇದೂ ಅಲ್ಲದೆ ಮುಗಳಿಯವರ ಕೃತಿಗಳ ವಿಸ್ತಾರ ಹಾಗೂ ವೈವಿಧ್ಯ ಅದ್ಭುತವಾದದ್ದು. 'ನಾಮಧಾರಿ', 'ಮನೋರಾಜ್ಯ' ಮೊದಲಾದ ಅವರ ನಾಟಕಗಳಲ್ಲಿ ರಸಿಕ ವಿನೋದದ ಜೊತೆಗೇ ಸೂಕ್ಷ್ಮ ವಿಡಂಬನವೂ ಲಾಸ್ಯವಾಡುವದನ್ನು ನಾವು ಕಾಣಬಹುದು. 'ಕಾರಣಪುರುಷ', 'ಬಾಳುರಿ', 'ಅನ್ನ' ಈ ಕಾದಂಬರಿಗಳಲ್ಲಿ ಅವರು ಉತ್ತರ ಕರ್ನಾಟಕದ ಜನಜೀವನದ, ಆಸೆ ಆಕಾಂಕ್ಷೆಗಳ, ಧ್ಯೇಯ ಸಾಧನೆಗಳ, ಸುಖ ದುಃಖಗಳ, ತಿರುಳಿನ ಚಿತ್ರವನ್ನು ಕವಿಯ ಉತ್ಕಟತೆಯಿಂದ ಚಿತ್ರಿಸಿದ್ದಾರೆ. 'ಕೂಟ ಪ್ರಶ್ನೆ', 'ವಿತಂತು ವೇಶ್ಯೆ', 'ನೀರಿನ ನಾರಪ್ಪ' ಈ ಸಣ್ಣಕತೆಗಳಲ್ಲಿ ಜೀವಂತತನದ ಜ್ವಾಲೆ ತೀಕ್ಷ್ಣವಾಗಿದೆ; ಅಂತಃಕರಣವನ್ನು ಕಲಕುವ, ಕರುಣೆಯ ಕಣ್ಣನ್ನು ತೆರೆಯಿಸುವ ವಿಲಕ್ಷಣ ಶಕ್ತಿ ಅವಕ್ಕಿದೆ. ಇಂಗ್ಲೀಷಿನಲ್ಲಿ **The Heritage of Karnatak,** ಎಂಬ ಸರಸ ಗ್ರಂಥವನ್ನು ಬರೆದಿದ್ದಾರೆ.

ಮುಗಳಿಯವರು ಇತ್ತೀಚೆಗೆ ಬರೆದ 'ಕನ್ನಡ ಸಾಹಿತ್ಯ ಚರಿತ್ರೆ' ಕನ್ನಡದ ಸಂಶೋಧನ ಸಾಹಿತ್ಯದ ಕೊನೆಯ ಹಂತವನ್ನು ಸೂಚಿಸುವ ಕೃತಿ. ಶ್ರೀಮಾನ್ ಆರ್. ನರಸಿಂಹಾಚಾರ್ಯರ ಕವಿಚರಿತೆಯ ತರುವಾಯ, ಅದೇ ಮಾರ್ಗದಲ್ಲಿರುವ ಮುಗಳಿಯವರ ಕೃತಿ ಇನ್ನೊಂದು ಮೈಲುಗಲ್ಲಾಗಿದೆ. ಸಾವಿರ ವರ್ಷದ ಸಂಸ್ಕಾರವನ್ನೂ ಸತ್ವವನ್ನೂ ಮೈಗೂಡಿಸಿಕೊಂಡ ಸಾಹಿತ್ಯವನ್ನು ಸಮಗ್ರವಾಗಿ ಅವಲೋಕಿಸಿ, ಬೇರೆ ಬೇರೆ ಕವಿಗಳ ಮಾರ್ಗ, ರೀತಿ, ಶೈಲಿ, ಸೌಂದರ್ಯಗಳನ್ನು ಪರೀಕ್ಷಿಸಿ ಬೆಲೆಕಟ್ಟಬೇಕಾದರೆ ಅಸಾಮಾನ್ಯ ಪ್ರತಿಭೆ, ಸತತವಾದ ಅಭ್ಯಾಸ, ನಿಷ್ಕಲ್ಮಷವಾದ ದೃಷ್ಟಿ ಬೇಕು. ವಿಶ್ವವಿದ್ಯಾಲಯದಂತಹ ಸಂಸ್ಥೆ ಮಾಡಬೇಕಾದ ಕೆಲಸವನ್ನು, ವೈಯಕ್ತಿಕವಾಗಿ ಮಾಡಬೇಕಾದರೆ ಧೈರ್ಯವೂ ಬೇಕು. ಜೀವನದಲ್ಲಿ ಹೇಗೋ ಹಾಗೆಯೇ ಇಲ್ಲಿಯೂ ಮುಗಳಿಯವರ ಸಮನ್ವಯ ದೃಷ್ಟಿ ತಳಹದಿಯಾಗಿದೆ. ಎಲ್ಲಿಯೂ ಅಕಾರಣ ಉತ್ಸಾಹವಾಗಲಿ, ಅನುದ್ದಿಶ್ಯ ಟೀಕೆಯಾಗಲಿ ಕಂಡುಬರುವದಿಲ್ಲ. ಭಾರತೀಯ ಸಾಹಿತ್ಯ ಅಕಾದಮಿಯವರು ಈ ಗ್ರಂಥಕ್ಕೆ ಬಹುಮಾನ ಕೊಟ್ಟು ಗೌರವಿಸಿದ್ದಾರೆ. ಆದರೆ ಆ ಕೃತಿ ಆ ಬಹುಮಾನದಿಂದ ಪರಿಮಿತವಾಗಬೇಕಿಲ್ಲ. ಮುಗಳಿಯವರ ಅಖಂಡ ತಪಸ್ಸಾಧನೆಯ ಫಲ ಅದು; ಅವರ ಸಾಹಿತ್ಯಕ್ಕೆ ಶಿಖರಪ್ರಾಯವಾಗಿದೆ. ನಾಡು ಹೆಮ್ಮೆಪಟ್ಟುಕೊಳ್ಳಬಹುದಾದ ಕೆಲವೇ ಕೃತಿಗಳಲ್ಲಿ ಅದೂ ಒಂದು ಎಂದು ನಿರ್ವಿವಾದವಾಗಿ ಹೇಳಬಹುದು.



ಕ್ರೈಸ್ತ ಧರ್ಮದಲ್ಲಿ ಶಂಕೆಯುಂಟಾದ ಶ್ರೀ "ಅ" ಎಂಬ ಯುರೋಪಿಯನ್ ಗೃಹಸ್ಥರು ವೇದಾಂತ ತತ್ತ್ವಗಳನ್ನು ಅಭ್ಯಸಿಸಿದಾಗ ಅವುಗಳನ್ನು ಬಹಳ ಮೆಚ್ಚಿಕೊಂಡರು. ಅವರು ಭಾರತಕ್ಕೆ ಬಂದು ಶೃಂಗೇರಿಮಠದ (ಕಾಲವಾದ) ಜಗದ್ಗುರುಗಳಾದ ಶ್ರೀ ಚಂದ್ರಶೇಖರ ಭಾರತಿ ಸ್ವಾಮಿಗಳನ್ನು ಕಂಡು ತಾವು ಹಿಂದೂ ಧರ್ಮ ಸ್ವೀಕರಿಸಿದರೆ ಹೇಗೆ ಎಂದು ಅವರ ಸಲಹೆಯನ್ನು ಕೇಳಿದರು. ಅವರೊಳಗಿನ ಸಂವಾದದ ಒಂದು ಭಾಗವನ್ನು ಇಲ್ಲಿ ಎತ್ತಿಕೊಡಲಾಗಿದೆ. ಸ್ವಧರ್ಮೇ ನಿಧನಂ ಶ್ರೇಯಃ ಎಂಬ ತತ್ತ್ವ ಇಲ್ಲಿ ಸುಂದರವಾಗಿ ಪ್ರತಿಪಾದಿಸಲ್ಪಟ್ಟಿದೆ.

# ನಾವು ಧರ್ಮಾಂತರ ಮಾಡಬೇಕೇ?



**ಶ್ರೀ ಅ.** ಹಾಗಾದರೆ ನನಗೆ ತಮ್ಮ ವ್ಯವಹಾರಿಕ ಸೂಚನೆ ಏನು?

**ಸ್ವಾಮಿಗಳು.** ನಿಮಗೆ ದೇವರಲ್ಲಿ ನಂಬಿಕೆಯಿದೆಯೇ?

**ಅ.** ಇದೆ.

**ಸ್ವಾ.** ನಿಮಗೆ ದೇವರ ಜಾಣ್ಮೆಯಲ್ಲಿ ವಿಶ್ವಾಸವಿದೆಯೆ?

**ಅ.** ಖಂಡಿತವಾಗಿ.

**ಸ್ವಾ.** ದೇವರ ಜಾಣ್ಮೆಯು ಅವನ ಪ್ರತಿಯೊಂದು ಕೃತಿಯಲ್ಲಿ ವ್ಯಕ್ತವಾಗುತ್ತದೆಂದು ವಿಶ್ವಾಸವಿದೆಯೆ?

**ಅ.** ನಿಜವಾಗಿ.

**ಸ್ವಾ.** ನಿಮಗೆ ಜನ್ಮವೀಯುವಲ್ಲಿ ಕೂಡ ಆತನ ಜಾಣ್ಮೆ ಪ್ರಕಟವಾಗಿರಬೇಕೆಂದು ಒಪ್ಪುವಿರಾ?

**ಅ.** ಒಪ್ಪಬೇಕು.

**ಸ್ವಾ.** ಹಾಗಾದರೆ ನಿಮಗೆ ಜನ್ಮವೀಯುವುದರಲ್ಲಿ ಪರಮಾತ್ಮನಿಗೆ ಒಂದು ಉದ್ದೇಶ, ಘನ ಉದ್ದೇಶವಿದ್ದಿರಬೇಕಲ್ಲವೆ?

**ಅ.** ಇದ್ದಿರಬೇಕು. ನನ್ನ ಜನ್ಮವು ಈ ಮಹಾ ವಿಶ್ವದ ಹಿತಾಹಿತಗಳ ಮುಂದೆ ಕ್ಷುದ್ರವೆನಿಸಿದರೂ ಅದು ಕೂಡ ಉದ್ದೇಶರಹಿತವಾಗಿರಲಾರದು.

**ಸ್ವಾ.** ನೀವು ಇಂಥದೇ ದಂಪತಿಗಳ ಹೊಟ್ಟೆಯಲ್ಲೇ ಹುಟ್ಟಬೇಕೆಂದು ಈಶ್ವರನು ಸಂಕಲ್ಪಿಸಿದಾಗ ಅವನಿಗೆ ಒಂದು ಉದ್ದೇಶ, ಜಾಣ್ಮೆಯಿಂದ ಪ್ರೇರಿತವಾದ ಉದ್ದೇಶ ಇದ್ದಿರಬೇಕಲ್ಲವೆ?

**ಅ.** ಇರಬೇಕು.

**ಸ್ವಾ.** ನೀವು ಕ್ರೈಸ್ತಮಾತಾಪಿತೃಗಳ ಗರ್ಭದಲ್ಲಿ ಹುಟ್ಟಬೇಕೆಂದು ದೇವರು ಸಂಕಲ್ಪಿಸಿದಾಗ ಕ್ರೈಸ್ತ ಧರ್ಮವೇ ನಿಮ್ಮ ಸ್ವಭಾವಕ್ಕೆ ಅತ್ಯಂತ ಸಮಂಜಸವಾದುದೆಂಬ ಹೊರತು ಬೇರಾವ ಉದ್ದೇಶ ಆತಗಿದ್ದಿರಬಲ್ಲದು? ಸರ್ವಜ್ಞನಾದ ಪರಮಾತ್ಮನು ನಮನಮಗೆ ಯಾವಯಾವ ಧರ್ಮ ಅತ್ಯುತ್ತಮವಾದುದೆಂದು ಚೆನ್ನಾಗಿ ಬಲ್ಲನು. ನಮ್ಮ ಪರಿಮಿತವಾದ ಬುದ್ಧಿಯಿಂದ ನಾವು ನಮ್ಮ ದಾರಿಯನ್ನು ಹುಡುಕಿಕೊಳ್ಳಲಾರೆವೆಂದು ಅವನಿಗೆ ಗೊತ್ತಿದೆ. ನಮ್ಮ ಯೋಗ್ಯತೆಗೆ ಅತ್ಯಂತ ಉಚಿತವಾದ ದೇಶ, ಕಾಲ, ಧರ್ಮಗಳಲ್ಲಿ ನಮ್ಮನ್ನು ಹುಟ್ಟಿಸುವ ಹೊಣೆಯನ್ನು

ಚೇತನಾ ಲಿಮಿಟೆಡ್, ಮುಂಬಯಿ ಇವರು ಪ್ರಕಟಿಸಿದ Dialogues with the Guru ವಿನಿಂದ

ಅವನೇ ವಹಿಸಿಕೊಂಡಿದ್ದಾನೆ. ಪರಮಾತ್ಮನ ಈ ಕರುಣಾಪೂರ್ಣವಾದ ಉಪಕಾರವನ್ನು ಧಿಕ್ಕರಿಸಿ, ಬೇರೆಬೇರೆ ಧರ್ಮಗಳ ಒಳಿತು-ಕೆಡಕುಗಳನ್ನು ಹೋಲಿಸುವ ಅಸಾಧ್ಯ ಕಾರ್ಯಕ್ಕೆ ನಾವೇಕೆ ಕೈಹಾಕಬೇಕು ?

**ಅ.** ಕ್ರೈಸ್ತ ಧರ್ಮವನ್ನು ಅರ್ಥ ಮಾಡಿಕೊಂಡು ನನಗೆ ತೋಚಿದ ಮಟ್ಟಿಗೆ ಅದನ್ನು ಸತ್ಯವಾಗಿ ಅನುಸರಿಸಲು ನಾನು ಪ್ರಯತ್ನಿಸಿದ್ದೇನೆ. ಆದರೆ ಹೆಜ್ಜೆಹೆಜ್ಜೆಗೆ ನನಗೆ ಸಂದೇಹಗಳುಂಟಾಗಿವೆ. ಅವುಗಳನ್ನು ಪರಿಹರಿಸುವವರು ಯಾರೂ ಸಿಗಲಿಲ್ಲ. ಆದ್ದರಿಂದಲೇ ನಾನು ಪರಧರ್ಮಗಳನ್ನು ಅಭ್ಯಸಿಸಲು ಇಚ್ಛಿಸಿದೆ.

**ಸ್ವಾ.** ಸ್ವಧರ್ಮವನ್ನು ಆಮೂಲಾಗ್ರವಾಗಿ ಅಭ್ಯಸಿಸುವದು ಮಾತ್ರವಲ್ಲದೆ ಅದನ್ನು ನಿರಂತರವೂ ಆಚರಿಸುವವರಿಂದ, ಅದನ್ನೇ ಜೀವನವಾಗಿ ಮಾಡಿಕೊಂಡವರಿಂದ ಮಾತ್ರ ಸಂದೇಹ ನಿವೃತ್ತಿ ಆದೀತಲ್ಲದೆ ಅನ್ಯರಿಂದಲ್ಲ. ವ್ಯಾಪಾರಕ್ಕಾಗಿ ನೀವು ಸಾಗರಗಳನ್ನು ದಾಟಿ ಆಕಾಶವನ್ನು ಭೇದಿಸಿ ದೂರದೂರ ಹೋಗುತ್ತೀರಿ. ಆದರೆ ಸತ್ಯಕ್ಕಾಗಿ ಮಾತ್ರ ಗುರುಗಳೇ ನಿಮ್ಮ ಬಾಗಿಲಿಗೆ ಬಂದು ನಿಮ್ಮ ಸಂದೇಹನಿವೃತ್ತಿ ಮಾಡಬೇಕೆನ್ನುತ್ತೀರಿ.

ಧರ್ಮವು ಜೀವನದ ಒಂದು ಸ್ವಾರಸ್ಯವಾದ ಉಪಾಂಗವೆಂಬ ಭಾವನೆ ಹೋಗಬೇಕು. ಧರ್ಮವು ಜೀವನದ ಒಂದು ಭಾಗವಾಗಿರದೆ ಜೀವನವೇ ಆಗಿದೆಯೆಂದು ಒಮ್ಮೆಗೆ ಮನಗಂಡರೆ, ಇಡೀ ಜಗತ್ತನ್ನೇ ಅರಸಿ ಯೋಗ್ಯ ಗುರುವನ್ನು ಪಡೆಯುವ ಹಂಬಲವುಂಟಾಗುತ್ತದೆ. ಅಂಥ ಗುರು ಯಾವಾಗಲೂ ಇದ್ದೇ ಇರುತ್ತಾನೆ. ನಿಮ್ಮಲ್ಲಿ ನೈಜ ಜಿಜ್ಞಾಸೆಯ ಕುರುಹು ಕಂಡರೂ ಸಾಕು, ಅವನು ನೆರವಿಗೆ ಬರುತ್ತಾನೆ. ಕ್ರೈಸ್ತರಲ್ಲಿ ಅಂಥ ಗುರುಗಳು ಇಲ್ಲವೆಂದು ನಾನು ನಂಬಲಾರೆ. ಜಂಜಡದ ಜಗತ್ತಿನಲ್ಲಿ ಅವರು ಇಲ್ಲದಿರಬಹುದು. ಅಂಥ ಜಗತ್ತಿಗೆ ಅವರು ಬೇಕಾಗಿಯೂ ಇಲ್ಲ, ಅವರಿಗೆ ಇಂಥ ಜಗತ್ತೂ ಬೇಕಾಗಿಲ್ಲ. ಕೆಲವೊಮ್ಮೆ ಅವರು ಜಂಜಡದ ಜಗತ್ತಿನ ಮಧ್ಯದಲ್ಲಿಯೂ ಇರಬಹುದು. ಯಾಕೆಂದರೆ ಜಂಜಡವು ಅವರನ್ನು ಪೀಡಿಸಲಾರದು. ಆದ್ದರಿಂದ ಹೋಗಿರಿ, ಅಂಥ ನಿಜವಾದ ಕ್ರೈಸ್ತರನ್ನು ಹುಡುಕಿ ಅವರನ್ನು ವಿನಯಪೂರ್ವಕ ವಿಚಾರಿಸಿರಿ. ಅವರು ನಿಮ್ಮ ಶಂಕೆಗಳಿಗೆ ಸಮಾಧಾನ ಕೊಡುವರು. ಆಗ ದೇವರು ನಿಮ್ಮನ್ನು ಕ್ರೈಸ್ತರಾಗಿ ಹುಟ್ಟಿಸಿದ್ದೇ ನ್ಯಾಯ, ಎಂದು ನಿಮಗೆ ಮನವರಿಕೆಯಾಗುವುದು.

**ಅ.** ಸ್ವಾಮಿಗಳೇ, ನೀವು ನನಗಿತ್ತ ಈ ಉಪದೇಶಕ್ಕಾಗಿ ನಾನು ಎಷ್ಟು ಕೃತಜ್ಞನಾಗಿದ್ದರೂ ಸಾಲದು. ನಾನು ಇಲ್ಲಿಂದ ಉತ್ತಮ ಕ್ರೈಸ್ತನಾಗಿ ಬಾಳಬೇಕೆಂಬ ಹಾರ್ದಿಕ ಇಚ್ಛೆಯೊಡನೆ ಮರಳಬಹುದೆಂಬ ಕಲ್ಪನೆ ನನಗೆ ಇಲ್ಲಿಗೆ ಬಂದಾಗ ಸ್ವಲ್ಪವೂ ಇರಲಿಲ್ಲ. ಈ ಇಚ್ಛೆಯನ್ನು ನನ್ನಲ್ಲಿ ಜಾಗೃತಗೊಳಿಸಿದ ಪುಣ್ಯ ನಿಮ್ಮದು. ಕ್ರೈಸ್ತರು ಉತ್ತಮ ಕ್ರೈಸ್ತರಾಗಿ ಬಾಳಬೇಕು, ಹಿಂದುಗಳು ಉತ್ತಮ ಹಿಂದುಗಳಾಗಿ ಬಾಳಬೇಕು ಇತ್ಯಾದಿಯಾಗಿ ನಿಮ್ಮ ಧ್ಯೇಯವಿರುವುದಾದರೆ ನಿಮ್ಮ ಧರ್ಮವು ನಾನೆಣಿಸಿದ್ದಕ್ಕಿಂತಲೂ ಉದಾತ್ತವಾದುದೆಂಬುದು ನಿಶ್ಚಯ. ನಾನಿನ್ನು ಹೋಗಿಬರುವೆ, ಆಶೀರ್ವದಿಸೋಣಾಗಲಿ.

**ಸ್ವಾ.** ಆಶೀರ್ವದಿಸುವುದು ದೇವರಿಗೊಬ್ಬನಿಗೇ ಸೇರಿದ್ದು. ಅವನ ಕರುಣಾರ್ದ್ರ ವರಗಳನ್ನು ನಾವೆಲ್ಲರೂ ಬೇಡಬೇಕು. ಒಂದು ಮಾತನ್ನು ನಿಮಗೆ ಹೇಳಬೇಕೆನ್ನುತ್ತೇನೆ. ನಿಮಗೆ ಪರಮಾತ್ಮನು ಸುದೃಢ ಶರೀರವನ್ನೂ ಚೈತನ್ಯಶಾಲಿ ಮನಸ್ಸನ್ನೂ ತೀಕ್ಷ್ಣಬುದ್ಧಿಯನ್ನೂ ದಯಪಾಲಿಸಿದ್ದಾನೆ. ಕಲಾವಿದನ ಹತ್ತಿರ ಎಷ್ಟೇ ಉತ್ತಮ ಬಣ್ಣಗಳೂ ಕುಂಚಗಳೂ ಇರಲಿ, ಅವನ ಕಲ್ಪನೆಗಳು ಎಷ್ಟೇ ಶ್ರೇಷ್ಠವಾಗಿರಲಿ, ಅವನು ಗಾಳಿಯಲ್ಲಿ ಚಿತ್ರ ಬರೆಯಲಾರ. ಅದಕ್ಕೆ ಎಷ್ಟೇ ಒರಟಾಗಿದ್ದರೂ ಸ್ಥಿರವಾದ ಒಂದು ಗೋಡೆಯೋ ವಸ್ತ್ರವೋ ಹಿನ್ನಲೆಯಾಗಿ ಬೇಕೇ ಬೇಕು. ಆದ್ದರಿಂದ ನಿಮ್ಮ ದೈವದತ್ತ ಸಾಮರ್ಥ್ಯಗಳನ್ನು ವಿವಿಧ ಧರ್ಮಗಳ ಗುಣದೋಷ

ಗಳನ್ನು ವ್ಯರ್ಥವಾಗಿ ಹೋಲಿಸುವ ಗಾಳಿ ಗುದ್ದಾಟದಲ್ಲಿ ಕಳೆಯಬೇಡಿರಿ. ನಿಮ್ಮ ದೈವ ದತ್ತ ಶಕ್ತಿ ಸಾಮರ್ಥ್ಯಗಳನ್ನು ನಿಮ್ಮ ದೈವದತ್ತ ಕ್ರೈಸ್ತ ಧರ್ಮದ ಹಿನ್ನೆಲೆಯ ಮೇಲೆ ಉಪಯೋಗಿಸಿರಿ. ನಿಮ್ಮ ಚಿತ್ರ ಪೂರ್ತಿಯಾದ ಮೇಲೆ ಅದರ ಸೌಂದರ್ಯವನ್ನು ನೀವು ಆಸ್ವಾದಿಸುವಾಗ ಹಿನ್ನೆಲೆ ತಾನಾಗಿ ಅದೃಶ್ಯವಾಗುತ್ತದೆ. ಆ ವರೆಗೂ ಅದು ಸಾಧಿಸದು. ನೆನಪಿರಲಿ.



## ಧರ್ಮಕ್ಷೇತ್ರೇ . . . .

ಧರ್ಮದಿಂದಲೇ ಅರ್ಥವೂ ಕಾಮವೂ ಸಾಧಿಸುವುದೆಂದು ನಾನು ಕೈಯೆತ್ತಿ ಕೂಗುತ್ತಿದ್ದರೂ ಯಾರೂ ಅದನ್ನು ಆಲಿಸುವುದಿಲ್ಲವಲ್ಲ !

— ವ್ಯಾಸಮಹರ್ಷಿ

ಎಲ್ಲ ಧರ್ಮಗಳಿಗೂ ಅಸ್ಪದವೀಯಬೇಕು. ಯಾಕಂದರೆ ಪ್ರತಿಯೊಬ್ಬನೂ ತನ್ನ ದಾರಿಯಿಂದಲೇ ಸ್ವರ್ಗಕ್ಕೇರಬೇಕಾಗಿದೆ.

—ಘನವಂತನಾದ ಫ್ರೆಡ್ರಿಕ ರಾಜ

ನಮ್ಮಲ್ಲಿರುವ ಧರ್ಮ ಒಬ್ಬರನ್ನೊಬ್ಬರು ದ್ವೇಷಿಸುವ ಪೂರ್ತಿ ಇದೆ, ಹೊರತು ಒಬ್ಬರನ್ನೊಬ್ಬರು ಪ್ರೀತಿಸುವಷ್ಟು ಇಲ್ಲ.

— ಸ್ವಿಫ್ಟ

ಧರ್ಮವೆಂಬುದು ಜನಜಂಗುಳಿಗೆ ಕೊಟ್ಟ ಅಫು.

— ಕಾರ್ಲಮಾರ್ಕ್ಸ



ರಸ್ತೆ ಉಡುಗುತ್ತಿದ್ದ ಒಬ್ಬ ಭಂಗಿಯನ್ನು ಕುರಿತು ಒಬ್ಬ ತತ್ವಜ್ಞಾನಿ ಹೇಳಿದ : " ನಿನ್ನನ್ನು ಕಂಡರೆ ನನಗೆ ಕನಿಕರವಾಗುತ್ತದೆ. ನಿನ್ನ ಕೆಲಸ ಎಲ್ಲಕ್ಕಿಂತ ಕಠಿನ ಮತ್ತು ತಿರಸ್ಕೃತವಾಗಿದೆ. ''

ಭಂಗಿ ಕೇಳಿದ : " ಧನ್ಯವಾದಗಳು. ಆದರೆ, ತಾವೇನು ಕೆಲಸ ಮಾಡುತ್ತೀರಿ ಹೇಳುವಿರಾ ? ''

ತತ್ವಜ್ಞಾನಿ ಅಂದ : " ನಾನು ಮನುಷ್ಯನ ಮನಸ್ಸು, ಅವನ ಕೃತಿ ಮತ್ತು ಅವನ ಪ್ರವೃತ್ತಿಗಳನ್ನು ಅಭ್ಯಸಿಸುವವನಾಗಿದ್ದೇನೆ. "

ಭಂಗಿ ತಿರುಗಿ ಉಡುಗತೊಡಗಿದ. ಅವನು ನಕ್ಕು ನುಡಿದ: " ಹಾಗಾದರೆ ತಮ್ಮನ್ನು ನೋಡಿ ನನಗೂ ಕನಿಕರವಾಗುತ್ತದೆ."

— ಕಾಕಾ ಕಾಲೇಲಕರರ " ಮೃಗಜಲಕೇ ಮೋತಿ "ಯಿಂದ

# ವಿಶ್ವೇಶ್ವರಯ್ಯನವರು ಅಲಸಿಗರಿದ್ದಾಗ!

ಮೊನ್ನೆ ಮೊನ್ನೆ ತಮ್ಮ ೯೬ನೇ ಜನ್ಮದಿನೋತ್ಸವ ಆಚರಿಸಿದ ಜಗತ್ಪ್ರಸಿದ್ಧಎಂಜಿನಿಯರರಾದ ಮೋಕ್ಷಗುಂಡಂ ವಿಶ್ವೇಶ್ವರಯ್ಯನವರಿಗೆ ೬೩ ವರ್ಷಗಳ ಹಿಂದೆ ಮುಂಬಯಿ ಸರಕಾರದ ನೌಕರಿಯಲ್ಲಿ ಮೊದಲು ಬಂದ ಬಹುಮಾನ ಯಾವುದು ಗೊತ್ತೆ? ಒಳ್ಳೇ ಸೂಚನೆ ಮಾಡಿದ್ದಕ್ಕೆ ಮೇಲಧಿಕಾರಿಯಿಂದ "ಆಲಸಿ" ಯೆಂಬ ಬಿರುದು. ಆ ಸನ್ನಿವೇಶವನ್ನು ಅವರ ಬಾಯಿಂದಲೇ ಕೇಳಿರಿ :

"೧೮೮೪ರಲ್ಲಿ ೨೩ನೇ ವಯಸ್ಸಿನಲ್ಲಿ ಮುಂಬಯಿ ಸರಕಾರದ ಸಾರ್ವಜನಿಕ ಕಾಮಗಿರಿ ಖಾತೆಯಲ್ಲಿ ಅಸಿಸ್ಟಂಟ್ ಎಂಜಿನಿಯರಾಗಿ ನನ್ನ ನೇಮಕವಾಯಿತು . . . ಸಾಧಾರಣ ಸ್ವರೂಪದ ಕೆಲಸವನ್ನು ಕೆಲ ತಿಂಗಳು ಮಾಡಿದ ಮೇಲೆ . . . ನಾಸಿಕ ಜಿಲ್ಹೆಯ ಪಾಂಜ್ರಾನದಿಯಿಂದ ದಾತಾರಿ ಎಂಬ ಹಳ್ಳಿಗೆ [ ನೀರಾವರಿಯ ] ಪೈಪ್ ಸೈಫನ್ ಕಟ್ಟಲು ನನಗೆ ಖಾನದೇಶ ಮತ್ತು ನಾಸಿಕ ಜಿಲ್ಹೆಯ ನೀರಾವರಿ ಎಂಜಿನಿಯರರು ಆಜ್ಞಾಪಿಸಿದರು.

೧೮೮೪ರಲ್ಲಿ ಮಳೆಗಾಲಕ್ಕೆ ಸ್ವಲ್ಪಮುಂಚೆ ನಾನು ಗೊತ್ತಾದ ಸ್ಥಳಕ್ಕೆ ಹೋಗಿ ಕೆಲಸದ ವ್ಯವಸ್ಥೆ ಮಾಡಿದೆ. ಹಳ್ಳದ ತಳದ ಉಸುಬನ್ನು ತೆಗೆದು ಕೊಳವೆ ಹಾಯ್ದು ಹೋಗಲು ಬಂಡೆಯನ್ನು ಕಡಿದು ದಾರಿ ಮಾಡಬೇಕಾಗಿತ್ತು. ಬಂಡೆ ಕಡಿಯುತ್ತಿದ್ದಾಗ ಮೇಲಿಂದ ಮೇಲೆ ಮಳೆ ಬಂದು ಪ್ರವಾಹ ಉಕ್ಕಿ ಕಡಿದ ಕಂದಕ ಮಳಲಿನಿಂದ ತುಂಬಿಹೋಗತೊಡಗಿತು. ಮಳಲನ್ನು ತೆಗೆಸದೆ ಕೆಲಸ ಮುಂದೆ ಸಾಗುವಂತಿರಲಿಲ್ಲ. ತೆಗೆಸಲು ಪ್ರತಿಸಲ ಮೂರು ಮೂರು ದಿನ ಹಿಡಿಯುತ್ತಿತ್ತು. ನಾನು ಹೊಸಬನಾದ್ದರಿಂದ ಅಲ್ಲಿನ ಸಬ್‌ಡಿವಿಜನಲ್ ಅಧಿಕಾರಿಯನ್ನು ವಿಚಾರಿಸಿದೆ. ಅವರ ಅಭಿಪ್ರಾಯದಂತೆ, ನಾಸಿಕ ಖಾನದೇಶ ಜಿಲ್ಹೆಯ ನೀರಾವರಿ ಇಂಜನಿಯರರಿಗೆ ಪತ್ರ ಬರೆದೆ. ಮಳೆಗಾಲದಲ್ಲಿ ಈ ಕೆಲಸ ಸಾಗಿಸುವದರಿಂದ ನಿರರ್ಥಕ ವೆಚ್ಚವುಂಟಾಗುವುದು; ಆದ್ದರಿಂದ ಮಳೆಗಾಲ ಮುಗಿಯುವ ವರೆಗೆ ನನ್ನ ಮುಖ್ಯ ಕಚೇರಿಯಿದ್ದ ಧುಳಿಯಾಕ್ಕೆ ಮರಳಿ, ಮಳೆ ಬಿಡುವ ಲಕ್ಷಣ ಕಾಣಿಸಿದೊಡನೆ ತಿರುಗಿ ಬಂದು ಕೆಲಸ ಪ್ರಾರಂಭಿಸಬಹುದೇ ಎಂದು ಅದರಲ್ಲಿ ಕೇಳಿದ್ದೆ.

ಇದಕ್ಕೆ ನನಗೆ ಬಂದ ಉತ್ತರ ಅತ್ಯಂತ ಅನಿರೀಕ್ಷಿತವಾಗಿತ್ತು. ಅದರಲ್ಲಿ ಕೆಲಸ ಮುಂದುವರಿಯಲೇ ಬೇಕೆಂದು ಮೇಲಧಿಕಾರಿ ಒತ್ತಾಯಪಡಿಸಿದ್ದರಲ್ಲದೆ ಕೊನೆಯಲ್ಲಿ ಈ ಕೆಳಗಿನಂತೆ ರಿಮಾರ್ಕು ಬರೆದಿದ್ದರು:

"ಅಸಿಸ್ಟಂಟ್ ಎಂಜಿನಿಯರನು ಪ್ರಾರಂಭದಲ್ಲಿಯೇ ಕಾರ್ಯದಲ್ಲಿ ಉತ್ಸಾಹ ಮತ್ತು ಆಜ್ಞೆಗೆ ವಿಧೇಯತೆ ತೋರಿಸದಿರುವುದು ಶುಭಲಕ್ಷಣವಲ್ಲ." ಅರ್ಥಾತ್ ವಿಶ್ವೇಶ್ವರಯ್ಯನವರು ಅಲಸಿಗರಾಗಿದ್ದರೆಂದು ಮೇಲಧಿಕಾರಿಯ ಟೀಕೆ !

ಇದನ್ನೋದಿ ವಿಶ್ವೇಶ್ವರಯ್ಯನವರಿಗೆ ತುಂಬ ನಿರುತ್ಸಾಹವಾಯಿತು. ಆದರೂ ಅವರು ಬಹಳ ಪ್ರಯಾಸಪಟ್ಟು, ದಿನವೂ ಕುದುರೆಯೇರಿ ಪಾಂಜ್ರಾ ನದಿದಾಟಿ ಹೋಗಿ ಎರಡು ತಿಂಗಳಲ್ಲಿ ಕೆಲಸವನ್ನು ಮುಗಿಸಿಯೇ ತೋರಿಸಿದರು. ಅವರ ಮೇಲೆ ಟೀಕೆ ಬರೆದಿದ್ದ ಅಧಿಕಾರಿ ಮೆಚ್ಚಿ, ತನ್ನ ರಿಮಾರ್ಕನ್ನು ರದ್ದುಪಡಿಸಿಪತ್ರ ಬರೆದ.

ಆದರೆ ಈ ದೈವವಿಲಾಸವನ್ನು ನೋಡಿರಿ. ಈ ರಿಮಾರ್ಕು ಬರೆದ ಎಂಜಿನಿಯರನು ಅನಾಮಧೇಯನಾಗಿಯೇ ಉಳಿದಿರುವಾಗ, ಇಪ್ಪತ್ತೇ ವರ್ಷಗಳ ಅವಧಿಯಲ್ಲಿ ತಮ್ಮ ಹೊಸ ಎಂಜಿನಿಯರಿಂಗ ಶೋಧಗಳಿಂದ ವಿಶ್ವೇಶ್ವರಯ್ಯನವರು ಜಗತ್ಪ್ರಸಿದ್ಧರಾಗಿಬಿಟ್ಟರು. ಅವರು ಖಡಕವಾಸಲಾದ ಸರೋವರಕ್ಕೆ ೧೯೦೧-೩ರಲ್ಲಿ ಹಾಕಿ

ಸಿದ ಹೊಸ ಮಾದರಿಯ ತಮ್ಮದೇ ಕಲ್ಪನೆಯಾದ ಸ್ವಯಂಚಾಲಿತ ಗೇಟಿನ ಪದ್ಧತಿಯು ಮುಂದೆ ದೇಶವಿದೇಶಗಳಲ್ಲಿ ಉಪಯೋಗಿಸಲ್ಪಟ್ಟಿತು.

೧೮೮೪ರಲ್ಲಿ ಮುಂಬಯಿ ಸರಕಾರದ ನೌಕರಿಯಲ್ಲಿ ಮೊದಲ ತುತ್ತಿಗೆ ಹರಳು ಕಡಿದು ನೊಂದಿದ್ದ ಇವರು ೨೪ ವರ್ಷಗಳ ನಂತರ ೧೯೦೮ರಲ್ಲಿ ಅದೇ ಮುಂಬಯಿ ಸರಕಾರದ ನೌಕರಿಯಿಂದ ಸ್ವೇಚ್ಛೆಯಿಂದ ನಿವೃತ್ತರಾದಾಗ ಗವರ್ನರ ಲಾರ್ಡ್ ಸಿಡೆನ್‌ಹ್ಯಾಮರು ಅವರಿಗೆ ಬರೆದುದನ್ನು ನೋಡಿರಿ:

"ವಿಶ್ವೇಶ್ವರಯ್ಯನವರು ಅಸದೃಶಸೇವೆಯನ್ನು ಸಲ್ಲಿಸಿದ್ದಾರೆಂದು ಗವರ್ನರ ಸಾಹೇಬರ ಅಭಿಪ್ರಾಯ. ಅವರಿಗೆ ಪೂರ್ತಿ ಪೆನ್‌ಶನ್ ಪಡೆಯುವ ಹಕ್ಕು ಇದೆ."

"ನೀವು ನೌಕರಿಯಲ್ಲಿ ಉಳಿದಿದ್ದರೆ ಮತ್ತು ನಾನು ಭಾರತದಲ್ಲಿ ಉಳಿದಿದ್ದರೆ ನಿಮ್ಮ ಅಮೂಲ್ಯ ಸೇವೆಗೆ ಯೋಗ್ಯ ಮೆಚ್ಚಿಗೆಯನ್ನು ತೋರಿಸುವ ಹಂಬಲ ನನಗಿತ್ತು."

ವಿಶ್ವೇಶ್ವರಯ್ಯನವರ ಹೊಸ ನೀರಾವರಿ ಶೋಧದ ಬಗ್ಗೆ ಮುಂಬಯಿ ಸರಕಾರದ ಆಗಿನ ಮಂತ್ರಿಗಳಲ್ಲಿ ಪ್ರಮುಖರಾದ ಸರ್ ಜಾರ್ಜ ಮೆಕಂಜಿಯವರು ೧೯೦೮ರಲ್ಲಿ ಬರೆದುದು ಹೀಗಿತ್ತು:

"ಈ ಯೋಜನೆ ಸಫಲವಾಗಲು ವಿಶ್ವೇಶ್ವರಯ್ಯನವರ ಬುದ್ಧಿಸಾಮರ್ಥ್ಯವೇ ಕಾರಣ. ಮುಂಬಯಿ ಸರಕಾರದ ಸಾರ್ವಜನಿಕ ಕಾಮಗಿರಿ ಶಾಖೆಯಲ್ಲಿ ಇಷ್ಟು ಪ್ರತಿಭಾವಂತ ಮತ್ತು ದಕ್ಷನಾದ ಆಂಗ್ಲೇಯ ಅಥವಾ ಭಾರತೀಯ ಅಧಿಕಾರಿ ಬೇರೊಬ್ಬನಿಲ್ಲ."

---

## ೯೬ ವರ್ಷದ ತರುಣ

ಇಷ್ಟು ದೀರ್ಘಕಾಲದ ಬಾಳ್ವೆಯ ಗುಟ್ಟೇನು ಎಂದು ವಿಶ್ವೇಶ್ವರಯ್ಯನವರನ್ನು ಕೇಳಿದರೆ—"ವೃದ್ಧಾಪ್ಯ ನನ್ನನ್ನು ಭೇಟಿ ಮಾಡಲು ಬಂದಿತ್ತು. ಬಂದಾಗಲೆಲ್ಲ, ನಾನು ಮನೆಯಲ್ಲಿಲ್ಲ ಎಂದು ಹೇಳಿ ಕಳಿಸುತ್ತಿದ್ದೇನೆ—" ಎಂದು ಹಾಸ್ಯವಾಗಿ ಉತ್ತರಿಸಿದ್ದಾರೆ. ಬಿಡುವಿಲ್ಲದ ದುಡಿತ, ನಿಯಮಿತ ಕಾರ್ಯಕ್ರಮ, ವ್ಯಾಯಾಮ, ಮಿತಾಹಾರ, ಸಂಯಮ ಇವು ಸಾಧಕಗಳು. ಜೊತೆಗೆ ದೇವರ ಕೃಪೆ, ಆಶೀರ್ವಾದ.

'ವಯೋವೃದ್ಧ ಜೀವನದಲ್ಲಿ ಸುಖವಿದೆಯೇ?' ಎಂದು ಕೇಳಿನೋಡಿ ಅವರನ್ನು. ಸಾಕಷ್ಟು ಆರೋಗ್ಯ, ಯೋಗ್ಯ-ಸುಖಜೀವನಕ್ಕೆ ತಕ್ಕಷ್ಟು ಹಣ ಇದ್ದರೆ ಏಕಾಗಬಾರದು? ಎಂದು ನುಡಿಯುತ್ತಾರೆ. ಕಾಯಿಲೆಯಿಂದ, ನೋವಿನಿಂದ ಪೇಚಾಡುವ ಜೀವ ಸುಖಮಯವಾಗಿರಲಾರದು. ಜೀವನವೇ ಒಂದು ಹೋರಾಟ, ಕಷ್ಟಮಯ ಸಂಗ್ರಾಮ. ಆದರೆ ಈ ಕಷ್ಟಕಾರ್ಪಣ್ಯಗಳನ್ನು ಎದುರಿಸುವ ಶಕ್ತಿಯನ್ನು ಪರಮಾತ್ಮ ಎಲ್ಲರಿಗೂ ಅನುಗ್ರಹಿಸಿದ್ದಾನೆ—ಎನ್ನುತ್ತಾರೆ.

ಎಷ್ಟೇ ಕಷ್ಟವಿರಲಿ, ಜೀವ ಕಳೆದುಕೊಳ್ಳಲು ಸಾಮಾನ್ಯವಾಗಿ ಯಾರೂ ಬಯಸುವುದಿಲ್ಲ. "ಬಾಲ್ಯದಲ್ಲಿ ನಾನು ಬಯಸುತ್ತಿದ್ದ ಬಯಕೆಗಳೆಲ್ಲವೂ ಈಗ ಪೂರ್ಣವಾಗಿವೆ. ಬಯಸದೆಯೇ ಈ ಭೂಮಿಯಲ್ಲಿ ನಾನು ಜನ್ಮತಾಳಿದೆ. ಜೀವನ ನನಗೆ ಸುಖಪ್ರದವಾಗಿಯೇ ಇದೆ. 'ಮತ್ತೆ ಬಾಳಬಯಸುವೆಯೋ?' ಎಂದು ಕೇಳಿದರೆ, 'ಸಂತೋಷದಿಂದ ಆಗಲಿ' ಎಂದು ಫ್ರಾನ್ಸಿನ ತತ್ವವೇತ್ತನಾದ ರಿನೋ ಹೇಳುವಂತೆ ನಾನೂ ಹೇಳುತ್ತೇನೆ" ಎನ್ನುತ್ತಾರೆ ವಿಶ್ವೇಶ್ವರಯ್ಯ.

—ವ್ಹಿ. ಎಸ್. ನಾರಾಯಣರಾಯರ "ವಿಶ್ವೇಶ್ವರಯ್ಯ" ಪುಸ್ತಕದಿಂದ

ಗಂಗಾನದಿಯ ಪಾವಿತ್ರ್ಯ ಕಟ್ಟುಕತೆಯಲ್ಲ,
ಅದರಲ್ಲಿ ವೈಜ್ಞಾನಿಕ ತಥ್ಯ ಅಡಕವಾಗಿದೆ.

# ಔಷಧಂ ಜಾಹ್ನವೀತೋಯಮ್



ಮುತ್ತಿನ ಕೋಲಿಗೆ ಅಲ್ಲಲ್ಲಿ ನೀಲದ
ಮಣಿಗಳ ಕೋದಂತೆ ಒಂದೆಡೆಗೆ,
ಬೆಳುದಾವರೆಗಳ ಮಾಲೆಯೊಳಲ್ಲಲ್ಲಿ
ನೈದಿಲೆಗಳನಿಟ್ಟಂತಿನ್ನೊಂದೆಡೆ,
ಕೆಲವೆಡೆ ಹಾರುವ ಮಾನಸ ಹಂಸಗ-
ಳೋಳಿ ಮೋಡಗಳಲ್ಲಿ ಬೆರೆತಂತೆ,
ಬೇರೊಮ್ಮೆ ಶರದದ ಬಿಳಿ ಮೋಡದೆಡೆಯಲ್ಲಿ
ಬಾನ್ನೀಲವಲ್ಲಲ್ಲಿ ಹಣಕಿದಂತೆ,
ಮತ್ತೊಮ್ಮೆ ಕಾಳಸರ್ಪಗಳನ್ನು ತೊಟ್ಟಂಥ
ಭಸ್ಮಭೂಷಿತ ಶಿವತನುವಿನಂತೆ,
ಯಮುನೆಯ ತೆರೆಗಳನಪ್ಪಿದ ಗಂಗೆಯ
ಸೊಬಗ ನಾನೇನೆಂಬೆ ನೋಡೆ ಕಾಂತೆ.

—ರಘುವಂಶ

ಮಹಾಕವಿ ಕಾಳಿದಾಸನ ಸೌಂದರ್ಯ ದೃಷ್ಟಿಗೆ ಗಂಗಯಲ್ಲಿ, ಗಂಗಾಜಲದಲ್ಲಿ ಮೇಲೆ ವರ್ಣಿಸಿದಂತೆ ಸೌಂದರ್ಯವು ಕಂಡುಬಂದಿತ್ತು. ಆದರೆ ಗಂಗಾ ನದಿಯ ವೈಶಿಷ್ಟ್ಯವು ಕೇವಲ ಸೌಂದರ್ಯ ಮಾತ್ರವಲ್ಲ.

ಹಿಂದು ಧರ್ಮದಲ್ಲಿ ನದಿಗಳಿಗೆ ಅತಿಶಯ ಮಹತ್ವದ ಸ್ಥಾನ ಕೊಡಲ್ಪಟ್ಟಿದೆ. ನದಿಗಳನ್ನು, ಅದರಲ್ಲೂ ಗಂಗಾನದಿಯನ್ನು ನಾವು ಬಹು ಪವಿತ್ರವೆಂದು ಭಾವಿಸುತ್ತೇವೆ. ಗಂಗೆಯಲ್ಲಿ ಒಮ್ಮೆ ಸ್ನಾನ ಮಾಡುವದರಿಂದ ಸಕಲ ಪಾಪ ತೊಳೆದು ಹೋಗುವದು ಎಂದು ನಂಬುತ್ತೇವೆ. ನಮ್ಮಲ್ಲಿ ಗಂಗಾ ನದಿಯ ಈ ಮಹಾತ್ಮೆಯನ್ನು ಪ್ರಾಚೀನ ಕಾಲದಿಂದಲೂ ಮನ್ನಿಸುತ್ತ ಬಂದಿದ್ದಾರೆ. ಗಂಗಾಜಲವು ಪವಿತ್ರವೂ ಆರೋಗ್ಯ

'ಅಖಂಡ ಆನಂದ'ದಿಂದ



ದಾಯಿಯೂ ಎಂದು ತಿಳಿದಿದ್ದೇವೆ. ನಮ್ಮ ಪುರಾಣ ಗ್ರಂಥಗಳಲ್ಲಿ ಮತ್ತು ಐತಿಹಾಸಿಕ ಗ್ರಂಥಗಳಲ್ಲಿ ಗಂಗಾಸ್ನಾನದಿಂದ ಪುಣ್ಯ ಲಭಿಸುವದರ ಜೊತೆಗೆ ಆರೋಗ್ಯ ಪ್ರಾಪ್ತಿಯೂ ಆಗುವದೆಂಬ ಉಲ್ಲೇಖಗಳಿವೆ.

೨,೦೦೦ ವರ್ಷಗಳ ಹಿಂದೆಯೆ ಆಯುರ್ವೇದ ವಿಶಾರದ ಚರಕನು

**ಹಿಮವತ್ಪ್ರಭವಾ ಪಥ್ಯಾಃ**
**ಪುಣ್ಯಾ ದೇವರ್ಷಿಸರಿತಃ ।**

"ಹಿಮಾಲಯದಿಂದ ಹೊರಡುವ ಈ ನದಿಗಳು ಹಿತಕಾರಕವೂ ಪುಣ್ಯಕಾರಕವೂ ಆಗಿವೆ" ಎಂದು ಬರೆದಿದ್ದಾನೆ.

ವಾಗ್ಭಟನ 'ಅಷ್ಟಾಂಗ ಹೃದಯ' ಪುಸ್ತಕದಲ್ಲಿ

**ಹಿಮವನ್ಮಲಯೋದ್ಭೂತಾಃ**
**ಪಥ್ಯಾಸ್ತಾ ಏವ ಚ ಸ್ಥಿರಾಃ ।**

"ಹಿಮಾಲಯ ಮತ್ತು ಮಲಯ ಗಿರಿಗಳಿಂದ ಹೊರಡುವ ನದಿಗಳು ಪಥ್ಯಕಾರಕವೂ ಸ್ಥಿರವೂ ಆಗಿವೆ" ಎಂದಿದ್ದಾನೆ.

ಈ ನದಿಗಳ ನೀರು ಗುಡ್ಡ ಕೊಳ್ಳಗಳಲ್ಲಿ ಹರಿದು ಬರುವದರಿಂದ ಅವುಗಳ ನೀರು ಪಚನಕ್ಕೆ ಹಗುರಾಗಿರುತ್ತದೆ. ಚಕ್ರಪಾಣಿ ದತ್ತನು

**ಯಥೋಕ್ತಲಕ್ಷಣಹಿಮಾಲಯಭವತ್ವಾದೇವ ಗಾಂಗಂ ಜಲಂ ಪಥ್ಯಂ ।**

"ಮೇಲಿನ ಲಕ್ಷಣಗಳಿರುವ ಗಂಗಾ ನದಿಯ ಉಗಮ ಹಿಮಾಲಯದಲ್ಲಿದೆ. ಆದುದರಿಂದಲೇ ಅದರ ನೀರು ಹಿತಕರವಾಗಿದೆ" ಎಂದು ಹೇಳಿದ್ದಾನೆ.

ಪುಣೆಯ 'ಭಾಂಡಾರಕರ ರಿಸರ್ಚ ಇನ್‌ಸ್ಟಿಟ್ಯೂಟ' ದಲ್ಲಿ 'ಭೋಜನ ಕುತೂಹಲ' ಎಂಬುದೊಂದು ಹಸ್ತಲಿಖಿತ ಗ್ರಂಥವಿದೆ. ಅದರಲ್ಲಿ

**ಶ್ವೇತಂ ಸ್ವಾದು ಸ್ವಚ್ಛಮತ್ಯಂತರುಚ್ಯಂ**
**ಪಥ್ಯಂ ಪಾಕ್ಯಂ ಪಾಚನಂ ಪಾಪಹಾರಿ ।**

"ಈ ಗಂಗಾಜಲವು ಶುಭ್ರ, ಸ್ವಚ್ಛ, ಸ್ವಾದಿಷ್ಟ, ರುಚಿಕರ, ಅಡಿಗೆಗೆ ಯೋಗ್ಯ, ಪಚನ ಶಕ್ತಿಗೆ ಪೋಷಕ ಮತ್ತು ಪಾಪಗಳನ್ನು ನಾಶಮಾಡುವದಾಗಿದೆ" ಎಂದು ಹೇಳಿದೆ. ಗಂಗಾಜಲವು ಬುದ್ಧಿವರ್ಧಕವೂ ಆಗಿದೆ. ಗಂಗಾಜಲದಲ್ಲಿ ಇಷ್ಟೆಲ್ಲ ಗುಣಗಳಿವೆಯೆಂದೇ ನಾವು ಪ್ರಾಚೀನ ಕಾಲದಿಂದಲೂ ಅದನ್ನು 'ತೀರ್ಥ' ಎಂಬ ಪಾವಿತ್ರ್ಯನಿದರ್ಶಕ ಸಂಜ್ಞೆಯಿಂದ ಸಂಬೋಧಿಸುತ್ತ ಬಂದಿದ್ದೇವೆ.

ಬಹುಗುಣ ಸಂಪನ್ನವಾದ ಪವಿತ್ರ ಗಂಗಾಜಲದ ಸೇವನೆಯನ್ನು ಹಿಂದುಗಳಂತೂ ಸರಿ, ಭಾರತದಲ್ಲಿ ಆಳಿದ ವಿದೇಶೀ ರಾಜರು ಕೂಡ ಮಾಡುತ್ತಿದ್ದರು. ೧೯ನೆಯ ಶತಮಾನದಲ್ಲಿ ಆಗಿ ಹೋದ ಮಹಮ್ಮದ ತಘಲಕನು ನಿಯಮಿತವಾಗಿ ಗಂಗಾಜಲವನ್ನು ಪಾನಮಾಡುತ್ತಿದ್ದನು. ಅವನು ದೌಲತಾಬಾದದಲ್ಲಿ ವಾಸಿಸುತ್ತಿದ್ದರೂ ಕಾಶಿಯಿಂದ ಗಂಗಾಜಲವನ್ನು ತರಿಸಿಕೊಳ್ಳುತ್ತಿದ್ದನು. ಕಾಶಿಯಿಂದ ಗಂಗಾಜಲವನ್ನು ದೌಲತಾಬಾದಕ್ಕೆ ತರಲು ೪೦ ದಿನಗಳು ಹಿಡಿಯುತ್ತಿದ್ದವು. ಅದರಂತೆ ವಿಪರೀತ ವೆಚ್ಚವೂ ಬರುತ್ತಿತ್ತು.

ಮಹಮ್ಮದ ತಘಲಕನಂತೆ ಅಕಬರ ಬಾದಶಾಹನಿಗೂ ಗಂಗಾಜಲವಿಲ್ಲದೆ ನಡೆಯುತ್ತಿರಲಿಲ್ಲ. ಅಬುಲ ಫಜಲನು ಅಕಬರನ ವಿಚಾರವಾಗಿ ಬರೆದಿರುವ 'ಆಯಿನೆ ಅಕಬರಿ' ಗ್ರಂಥದಲ್ಲಿ ಅಕಬರನಿಗೆ ಗಂಗಾಜಲವು ಎಷ್ಟು ಪ್ರಿಯವಾಗಿತ್ತು ಎಂಬುದನ್ನು ಹೀಗೆ ವರ್ಣಿಸಿದೆ:

"ಬಾದಶಾಹನಿಗೆ ಗಂಗಾಜಲವು ಅಮೃತದಂತೆ ಭಾಸವಾಗುತ್ತಿತ್ತು. ಗಂಗಾಜಲವು ತನಗೆ ತಪ್ಪದೆ ಸಿಗಬೇಕೆಂದು ಆತನು ಅದಕ್ಕಾಗಿ ಪ್ರತ್ಯೇಕ ಜನರನ್ನೇ ನೇಮಿಸಿಕೊಂಡಿದ್ದನು. ಈ ಜನರು ಗಂಗಾನದಿಯ ದಂಡೆಯಲ್ಲಿ ವಾಸಿಸುತ್ತಿದ್ದರು. ಗಂಗಾಜಲವನ್ನು ಕೊಡಗಳಲ್ಲಿ ತುಂಬಿ ಬಾಯಿಗೆ ಮುದ್ರೆಯೊತ್ತಿ ಬಾದಶಾಹನಿಗೆ ಕಳಿಸಿ ಕೊಡುತ್ತಿದ್ದರು. ಗಂಗಾಜಲವನ್ನಲ್ಲದೆ ಬೇರೆ ನೀರನ್ನೇ ಬಾಹಶಾಹನು ಕುಡಿಯುತ್ತಿರಲಿಲ್ಲ. ಬಾದಶಾಹನಿಗಾಗಿ ಸಿದ್ಧಪಡಿಸುತ್ತಿದ್ದ ಅಡಿಗೆಗೆ ಉಪಯೋಗಿಸುತ್ತಿದ್ದ ಮಳೆಯ ನೀರು ಅಥವಾ ಯಮುನಾ ನದಿಯ ನೀರಿನಲ್ಲೂ ತುಸು ಗಂಗಾ

ಗಂಗಾನದಿ ಭಾರತದ ಪುರಾಣಗಳ ಪ್ರಕಾರ ದೇವಲೋಕದ ನದಿ. ಅವಳನ್ನು ಭೂಮಿಗಿಳಿಸಿದವನು ಇಕ್ಷ್ವಾಕು ವಂಶದ ಭಗೀರಥರಾಜ. ಭಗೀರಥನ ಮುತ್ತಜ್ಜಂದಿರಾದ ೬೦ ಸಾವಿರ ಸಗರಪುತ್ರರು ಕಪಿಲ ಮುನಿಯನ್ನು ಕೆರಳಿಸಿ ಅವನ ಕೋಪಾಗ್ನಿಯಿಂದ ಭಸ್ಮವಾದರು. ಅವರಿಗೆ ಸದ್ಗತಿಯನ್ನುಂಟುಮಾಡಲು ದೇವಲೋಕದಿಂದ ಗಂಗೆಯನ್ನು ಭೂಮಿಗಿಳಿಸಬೇಕೆಂದು ಭಗೀರಥನು ತಪಸ್ಸು ಮಾಡಿದನು. ಆದರೆ ದೇವಲೋಕದಿಂದ ಧುಮುಕುವ ಅವಳ ವೇಗವನ್ನು ತಡೆಯಲಸಾಧ್ಯವೆನಿಸಿತು. ಭಗೀರಥನು ಮತ್ತೆ ತಪಸ್ಸು ಮಾಡಿ ಶಿವನನ್ನು ಮೆಚ್ಚಿಸಿ ಅವನ ತಲೆಯಮೇಲೆ ಗಂಗೆ ಬಿದ್ದು ಆ ಮೇಲೆ ಸಾವಧಾನವಾಗಿ ಭೂಮಿಗಿಳಿಯುವಂತೆ ವರ ಪಡೆದನು.

ಬಳಿಕ ಭಗೀರಥನನ್ನು ಅನುಸರಿಸಿ ಬಂದ ಗಂಗೆ ದಾರಿಯಲ್ಲಿ ಜನ್ಹುವಿನ ಯಜ್ಞಶಾಲೆಯಲ್ಲಿ ನುಗ್ಗಿದ್ದರಿಂದ ಅವನು ಸಿಟ್ಟಾಗಿ ಅವಳನ್ನು ನುಂಗಿಬಿಟ್ಟನು. ಭಗೀರಥನು ಅವನನ್ನೊಲಿಸಿ ಗಂಗೆಯನ್ನು ಕಿವಿಯಿಂದ ಹೊರಬಿಡುವಂತೆ ಮಾಡಿದನು.

ಇಷ್ಟೆಲ್ಲ ಕಷ್ಟಪಟ್ಟು ಭಗೀರಥನು ಅವಳನ್ನು ತನ್ನ ಮುತ್ತಜ್ಜಂದಿರಾದ ಸಗರರ ಬೂದಿಯ ಮೇಲೆ ಹರಿಸಿ ಅವರಿಗೆ ಸದ್ಗತಿಯುಂಟುಮಾಡಿದನು. ಆದಕ್ಕಾಗಿ ಇಂದಿಗೂ ಮಹಾಪ್ರಯತ್ನವನ್ನು "ಭಗೀರಥ ಪ್ರಯತ್ನ" ವೆಂದು ವಿಶೇಷಿಸಲಾಗುತ್ತದೆ.

ಭಗೀರಥನ ಸಂಬಂಧದಿಂದ "ಭಾಗೀರಥಿ" ಯೆಂದೂ ಜಹ್ನುವಿನ ಸಂಬಂಧದಿಂದ "ಜಾಹ್ನವಿ" ಯೆಂದೂ ಗಂಗೆಗೆ ಹೆಸರುಗಳು ಬಂದಿವೆ.

ಜಲವನ್ನು ಸೇರಿಸುತ್ತಿದ್ದರು. . . ."

ಹಿಂದುಗಳ ಮತ್ತು ಹಿಂದು ಧರ್ಮದ ಕಡು ವೈರಿಯಾದ ಔರಂಗಜೇಬ ಬಾದಶಾಹನಿಗೂ ಗಂಗಾಜಲವಿಲ್ಲದೆ ಸಾಗುತ್ತಿರಲಿಲ್ಲ. ೧೬೫೯ ರಿಂದ ೧೬೭೭ರ ನಡುವಿನ ಕಾಲದಲ್ಲಿ ಬರ್ನಿಯರ ಎಂಬ ಫ್ರೆಂಚ ಪ್ರವಾಸಿಯೊಬ್ಬ ಭಾರತದಲ್ಲಿದ್ದನು. ಆತನು ಬರೆದಿರುವ ಪ್ರವಾಸಗ್ರಂಥದಲ್ಲಿ ಔರಂಗಜೇಬನಿಗೆ ಗಂಗಾಜಲವು ಪ್ರಾಣಕ್ಕಿಂತಲೂ ಪ್ರಿಯವಾಗಿತ್ತು ಎಂಬ ಉಲ್ಲೇಖವಿದೆ. ಆತನ ದರಬಾರದ ಜನರೂ ಗಂಗಾಜಲವನ್ನು ಉಪಯೋಗಿಸುತ್ತಿದ್ದರು. ಪ್ರವಾಸದಲ್ಲಿ ಔರಂಗಜೇಬನು ತನ್ನ ಸಂಗಡ ಗಂಗಾಜಲವನ್ನೊಯ್ಯುತ್ತಿದ್ದನು. ಗಂಗಾಜಲವನ್ನು ಒಂಟೆಗಳ ಮೂಲಕ ತರಿಸುತ್ತಿದ್ದರು. ಮುಂಜಾನೆ ಉಪಾಹಾರದ ನಂತರ ಕುಡಿಯಲು ಔರಂಗಜೇಬನು ಗಂಗಾಜಲವನ್ನೇ ಉಪಯೋಗಿಸುತ್ತಿದ್ದನು.

ಟೆವ್ಹರ್ನಿಯರ ಎಂಬ ಫ್ರೆಂಚ ಪ್ರವಾಸಿಯು ಪುಸ್ತಕದಲ್ಲಿ ನವಾಬರು ಗಂಗಾಜಲವನ್ನು ಉಪಯೋಗಿಸುತ್ತಿದ್ದರು ಎಂಬ ದಾಖಲೆಯಿದೆ. ಲಗ್ನ ಹಾಗು ಇನ್ನಿತರ ಸಮಾರಂಭ ಪ್ರಸಂಗಗಳಲ್ಲಿ ಆಮಂತ್ರಿತರಿಗೆ ಕುಡಿಯಲು ಗಂಗಾಜಲವನ್ನು ಕೊಡಲಾಗುತ್ತಿತ್ತು ಎಂದು ಆತ ಬರೆದಿದ್ದಾನೆ. ಎಡ್ವರ್ಡ ಮೂರನು ಟೀಪೂ ಸುಲ್ತಾನನೊಂದಿಗೆ ಯಾವದೋ ಯುದ್ಧದಲ್ಲಿ ಭಾಗವಹಿಸಿದ್ದನು. "ಟೀಪೂ ಸುಲ್ತಾನನು ಗಂಗಾಜಲವನ್ನು ಮಾತ್ರ ಕುಡಿಯುತ್ತಿದ್ದನು" ಎಂದು ಅವನು ಬರೆದಿದ್ದಾನೆ. ಮಹಾರಾಷ್ಟ್ರ ರಾಜ್ಯಕರ್ತರಂತೂ ಗಂಗಾಜಲವನ್ನು ಅಮೃತತುಲ್ಯವೆಂದು ಭಾವಿಸುತ್ತಿದ್ದರು. ಬಹು ಕಷ್ಟದಿಂದ, ಬಹಳ ಹಣ ವೆಚ್ಚ ಮಾಡಿ ಪೇಶವೆಯರಿಗಾಗಿ ಕಾಶಿಯಿಂದ ಗಂಗಾಜಲವನ್ನು ತರಲಾಗುತ್ತಿತ್ತು.

ಪ್ರತಿ ವರ್ಷ ಲಕ್ಷಗಟ್ಟಳೆ ಹಿಂದುಗಳು ಈ ಪವಿತ್ರ ನದಿಯಲ್ಲಿ ಸ್ನಾನ ಮಾಡುತ್ತಾರೆ.

ತಾಮ್ರದ ಪಾತ್ರೆಗಳಲ್ಲಿ ಗಂಗಾಜಲವನ್ನು ತುಂಬಿ ಕೊಂಡು ಮನೆಗೆ ತರುತ್ತಾರೆ. ತಾಮ್ರದ ಪಾತ್ರೆ ಗಳಲ್ಲಿ ಬಾಯಿಗೆ ಮುದ್ರೆಹಾಕಿಟ್ಟರೆ ಗಂಗಾಜಲವು ಎಷ್ಟು ವರ್ಷವಾದರೂ ತುಸುವಾದರೂ ಕೆಡುವ ದಿಲ್ಲವೆಂಬುದು ಸರ್ವವಿದಿತವಾಗಿದೆ. ಇದರ ಸತ್ಯಾಸತ್ಯತೆಗಳ ಬಗ್ಗೆ ಶಾಸ್ತ್ರೀಯ ಸಂಶೋಧ ನವೂ ಆಗಿದೆ. ಅಮೇರಿಕದಲ್ಲಿ ಪ್ರಕಟವಾಗುವ 'ಸೆಲ್ಫ್ ರಿಯಲಾಯಝೇಶನ್' ಮಾಸಿಕದ ೧೯೫೪ರ ಒಂದು ಸಂಚಿಕೆಯಲ್ಲಿ 'ಭಾರತದ ಸರ್ವೋತ್ಕೃಷ್ಟತೆ' ಎಂಬ ಒಂದು ಲೇಖ ಬಂದಿದೆ. ಕಾನಡಾದ ಮ್ಯಾಕಗಿಲ್ ವಿಶ್ವವಿದ್ಯಾ ಲಯದ ಡಾ॥ ಎಫ್. ಸಿ. ಹ್ಯಾರಿಸನ್ನರು ಈ ಲೇಖದಲ್ಲಿ ಗಂಗಾಜಲದ ವಿಷಯವಾಗಿ ಈ ರೀತಿ ಬರೆದಿದ್ದಾರೆ:

"ಗಂಗಾನದಿಯ ನೀರಿನಲ್ಲಿ ಕಾಲರಾದ ಜಂತುಗಳು ಮೂರರಿಂದ ಐದು ತಾಸುಗಳೊಳ ಗಾಗಿ ಸಾಯುತ್ತವೆ. ಗಂಗಾನದಿಯಲ್ಲಿ ಅನೇಕ ಬಗೆಯ ಕೊಳೆ ತೇಲಿ ಬರುತ್ತದೆ. ಹಾಗಿದ್ದರೂ ಸಾವಿರಾರು ಹಿಂದುಗಳು ಸ್ನಾನ ಮಾಡುತ್ತಾರೆ. ಗಂಗಾನದಿಯ ನೀರು ಎಂದಿಗೂ ಕೆಡುವದಿಲ್ಲ; ಅದನ್ನು ಉಪಯೋಗಿಸಿದರೆ ಏನೂ ಕೆಡಕಿಲ್ಲ ಎಂದು ಅವರು ನಂಬುತ್ತಾರೆ. ಅವರ ಈ ನಂಬಿ ಗೆಯ ಆಧಾರದಿಂದ ಆಧುನಿಕ ಕ್ರಿಮಿಶಾಸ್ತ್ರೀಯ ಸಂಶೋಧನವನ್ನು ನಡೆಸಿ ನೋಡಬೇಕು . . . "

ಈ ವಿಚಾರದಲ್ಲಿ ಪ್ರಖ್ಯಾತ ಫ್ರೆಂಚ ಡಾಕ್ಟರ ಡಿ. ಹೆರೆಲಿಯವರು ಕೂಡ ಕೆಲ ಪ್ರಯೋಗಗ ಳನ್ನು ಮಾಡಿದ್ದಾರೆ. ಅತಿಸಾರ ಮತ್ತು ಕಾಲರಾ ರೋಗಗಳಿಂದ ಸತ್ತ ಕೆಲವರ ಶವಗಳು ಗಂಗಾ ನದಿಯಲ್ಲಿ ತೇಲುತ್ತಿದ್ದವು. ನಿಜವಾಗಿಯೆಂದರೆ ಈ ಶವಗಳ ಕೆಳಗೆ ಕೆಲವು ಅಡಿಗಳ ವರೆಗೂ ನೀರಿ ನಲ್ಲಿ ರೋಗಜಂತುಗಳು ಕಾಣಸಿಗಬೇಕು. ಆದರೆ ಆ ಶವಗಳ ಅಕ್ಕಪಕ್ಕದಲ್ಲೂ ರೋಗ ಜಂತುಗಳು ಕಂಡುಬರಲಿಲ್ಲ. ಇದನ್ನು ಕಂಡು ಡಾ॥ ಹೆರೆಲಿಯವರಿಗೆ ಆಶ್ಚರ್ಯವಾಯಿತು. ಅವರು ಇನ್ನೂ ಒಂದು ಪ್ರಯೋಗ ಮಾಡಿದರು. ಕೆಲ ರೋಗಿಗಳ ದೇಹದಿಂದ ಅವರು ಕೆಲ ರೋಗ ಜಂತುಗಳನ್ನು ಸಂಪಾದಿಸಿ ಅವನ್ನು ಬೆಳೆಸಿದರು. ನಂತರ ಅವುಗಳನ್ನಿಟ್ಟ ನಳಿಗೆಯಲ್ಲಿ ತುಸು ಗಂಗಾ ಜಲವನ್ನು ತುಂಬಿದರು. ಕೆಲ ವೇಳೆಯ ನಂತರ ನಳಿಗೆಯಲ್ಲಿದ್ದ ಸಕಲ ರೋಗ ಜಂತುಗಳೂ ಸಂಪೂರ್ಣ ನಾಶವಾಗಿರುವದು ಅವರಿಗೆ ಕಂಡು ಬಂತು.

ಇನ್ನೂ ಒಂದು ಸಾಮಾನ್ಯ ಪ್ರಮಾಣವು ಗಮ ನಾರ್ಹವಾಗಿದೆ. ಗಂಗಾಜಲದ ಶುದ್ಧತೆಯ ವಿಷಯವಾಗಿ ಬ್ರಿಟಿಶ್ ಡಾಕ್ಟರ ಸಿ. ಈ. ನೆಲ್ಸನ್, ಎಫ್. ಆರ್. ಸಿ. ಎಸ್., ಇವರು ಹೀಗೆ ಬರೆದಿ ರುವರು :

"ಕಲಕತ್ತೆಯಿಂದ ಇಂಗ್ಲಂಡಿಗೆ ಹೋಗುವ ಹಡಗುಗಳು ಹುಗಳಿ ನದಿಯ ನೀರನ್ನು ತುಂಬಿ ಕೊಳ್ಳುತ್ತವೆ. ಹುಗಳಿ ನದಿಯು ಗಂಗಾನದಿಯ ಮುಖವೇ ಆಗಿದೆ. ಇಂಗ್ಲಂಡನ್ನು ತಲುಪುವ ವರೆಗೂ ಈ ನೀರು ಶುದ್ಧವಾಗಿಯೆ ಇರುತ್ತದೆ. ಆದರೆ ಇಂಗ್ಲಂಡಿನಿಂದ ಹಿಂದುಸ್ತಾನಕ್ಕೆ ಬರುವ ಹಡಗಗಳಲ್ಲಿ ತುಂಬಿಕೊಂಡ ನೀರು ಮುಂಬ ಯಿಗೆ ಬರುವ ವರೆಗೆ ಕೂಡ ಶುದ್ಧವಾಗಿರುವ ದಿಲ್ಲ. ಹಾದಿಯಲ್ಲಿ ಪೋರ್ಟಸಯ್ಯದ, ಸುಯೇಜ ಅಥವಾ ಏಡನಿನಲ್ಲಿ ಲಂಡನ್ನಿನಲ್ಲಿ ತುಂಬಿ ಕೊಂಡ ನೀರನ್ನು ಚೆಲ್ಲಿ ಹೊಸ ನೀರನ್ನು ತುಂಬಿ ಕೊಳ್ಳಬೇಕಾಗುತ್ತದೆ. ಪಾಶ್ಚಿಮಾತ್ಯ ದೇಶಗಳ ಲ್ಲಿಯೂ ಚರ್ಮರೋಗಗಳ ಚಿಕಿತ್ಸೆಗಾಗಿ ಗಂಗಾ ನದಿಯ ನೀರನ್ನು ಉಪಯೋಗಿಸುತ್ತಾರೆಂದು ತಿಳಿಯುತ್ತದೆ. ವಿಶೇಷ ಸಂಶೋಧನ ನಡೆಸಿ ದಲ್ಲಿ ಹಿಮಾಲಯದಲ್ಲಿ ಗಂಗಾನದಿಯ ಉಗಮ ವಿರುವಲ್ಲಿ ವಿಶಿಷ್ಟ ಪ್ರಕಾರದ ಜಂತುನಾಶಕ ಮಹಾಶಕ್ತಿಶಾಲಿ ತತ್ವಗಳು ಕಂಡುಬರುವ ಸಂಭವವಿದೆ. ಯಾಕಂದರೆ ಹಿಮಾಲಯದ ಆ ಪ್ರದೇಶವು ವನಸ್ಪತಿ, ಔಷಧಿ ಮತ್ತು ಖನಿಜ ಪದಾರ್ಥಗಳ ಆಗರವಾಗಿದೆ."

ಪುರಾತನರು "ಔಷಧಂ ಜಾಹ್ನವೀತೋಯಂ ವೈದ್ಯೋ ನಾರಾಯಣೋ ಹರಿಃ" ಎಂದಾಗ ವೈಜ್ಞಾನಿಕಸತ್ಯವನ್ನೇ ಆಡಿದ್ದರು.

ಕ್ಷುದ್ರ ಕೀಟಗಳಲ್ಲಿ
ಕೂಡ ತಾಯ್ತನದ
ಪ್ರೇರಣೆಯಿದೆ.

# ಈ ಜೀವಿಗಳಿಗೆ ತಾಯಿಯೇ ಸಮ್ರಾಜ್ಞಿ

ಮನೋಹರದಾಸ ಚತುರ್ವೇದಿ

ವಿಶ್ವದಲ್ಲಿಯ ಸಮಸ್ತ ಜೀವರಾಶಿಯ ಜೀವನಕ್ಕೂ ಸೃಷ್ಟಿಯ ಒಂದೇ ಮೂಲ ಭೂತ ನಿಯಮ ಆಧಾರವಾಗಿರುತ್ತದೆ. ಇಷ್ಟೊಂದು ಮಹತ್ವದ್ದಾದರೂ ಈ ನಿಯಮ ಸ್ವಾಭಾವಿಕವೂ ಸರಳವೂ ಆಗಿದೆ. ಈ ನಿಯಮದ ಅನಾದಿ–ಅನಂತ ಮಂತ್ರವು ಸದಾಸರ್ವದಾ ಪ್ರತಿಯೊಂದು ಜೀವಿಯ ಕಿವಿಯಲ್ಲಿ ಗುಣುಗುಟ್ಟುತ್ತಿರುತ್ತದೆ. ಆ ಮಂತ್ರವೆಂದರೆ: ಎಲ್ಲಕ್ಕಿಂತಲೂ ಹೆಚ್ಚಿಗೆ ಪ್ರಿಯವಾದದ್ದು ತನ್ನ ಜೀವ, ಅದಕ್ಕಿಂತಲೂ ಪ್ರಿಯವಾದದ್ದು ತನ್ನ ಸಂತಾನ.

ಪ್ರತಿಯೊಂದು ಜೀವಿ—ಅದು ಸಣ್ಣದಿರಲಿ, ದೊಡ್ಡದಿರಲಿ—ಪ್ರತಿಯೊಂದು ಕ್ಷಣದಲ್ಲೂ ತನ್ನ ಪ್ರಾಣರಕ್ಷಣೆಯ ಕಾರ್ಯದಲ್ಲಿ ತತ್ಪರವಾಗಿರುತ್ತದೆ. ಜೀವನದ ಪ್ರತಿ ನಿಮಿಷದಲ್ಲೂ ಬದುಕು–ಸಾವುಗಳ ಹೋರಾಟದಲ್ಲಿ ಮಗ್ನವಾಗಿರುತ್ತದೆ.

ಬದುಕು-ಸಾವುಗಳ ಈ ಹೋರಾಟದಲ್ಲಿ ಪ್ರತಿಯೊಂದು ಜೀವ ಕೇವಲ ಮೃತ್ಯುವಿನೊಂದಿಗೆ ಹೋರಾಡುವದಿಷ್ಟೇ ಅಲ್ಲ, ತನ್ನ ನಂತರ ತನ್ನ ವಂಶ ಬಾಳಬೇಕೆಂಬ ಪ್ರಯತ್ನವನ್ನೂ ಮಾಡುತ್ತಿರುತ್ತದೆ. ಈ ಕಾರಣಕ್ಕಾಗಿಯೇ ಪ್ರತಿಯೊಂದು ಜೀವ ತನ್ನ ಸಂತಾನರಕ್ಷಣೆ ಮತ್ತು ವೃದ್ಧಿಗಾಗಿ ತನ್ನ ಪ್ರಾಣವನ್ನೂ ಪಣವಾಗಿಡುತ್ತದೆ. ವಾಸ್ತವವಾಗಿ ಸೃಷ್ಟಿಸಂಚಾಲನದ ನಿಜಶಕ್ತಿ ತಾಯಿಯೆ ಆಗಿದ್ದಾಳೆ. ತಾಯಿಯ ಹೃದಯದಲ್ಲಿ ತನ್ನ ಸಂತಾನದ ಪಾಲನೆ-ಪೋಷಣೆಯ ಸ್ವಾಭಾವಿಕ ಒಲವು - ಪ್ರೇರಣೆಗಳ ಅಂಕುರವಿರದಿದ್ದರೆ ಸೃಷ್ಟಿಯ ಅಂತ್ಯ ಎಂದೋ ಆಗಿಹೋಗುತ್ತಿತ್ತು.

'ಸೈನಿಕ ಸಮಾಚಾರ' ದಿಂದ

ಸಮಸ್ತ ಸೃಷ್ಟಿಯ ಭಾರವೂ ತಾಯಿಯ ಮೇಲೇ ಇದೆ, ಪ್ರತಿ ಜೀವವೂ ತನ್ನ ಜೀವನಕ್ಕಾಗಿ ತನ್ನ ತಾಯಿಗೆ ಋಣಿಯಾಗಿರುತ್ತದೆ. ತಾಯಿಯೆ ಪ್ರಕೃತಿಯ ಪ್ರತ್ಯಕ್ಷ ಮತ್ತು ಜೀವಂತ ಸ್ವರೂಪ ಳಾಗಿದ್ದಾಳೆ.

ತನ್ನ ಸಂತಾನಕ್ಕೆ ಜನ್ಮವೀಯುವ ಪ್ರತಿ ತಾಯಿಯೂ ಆಗ ಹೊಸ ಜನ್ಮವೆತ್ತುತ್ತಾಳೆ. ತನ್ನ ಸಂತಾನದ ರಕ್ಷಣೆಗಾಗಿ, ಪೋಷಣೆಗಾಗಿ ತಾಯಿ ತನ್ನ ಪ್ರಾಣವನ್ನು ಅಂಗೈಯಲ್ಲಿಟ್ಟು ಕೊಂಡು ಶ್ರಮಿಸುತ್ತಾಳೆ.

ಕೀಟಕ ಜಗತ್ತಿನಲ್ಲಿ ತಾಯಿಯ ಸ್ಥಾನ ಬಹು ಉನ್ನತವಾದುದು. ಕೀಟ ಸಂಸಾರ ಅಪಾರ ವಾಗಿದೆ. ತಜ್ಞರು ಇದು ವರೆಗೆ ಸುಮಾರು ಆರು ಲಕ್ಷ ಭಿನ್ನ ಭಿನ್ನ ಜಾತಿಯ ಕೀಟಗಳನ್ನು ಗುರು ತಿಸಿರುವರಾದರೂ ಇನ್ನೂ ಪೂರ್ತಿಯಾಗಿ ಕೀಟ ಜಾತಿಗಳ ನಿಶ್ಚಿತ ಸಂಖ್ಯೆ ದೊರೆತಿಲ್ಲ. ನಿಜವಾಗಿ ಯೆಂದರೆ ಇಂದಿನದು ಮನುಷ್ಯಯುಗವಾಗಿರದೆ ಕೀಟಕಯುಗವಾಗಿದೆ.

ಈಗ ಮೊದಲಿಗೆ ಇರುವೆಯ ವಿಚಾರ ನೋಡೋಣ. ಇರುವೆಗಳಲ್ಲಿ ಸುಮಾರು ೨,೦೦೦ ಜಾತಿಗಳಿವೆ. ಇರುವೆ ಸಾಮೂಹಿಕವಾದ ಸಹ ಕಾರಿ ಜೀವನವನ್ನು ಸಾಗಿಸುವ ಕೀಟಕವಾಗಿದೆ. ಮಾನವ ಸಮಾಜದಂತೆ ಇರುವೆಗಳ ಸಮಾಜ ದಲ್ಲಿ ಎಂದೂ ತಂಟೆ, ಜಗಳಗಳಾಗುವದಿಲ್ಲ, ಹರತಾಳವಾಗುವದಿಲ್ಲ, ಸಂಪು ಜರುಗುವದಿಲ್ಲ. ಅಲ್ಲಿ ಅನೇಕಾನೇಕ ವಿಧಿ-ನಿರ್ಬಂಧಗಳಿಲ್ಲ, ಒಂದೇ ಒಂದು ಶಾಸನ. ಒಂದೇ ವ್ಯಕ್ತಿಯ ರಾಜ್ಯವಿದೆ. ಆ ವ್ಯಕ್ತಿಯೆಂದರೆ ತಾಯಿ. ತಾಯಿ–ಇರುವೆಯನ್ನು ಇರುವೆಗಳ ಸಮಸ್ತ ಸಮೂಹವು ತನ್ನ ರಾಣಿಯೆಂದು ಮನ್ನಿಸಿ ಅದರ ಆಜ್ಞೆಯನ್ನು ಪಾಲಿಸುತ್ತದೆ.

ಪ್ರಾರಂಭದಲ್ಲಿ ತಾಯಿ–ಇರುವೆಗೆ ಪರೆ ಬಂದಿ ರುತ್ತದೆ. ಗಂಡಿನೊಡನೆ ಸಮಾಗಮವಾಗಿ ಗರ್ಭ ಧಾರಣ ಮಾಡಿದ ಹೆಣ್ಣು ಇರುವೆ ಒಂದು ಸ್ಥಳ ವನ್ನು ತನ್ನ ಸಂತಾನದ ಪಾಲನೆ-ಪೋಷಣೆಗಾಗಿ ಆರಿಸಿಕೊಳ್ಳುತ್ತದೆ. ಗಂಡು ಸತ್ತುಹೋಗುತ್ತದೆ. ಹೆಣ್ಣು ಇರುವೆ ತನ್ನ ಪರೆಯನ್ನು ಕೊಡವಿ ಹಾಕಿ ತತ್ತಿಗಳನ್ನು ಇಡುತ್ತ ಹೋಗುತ್ತದೆ. ಈ ತತ್ತಿ ಗಳಿಂದ ಹೊರಡುವ ಮರಿಗಳು ಭಿನ್ನ ಭಿನ್ನ ಕಾರ್ಯಗಳನ್ನು ಮಾಡುತ್ತವೆ; ಅವು ಆಹಾರವನ್ನು ಕೂಡಿಸುತ್ತವೆ, ಹೊಸ ಮರಿಗಳನ್ನು ಸಾಕುತ್ತವೆ, ಹುತ್ತವನ್ನು ಕಟ್ಟಿ ಅದನ್ನು ಕೆಡದಂತೆ ನೋಡಿ ಕೊಳ್ಳುತ್ತವೆ. ಅಕಸ್ಮಾತ್ತಾಗಿ ತಾಯಿ ಇರುವೆ (ರಾಣಿ ಇರುವೆ)ಯೇನಾದರೂ ಸತ್ತು ಹೋಯಿ ತಾದರೆ ಸಮಸ್ತ ಸಮೂಹವೇ ನಷ್ಟವಾಗಿ ಹೋಗುತ್ತದೆ.

ಜೇನ್ನೊಣಗಳಲ್ಲೂ ಇರುವೆಗಳಂತೆಯೆ ರಾಣಿ ನೊಣದ ಕಾರಭಾರ ನಡೆಯುತ್ತದೆ. ಜೇನು ಹುಟ್ಟಿನಲ್ಲಿರುವ ಕೋಣೆಗಳಲ್ಲಿ ಎಲ್ಲಕ್ಕೂ ದೊಡ್ಡ ದಾದ ಕೋಣೆ ರಾಣಿದುಂಬಿಗೆ ಮೀಸಲು. ರಾಣಿ ಉಳಿದವುಗಳಿಗಿಂತ ದೊಡ್ಡದಾಗಿರುತ್ತದೆ. ಅದರ ದಂಶದ ತೀವ್ರತೆಯೂ ಅಧಿಕವಾಗಿರು ತ್ತದೆ. ಹೆಣ್ಣು (ಕೆಲಸಗಾರ) ನೊಣಗಳು ಬೇರೆ ಬೇರೆ ಕೆಲಸಗಳನ್ನುಮಾಡುವವು. ಜೇನನ್ನು ಸಂಗ್ರಹಿಸುವದು, ಮರಿಗಳ ಜೋಪಾನ, ಹುಟ್ಟು ಕಾಯುವದು ಇತ್ಯಾದಿ ಕೆಲಸಗಳನ್ನೆಲ್ಲ ಅವು ಮಾಡುವವು. ಆದರೆ ರಾಣಿ ನೊಣದ ಏಕ ಮಾತ್ರ ಕಾರ್ಯವೆಂದರೆ ತತ್ತಿಗಳನ್ನಿಡುವದು. ಅದು ೨೪ ತಾಸುಗಳಲ್ಲಿ ೨-೩ ಸಾವಿರ ತತ್ತಿ ಗಳನ್ನು ಸಹಜವಾಗಿ ಇಡುತ್ತದೆ. ರಾಣಿ ನೊಣ ೨-೩ ವರ್ಷಗಳ ವರೆಗೆ ಬದುಕಿರುವದು. ಅದು ಸತ್ತ ಬಳಿಕ ಉಳಿದ ಹೆಣ್ಣು ನೊಣಗಳು ಬೇರೆ ರಾಣಿಯನ್ನಾರಿಸಿಕೊಳ್ಳುತ್ತವೆ.

ಜೇನ್ನೊಣಗಳಲ್ಲಿ ಬೇರೆ ಬೇರೆ ಜಾತಿಗಳಿದ್ದರೂ ಎಲ್ಲವುಗಳಲ್ಲೂ ರಾಣಿ ನೊಣದ ಶಾಸನವೇ ನಡೆ ಯುತ್ತದೆ. ರಾಣಿ ನೊಣ ತತ್ತಿಗಳನ್ನಿಟ್ಟರೂ ಮರಿಗಳ ಪಾಲನೆಯ ಕಾರ್ಯವನ್ನು ಮಾಡುವದಿಲ್ಲ. ಈ ಕಾರ್ಯವನ್ನು ಹೆಣ್ಣು ದುಂಬಿಗಳೇ ಮಾಡು ವವು. ತತ್ತಿಗಳ ಹಾಗು ಮರಿಗಳ ಯೋಗ-ಕ್ಷೇಮವನ್ನು ಅವೇ ನೋಡಿಕೊಳ್ಳುತ್ತವೆ.

ಇಲ್ಲಿಯೂ ಗಂಡು ಕೇವಲ ಸಂತಾನೋತ್ಪಾದನೆಗೆ ನಿಮಿತ್ತ. ಅದಕ್ಕೆ ಬೇರಾವ ಅಧಿಕಾರವಿಲ್ಲ.

ನೆಲದಲ್ಲಿ ಬಿಲವನ್ನು ತೋಡಿ ತತ್ತಿಗಳನ್ನಿಡುವ ಒಂದು ಜಾತಿಯ ಕಡಜೀರಿಗೆ ಹುಳವು ತನ್ನ ಹುಟ್ಟಲಿರುವ ಮಕ್ಕಳ ಯೋಗಕ್ಷೇಮಕ್ಕಾಗಿ ಅಪೂರ್ವ ದೂರದರ್ಶಿತ್ವವನ್ನು ಪ್ರದರ್ಶಿಸುತ್ತದೆ. ತಾಯಿ ಹುಳ ಮೊದಲಿಗೆ ಬಹಳಷ್ಟು ನಿರೀಕ್ಷಣೆ ನಡೆಸಿ ಒಂದು ಸುರಕ್ಷಿತ ಸ್ಥಳವನ್ನು ಆರಿಸಿಕೊಳ್ಳುತ್ತದೆ. ಬಳಿಕ ತತ್ತಿಗಳನ್ನಿಡುವದಕ್ಕಾಗಿ ಆಳವಾದ ಬಿಲವನ್ನು ತೋಡುತ್ತದೆ. ಆ ಮೇಲೆ ತನ್ನ ಭಾವಿ ಸಂತಾನದ ಆಹಾರಕ್ಕಾಗಿ ಯಾವುದಾದರೂ ದೊಡ್ಡ ಕೀಟಕದ ಮರಿಯನ್ನು ಹುಡುಕಿಕೊಂಡು ಹೋಗುತ್ತದೆ. ಅಂಥ ಮರಿ ಸಿಕ್ಕೊಡನೆ ಅದನ್ನು ಮೆಲ್ಲನೆ ಕುಟುಕಿ ಅರೆಜೀವ ಮಾಡುತ್ತದೆ. ಸತ್ತು ಹೋದರೆ ಆ ಮರಿ ಬಿಲದಲ್ಲಿ ಕೊಳೆತುಹೋದೀತು; ಕೈಕಾಲು ಗಟ್ಟಿಯಿದ್ದರೆ ಅದು ತಪ್ಪಿಸಿಕೊಂಡು ಹೋದೀತು; ಅದಕ್ಕೇ ಅದನ್ನು ಅತ್ತ ಸಾಯದ, ಇತ್ತ ಬದುಕದ ಸ್ಥಿತಿಗಿಳಿಸುವದು. ಅರ್ಧ ಮೃತವಾದ ಕೀಟಕವನ್ನು ಅದು ತನ್ನ ಬಿಲದ ಬಾಯಿಗೆ ಎಳೆದು ತರುತ್ತದೆ. ಅಲ್ಲಿ ಅದನ್ನಿಟ್ಟು ತಾನು ಮತ್ತೆ ಬಿಲದೊಳಕ್ಕೆ ಹೋಗಿ ಅದನ್ನು ಸ್ವಚ್ಛ ಮಾಡಿ ಹೊರಗಿಟ್ಟ ಕೀಟಕವನ್ನು ಒಳಗೆ ಎಳೆದುಕೊಂಡು ಬರುತ್ತದೆ. ನೋವಿನಿಂದ ಅರ್ಧಮೃತ ಸ್ಥಿತಿಯಲ್ಲಿ ಒದ್ದಾಡುತ್ತಿರುವ ಆ ಕೀಟಕದ ಮೈಮೇಲೆ ತನ್ನ ತತ್ತಿಗಳನ್ನಿಡುತ್ತದೆ. ತತ್ತಿಗಳಿಂದ ಮರಿಗಳು ಹೊರಬಿದ್ದೊಡನೆ ಅವುಗಳಿಗೆ ಆ ಕೀಟಕ ಔತಣವಾಗುತ್ತದೆ.

ತತ್ತಿಯಿಟ್ಟ ಬಳಿಕ ಈ ಹುಳವು ಬಿಲದಿಂದ ಹೊರಗೆ ಬಂದು ಬಿಲದ ಬಾಯನ್ನು ಮಣ್ಣಿನಿಂದ ಮುಚ್ಚಿ ಹಾರಿಹೋಗುತ್ತದೆ. ಆಶ್ಚರ್ಯದ ಮಾತೆಂದರೆ, ತನ್ನ ಮರಿಗಳಿಗಾಗಿ ಇಷ್ಟೆಲ್ಲ ಶ್ರಮ ವಹಿಸುವ ಈ ಹುಳ ಬಿಲದ ಬಾಯನ್ನು ಮುಚ್ಚಿದ ಬಳಿಕ ಮತ್ತೆ ಅತ್ತ ಮುಖವನ್ನು ಕೂಡ ಹಾಕುವದಿಲ್ಲ. ಮರಿಗಳು ದೊಡ್ಡವಾದ ಬಳಿಕ ತಾವೇ ಬಿಲದ ಬಾಯನ್ನು ಕೊರೆದುಕೊಂಡು ಹೊರಗೆ ಬರಬೇಕು.

ಕೀಟಕ ಸಂಸಾರದಲ್ಲಿ ಮರಿಗಳಿಗೆ ಸುಲಭವಾಗಿ ಆಹಾರ ಲಭ್ಯವಾಗುವಂಥ ಸ್ಥಳದಲ್ಲಿ ತತ್ತಿಗಳನ್ನಿಡುವದೇ ತಾಯಿ ಕೀಟಕದ ಧರ್ಮವಾಗಿದೆ. ತಾಯಿ ಮರಿಗಳ ಜೋಪಾನ ಮಾಡುವದಿಲ್ಲ. ತತ್ತಿಗಳನ್ನಿಟ್ಟ ಬಳಿಕ ಅದರ ಕಾರ್ಯ ಮುಗಿದುಹೋಯಿತು.

ಕೆಲ ಕೀಟಕಗಳು ತತ್ತಿಗಳನ್ನಿಡುವ ಬದಲು ಮರಿಗಳನ್ನೇ ಹಾಕುತ್ತವೆ. ಇಂಥ ಮರಿಗಳ ಪೋಷಣೆಯನ್ನು ತಾಯಿ ಸ್ವತಃ ಮಾಡುತ್ತದೆ. ಚೇಳು ಇದಕ್ಕೆ ಒಂದು ಉತ್ತಮ ಉದಾಹರಣೆ. ಚೇಳು ಒಂದೊಂದು ಸಲಕ್ಕೆ ಎರಡೆರಡರಂತೆ ಹತ್ತು ಹನ್ನೆರಡು ಮರಿಗಳನ್ನು ಇಡುತ್ತದೆ. ಮರಿಗಳು ಹುಟ್ಟಿದೊಡನೆ ತಾಯಿಯ ಬೆನ್ನೇರಿ ಕುಳಿತುಕೊಳ್ಳುತ್ತವೆ. ತಾಯಿ ಅವುಗಳನ್ನು ಹೊತ್ತುಕೊಂಡೇ ಆಹಾರಕ್ಕಾಗಿ ಅಲೆಯುತ್ತ ಅವುಗಳನ್ನು ಪೋಷಿಸುತ್ತದೆ.

ತತ್ತಿಗಳ ಬದಲು ಮರಿಗಳನ್ನು ಇಡುವ ಕೀಟಕಗಳ ಸಂತಾನದ ಸಂಖ್ಯೆ ಕಡಿಮೆಯಿರುತ್ತದೆ. ಲೆಕ್ಕವಿಲ್ಲದಷ್ಟು ಮರಿಗಳನ್ನು ಹಾಕುವ ತಾಯಿ ಅವುಗಳ ರಕ್ಷಣೆಯನ್ನು ಮಾಡುವದಾದರೂ ಎಂತು ?

ಕೀಟಕ ಸಂಸಾರದಲ್ಲಿ ತಾಯಿಯೇ ಮುಖ್ಯ. ತನ್ನ ವಂಶವೃದ್ಧಿ ಮತ್ತು ರಕ್ಷಣೆಗಾಗಿ ತಾಯಿ ಎಲ್ಲವನ್ನೂ ಮಾಡುತ್ತದೆ. ಗಂಡು ಹೆಣ್ಣಿನೊಡನೆ ಒಮ್ಮೆ ಬೆರತ ನಂತರ ಬಹುಶಃ ಸತ್ತು ಹೋಗುತ್ತದೆ. ಜೇಡರ ಹುಳವಂತೂ ತನ್ನ ಸಂಪರ್ಕ ಮಾಡಿದ ಗಂಡನ್ನು ಕೆಲಸವಾದೊಡನೆ ಕಬಳಿಸಿಯೇ ಬಿಡುತ್ತದೆ. ತತ್ತಿಗಳನ್ನು ಸುರಕ್ಷಿತ ಸ್ಥಳದಲ್ಲಿಡುವದು, ತತ್ತಿಗಳಿಂದ ಹೊರಬರುವ ಮರಿಗಳ ಆಹಾರದ ವ್ಯವಸ್ಥೆ ಮಾಡುವದು ಎಲ್ಲವನ್ನೂ ತಾಯಿ ಕೀಟವೇ ಮಾಡುತ್ತದೆ.

**ಇರುವೆಯ ವೇಗದಿಂದ ಓದುವ**
**ಬದಲು ಚಿಗರೆಯ ವೇಗದಿಂದ ಓದಿರಿ.**

# ನೀವು ಎಷ್ಟು ವೇಗ ಓದಬಲ್ಲಿರಿ?

ಇಂದಿನ ಕಾಲದಲ್ಲಿ ಬಹಳ ಜನರಿಗೆ ಓದುವುದು ವಿಶ್ರಾಮವಾಗಿರದೆ ದುಡಿಮೆಯೇ ಆಗಿದೆ. ಪತ್ರಗಳು, ಪುಸ್ತಕಗಳು ಎಲ್ಲ ತರದ ಲಿಖಿತ ಶಬ್ದಗಳನ್ನೂ ಓದಿ ಜೀರ್ಣಿಸಿಕೊಂಡು ಅವರು ನಿರ್ಣಯಗಳನ್ನು ಕೈಕೊಳ್ಳಬೇಕಾಗಿದೆ. ಯಾವನು ಬೇಗ ಬೇಗ ಓದಿ ಅರ್ಥ ಮಾಡಿಕೊಳ್ಳುವನೋ ಅವನಿಗೆ ವ್ಯವಸಾಯದಲ್ಲಿ ಗೆಲವಿನ ಸಂಭವ ಹೆಚ್ಚು. ವ್ಯಾಪಾರಿಗಳಿಂದ ಹಿಡಿದು ಪುಸ್ತಕ ವಿಮರ್ಶಕರ ವರೆಗೆ ಎಲ್ಲ ವ್ಯವಸಾಯಗಳಲ್ಲಿರುವವರಿಗೂ ಓದಿನ ಭಾರ ಹೆಚ್ಚುತ್ತಲೇ ಇದೆ. ಆದರೆ ನಮ್ಮಲ್ಲಿ ಬಹುಜನರಿಗೆ ಶೀಘ್ರವಾಗಿ ಓದಲು ಬರುವುದಿಲ್ಲೆಂದು ವಿಷಾದದಿಂದ ಒಪ್ಪಿಕೊಳ್ಳಬೇಕಾಗಿದೆ.

ಅಮೇರಿಕದ ಟೆಂಪಲ್ ವಿಶ್ವವಿದ್ಯಾಲಯದ "ಓದಿನ ದವಾಖಾನೆ" ಯ ನಿರ್ದೇಶಕರಾದ ಡಾ. ಎಮೆಟ್ ಬೆಟ್ಸರು ಶೀಘ್ರಪಠನದ ತಜ್ಞರು. ಅವರ ಸಲಹೆ ಪಡೆದವರನೇಕರು ಇಂದು ಇರುವೆಯ ಗತಿಯಿಂದ ಓದುವದನ್ನು ಬಿಟ್ಟು ಚಿಗರೆ ವೇಗದಿಂದ ಓದಲು ಕಲಿತಿದ್ದಾರೆ.

ರಾಶಿ ರಾಶಿ ಪತ್ರಗಳನ್ನೋದುವ ಅವಶ್ಯಕತೆಯುಳ್ಳ ಒಬ್ಬ ಕಂಪನಿ ಡೈರೆಕ್ಟರನು ಈಚೆಗೆ ಡಾ. ಬೆಟ್ಸರ ಸಹಾಯ ಕೋರಿ ಬಂದನು. ಅವರು ಅವನ ಓದಿನ ಪರೀಕ್ಷೆ ಮಾಡಿದರು. ಅವನು ಮಿನಿಟಿಗೆ ಸುಮಾರು ೧೬೦ ಶಬ್ದಗಳ ಮಂದಗತಿಯಿಂದ ಓದುತ್ತಿದ್ದನು. ಅವನು ಎಂಜಿನಿಯರನಾಗಿದ್ದನು. ಕಠಿನವಾದ ತಾಂತ್ರಿಕ ವಿಷಯಗಳನ್ನು ಅಭ್ಯಸಿಸುವಾಗ ಮೆಲ್ಲಗೆ ಓದುವ ಅಭ್ಯಾಸ ಅವನಿಗೆ ಬಿದ್ದುಹೋಗಿತ್ತು. ಈಗ ಸುಲಭ ವಿಷಯಗಳನ್ನು ಓದುವಾಗಲೂ ಅವನು ಇರುವೆಯೋಟದಲ್ಲೇ ಸಾಗುತ್ತಿದ್ದನು.

ಈ ಕಂಪನಿ ಡೈರೆಕ್ಟರನ ತೊಡಕು ಸರ್ವಸಾಮಾನ್ಯವಾದದ್ದು. ನಮ್ಮಲ್ಲಿ ಬಹಳ ಜನರಿಗೆ ಚಿಕ್ಕವರಿದ್ದಾಗ ಆ ವಯಸ್ಸಿನಲ್ಲಿ ಸಹಸಾ ಅರ್ಥವಾಗದ ವಿಷಯಗಳನ್ನು ಓದಬೇಕಾಗುವುದರಿಂದ ಮೆಲ್ಲಗೆ ಸಾಗುವ ಚಟ ಬಿದ್ದುಹೋಗುತ್ತದೆ. ಮುಂದೆ ಅದೇ ಕಾಯಂ ಆಗಿಬಿಡುತ್ತದೆ.

ಡಾ. ಬೆಟ್ಸರು ಈ ಡೈರೆಕ್ಟರನಿಗೆ ಮೊದಲು ಕೆಲ ಸಾಧಾರಣ ವಿಷಯಗಳನ್ನು ಬಹಳ ವೇಗವಾಗಿ ಓದುವಂತೆ ಒತ್ತಾಯಪಡಿಸಿದರು. ಆ ಮೇಲೆ ಕ್ಲಿಷ್ಟತರವಾದ ಪರೀಕ್ಷೆಗಳನ್ನೂ ವಿಧಿಸಿದರು. ಕೆಲದಿನಗಳಲ್ಲೇ ಅವನು ಮಿನಿಟಿಗೆ ೬೦೦

'ರೀಡರ್ಸ್ ಡೈಜೆಸ್ಟ್' ನಿಂದ ರೂಪಾಂತರ

ಶಬ್ದಗಳನ್ನು ಗ್ರಹಿಸಲು ಸಮರ್ಥನಾದನು. ಅವನ ಸಮಸ್ಯೆ ಪರಿಹಾರ ಹೊಂದಿತು.

ನ್ಯೂಯಾರ್ಕ ವಿಶ್ವವಿದ್ಯಾಲಯದ ಓದಿನ ಸಂಸ್ಥೆಯ ಪಾಲ್ ಲೀಡಿಯವರ ಹತ್ತಿರ ಸಲಹೆಗಾಗಿ ಬಂದ ಇನ್ನೊಬ್ಬ ಕಂಪನಿ ಉಪಾಧ್ಯಕ್ಷನ ದುರಭ್ಯಾಸವೆಂದರೆ ಅವನು ಒಂದೊಂದೇ ಶಬ್ದವನ್ನು ಓದುತ್ತಿದ್ದನು. ಪರಿಣಾಮವಾಗಿ ಕಚೇರಿಯಲ್ಲಿ ಪತ್ರವ್ಯವಹಾರವನ್ನು ಓದಿ ಮುಗಿಸಲಾರದೆ ಅವನು ಸಂಜೆ ಮನೆಗೆ ಹೊತ್ತು ತರಬೇಕಾಗುತ್ತಿತ್ತು.

ಲೀಡಿಯವರು ಅವನಿಗೆ ಶಬ್ದಗಳನ್ನೋದುತ್ತ ಹೋಗದೆ ವಾಕ್ಯಖಂಡಗಳನ್ನೇ ಓದಲು ಅಭ್ಯಾಸಮಾಡಿಸಿದರು. ಅನಂತರ ಒಂದೊಂದು ಸಾಲನ್ನೇ ಇಡಿಯಾಗಿ ಕ್ಷಣದಲ್ಲಿ ಗ್ರಹಿಸುವ ರೂಢಿ ಮಾಡಿಸಿದರು. ಪ್ರಾರಂಭದಲ್ಲಿ ಅವನಿಗೆ ತಾನು ಓದಿದ್ದು ಪೂರ್ತಿ ಅರ್ಥವಾಗಲಿಲ್ಲ ಅನಿಸಿತು. ಆದರೆ ಮುಂದೆ ವೇಗ ಹೆಚ್ಚಿದಂತೆ ಅರ್ಥಸ್ಪಷ್ಟತೆಯೂ ಹೆಚ್ಚಿದ್ದನ್ನು ಅವನು ಕಂಡುಕೊಂಡನು. ಅವನ ಪಠನವೇಗ ಮಿನಿಟಿಗೆ ೨೨೫ ಶಬ್ದಗಳಿಂದ ೧,೨೦೦ ಶಬ್ದಗಳಿಗೇರಿತು.

ಬಾಲ್ಯದಲ್ಲಿ ಕಲಿತ ಈ ಮಂದಪಠನದ ದುರಭ್ಯಾಸವನ್ನು ಬಹಳ ಮಟ್ಟಿಗೆ ನಿವಾರಿಸಿಕೊಳ್ಳಲು ಸಾಧ್ಯವಿದೆಯೆಂಬುದೊಂದು ಸುದೈವದ ಸಂಗತಿ. ವಯೋಮಾನವು ಇದಕ್ಕೆ ಅಡ್ಡಿ ಬರುವುದಿಲ್ಲ. ಓದಿನ ಪ್ರಯೋಗಶಾಲೆಯೆಂಬ ಸಂಸ್ಥೆಯು ತನ್ನ ವಿದ್ಯಾರ್ಥಿಗಳಲ್ಲಿ ನಡೆಸಿದ ಪರಿಶೀಲನೆಯಲ್ಲಿ ೫೦-೫೯ರ ವಯೋಮಾನದವರು ವೇಗವನ್ನು ಸೇಕಡಾ ೯೩ ರಷ್ಟು ಹೆಚ್ಚಿಸಿಕೊಂಡದ್ದೂ ೨೦-೨೯ ರ ವಯೋಮಾನದವರು ನೂರಕ್ಕೆ ೧೪೨ ರಷ್ಟು ಸುಧಾರಿಸಿದ್ದೂ ದೃಢಪಟ್ಟಿತು. ನ್ಯೂಯಾರ್ಕ ವಿಶ್ವವಿದ್ಯಾಲಯದ ಓದಿನ ಸಂಸ್ಥೆಯವರ ಪ್ರಕಾರ, ಸಾಮಾನ್ಯ ವಿದ್ಯಾರ್ಥಿಗಳು ಒಟ್ಟು ೨೮ ತಾಸು ತರಬೇತಿ ಹೊಂದಿದಾಗ ಓದಿನ ವೇಗವನ್ನು ಮುಪ್ಪಟ್ಟು ಹೆಚ್ಚಿಸಿಕೊಳ್ಳಬಲ್ಲರು. ಅವರ ಅರ್ಥಗ್ರಹಣಶಕ್ತಿ ಸೇಕಡಾ ೩೦ ರಷ್ಟು ಹೆಚ್ಚುತ್ತದೆ.

ಶೀಘ್ರಪಠನಕ್ಕೆ ಇಂದು ಅಮೇರಿಕ ಹಾಗು ಯುರೋಪಿನಲ್ಲಿ ಹಲವು ಯಾಂತ್ರಿಕ ಉಪಕರಣಗಳನ್ನೂ ತಂತ್ರಗಳನ್ನೂ ಉಪಯೋಗಿಸುತ್ತಿದ್ದಾರೆ. ವೇಗವರ್ಧಕವು ಅವುಗಳಲ್ಲೊಂದು. ಇದು ಒಂದು ಪೂರ್ವನಿಶ್ಚಿತ ವೇಗದಿಂದ ಓದಬೇಕಾದ ಪತ್ರ ಅಥವಾ ಪುಸ್ತಕ-ಪುಟದ ಸಾಲುಗಳನ್ನು ಮೇಲಿಂದ ಕೆಳಗೆ ಒಂದೊಂದಾಗಿ ಮುಚ್ಚುತ್ತಹೋಗುತ್ತದೆ. ಅಷ್ಟು ಸಮಯದೊಳಗೆ ಆ ಪಂಕ್ತಿಯನ್ನು ತರಬೇತಿದಾರನು ಗ್ರಹಿಸಿ ಮುಗಿಸಲು ಯತ್ನಿಸಬೇಕಾಗುತ್ತದೆ. ಬರಬರುತ್ತ ಅವನು ಇದರಲ್ಲಿ ಯಶಸ್ವಿಯಾಗುತ್ತಾನೆ.

ಚಲಚ್ಚಿತ್ರಗಳನ್ನೂ ಇದಕ್ಕೆ ಉಪಯೋಗಿಸಲಾಗುತ್ತದೆ. ಅದರ ಮೇಲೆ ಪ್ರಕಾಶ ಮೂಲಕ ನಿಶ್ಚಿತಗತಿಗಿಂತ ಹೆಚ್ಚು ವೇಗದಲ್ಲಿ ಶಬ್ದಗಳು ಕಾಣಿಸುತ್ತ ಅಳಿಸುತ್ತ ಹೋಗುತ್ತವೆ. ಈ ವ್ಯವಸ್ಥೆಯಿಂದ ೧೬ ಪಾಠಗಳಲ್ಲಿ ಓದಿನ ವೇಗವನ್ನು ಮಿನಿಟಿಗೆ ೧೮೦ ಶಬ್ದಗಳಿಂದ ೫೭೦ ಶಬ್ದಗಳಿಗೇರಿಸಲಾಗುತ್ತದೆ. ಅನಂತರ ಶೀಘ್ರ ಪುಸ್ತಕಪಠನವನ್ನು ಅಭ್ಯಾಸ ಮಾಡಿಸಲಾಗುತ್ತದೆ.

ಇವೆಲ್ಲ ಯಾಂತ್ರಿಕ ಸೌಕರ್ಯಗಳು ನಮಗೆ ಸದ್ಯಕ್ಕೆ ಲಭ್ಯವಾಗಲಿಕ್ಕಿಲ್ಲ. ಆದರೆ ಈ ಕೆಳಗಿನ ಸೂಚನೆಗಳನ್ನು ಆಚರಣೆಗಿಳಿಸಿದರೆ ನಿಮ್ಮ ಓದಿನ ವೇಗವನ್ನು ಸಾಕಷ್ಟು ಹೆಚ್ಚಿಸಿಕೊಳ್ಳಬಹುದು:

ತುಟಿಯಿಂದ ಮಣಮಣ ಓದುವ ಅಭ್ಯಾಸ ನಿಮಗಿದ್ದರೆ, ಅದು ನಿಮ್ಮ ಓದಿನ ವೇಗವನ್ನು ಮಂದಗೊಳಿಸುವದು. ಈ ಅಭ್ಯಾಸ ಹೋಗಲಾಡಿಸಲು ನೀವು ಓದುವಾಗ ತೋರು ಬೆರಳನ್ನು ತುಟಿಗೆ ಬಲವಾಗಿ ಅಡ್ಡ ಒತ್ತಿ ಹಿಡಿದುಕೊಳ್ಳಿರಿ.

ನಿಮ್ಮ ಕಣ್ಣುಗಳು ಪುಸ್ತಕದಸಾಲುಗಳ ಮೇಲೆ ಹರಿದು ಹೋಗುವಾಗ ತಲೆಯು ಅದರ ಸಂಗಡ ಅತ್ತಿತ್ತ ಚಲಿಸುತ್ತಿದ್ದರೆ ಎರಡೂ ಕೈಗಳಿಂದ ತಲೆಯನ್ನು ಅದುಮಿ ಹಿಡಿದು ಆ ಅಭ್ಯಾಸವನ್ನು ಮುರಿಯಿರಿ.

ಸಾಲುಗಳ ಕೆಳಗೆ ಬೆರಳು ಓಡಿಸುತ್ತ ಓದುವ ಅಭ್ಯಾಸದಿಂದ ತಪ್ಪಿಸಿಕೊಳ್ಳಲು ಓದುತ್ತಿರುವ

ಪುಸ್ತಕ ಅಥವಾ ಕಾಗದವನ್ನು ಎರಡೂ ಮಗ್ಗ ಲಲ್ಲಿ ಎರಡೂ ಕೈಗಳಿಂದ ಅಮುಕಿ ಹಿಡಿಯಿರಿ. ಯಾಕಂದರೆ ಸಾಲುಗಳ ಕೆಳಗೆ ಬೆರಳಾಡಿಸು ವುದು ನಿಮ್ಮ ಓದಿನ ವೇಗವನ್ನು ಕುಗ್ಗಿಸುತ್ತದೆ.

ಶಾಂತವಾದ ಸ್ಥಳದಲ್ಲಿ ಓದಿರಿ. ಹಗಲುಗನಸು ಗಳಲ್ಲಿ ಮಗ್ನರಾಗದೆ ಓದಿನ ಮೇಲೆ ಪೂರ್ಣ ಏಕಾಗ್ರರಾಗಿರಿ.

ಹೊಸ ಶಬ್ದಗಳು ಬಂದರೆ ಸಂದರ್ಭದ ಮೇಲೆ ಅರ್ಥವನ್ನು ತರ್ಕಿಸಿ ಮುಂದೆ ಸಾಗಿರಿ. ಓದು ಮುಗಿದ ಮೇಲೆ ಕೋಶವನ್ನು ನೋಡಿ ಶಬ್ದಾರ್ಥ ವನ್ನು ಖಾತ್ರಿಮಾಡಿಕೊಳ್ಳಿರಿ.

ಒಂದೊಂದಾಗಿ ಶಬ್ದಗಳನ್ನೋದದೆ ಇಡಿ ಇಡಿ ಶಬ್ದಗಳನ್ನೂ ಸಾಲುಗಳನ್ನೂ "ಹಾರಿಸಿ" ಕಣ್ಣು ಗಳಿಂದ ಓದಿ ವಾಕ್ಯಖಂಡಗಳ ಅರ್ಥಗ್ರಹಣ ಮಾಡಲು ಯತ್ನಿಸಿರಿ.

ಒಂದು ಪುಟ ಅಥವಾ ಅಧ್ಯಾಯದಲ್ಲಿರುವ ಶಬ್ದಗಳ ಸಂಖ್ಯೆಯನ್ನು ಲೆಕ್ಕ ಮಾಡಿ ಅದನ್ನು ಇಂತಿಷ್ಟು ಮಿನಿಟುಗಳಲ್ಲಿ ಓದುವುದಾಗಿ ಗಟ್ಟಿ ಮಾಡಿಕೊಂಡು ಗಡಿಯಾರದ ಅಲಾರಂ ಇಟ್ಟು ಕೊಂಡು ಅಷ್ಟರಲ್ಲಿ ಮುಗಿಸಲು ಧಾವಿಸಿರಿ. ಬರ ಬರುತ್ತ ಅವಧಿಯನ್ನು ಇಳಿಸುತ್ತ ಬನ್ನಿರಿ.

ಒಂದು ಭಾಗ ಅಥವಾ ಪ್ರಕರಣವನ್ನು ಓದಿದ ನಂತರ ನೀವು ಓದಿದ್ದರ ಸಾರಾಂಶವನ್ನೂ ಮುಖ್ಯಾಂಶಗಳನ್ನೂ ಮನಸಿನಲ್ಲೇ ವಿಚಾರಿಸಿರಿ. ಆ ಮೇಲೆ ಓದಿದ್ದನ್ನು ತಿರುಗಿ ಅವಲೋಕಿಸಿ ನಿಮ್ಮ ಸಾರಸಂಗ್ರಹದಲ್ಲಿ ಮಹತ್ವದ ಅಂಶವೇನಾ ದರೂ ತಪ್ಪಿಹೋಗಿದೆಯೇ ಎಂದು ನೋಡಿಕೊ ಳ್ಳಿರಿ.

ಓದಿದ ಶಬ್ದಗಳನ್ನೇ ಹಿಂತಿರುಗಿ ಓದಬೇಡಿರಿ. ಕಣ್ಣು ಸಾಗಿದಂತೆ ಶಬ್ದಗಳು ಮಾಯವಾಗುತ್ತ ವೆಂದು ಭಾವಿಸಿಕೊಳ್ಳಿರಿ. ಇದು ಅಭ್ಯಾಸವಾದ ಮೇಲೆ ಎಲ್ಲ ಮಹತ್ವದ ವಿಷಯಗಳೂ ನಿಮ್ಮ ಗಮನದಲ್ಲಿರುವವು.

ವಾಕ್ಯಗಳಲ್ಲಿರುವ ನಾಮಪದ ಕ್ರಿಯಾಪದಗಳ ನ್ನಷ್ಟೇ ಲಕ್ಷಿಸುತ್ತ ಹೋಗಲು ಯತ್ನಿಸಿರಿ ಮತ್ತು ಈ ರೀತಿಯಲ್ಲಿ ಎಷ್ಟು ಅರ್ಥಗ್ರಹಣವಾಗುತ್ತ ದೆಂದು ನೋಡಿರಿ. ಇದಕ್ಕಾಗಿ ಪ್ರಾರಂಭದಲ್ಲಿ ಇಂಥ ಮುಖ್ಯ ಶಬ್ದಗಳ ಕೆಳಗೆ ಗುರುತು ಹಾಕಿ ಕೊಂಡು ಅಭ್ಯಾಸ ಮಾಡುವುದೊಳಿತು. ಅಭ್ಯಾಸ ಬಿದ್ದ ಬಳಿಕ ಗುರುತು ಹಾಕುವುದನ್ನು ಬಿಟ್ಟು ಬಿಡಬೇಕು.

ನಿರಂತರವಾಗಿ ಸಾಧಿಸಿದರೆ ಇದರಲ್ಲಿ ಯಶ ನಿಶ್ಚಿತ. ಅದರ ಪ್ರಯೋಜನ ಅಪರಿಮಿತವಾ ಗಿದೆ.

---

ಪ್ರಸಿದ್ಧ ಇಂಗ್ಲಿಷ ಲೇಖಕ ಒಸ್ಕರ ವೈಲ್ಡನು ಒಂದು ಪುಟವನ್ನು ಒಮ್ಮೆ ಕ್ಷಣ ಮಾತ್ರ ನೋಡಿದನೆಂದರೆ ಇಡೀ ಪುಟವನ್ನು ಗ್ರಹಿಸಿ ಶಬ್ದಶಃ ಪುನರುಚ್ಚರಿಸುತ್ತಿದ್ದ ನಂತೆ. ಅವನು ಒಮ್ಮೆ ಇಪ್ಪತ್ತು ನಿಮಿಷಗಳಲ್ಲಿ ೩೦೦ ಪುಟದ ಕಾದಂಬರಿಯ ಹಸ್ತಪ್ರ ತಿಯನ್ನು ಓದಿ ಮುಗಿಸಿದ್ದನು.

---

ಮಿತಿಮೀರಿ ಓದುವ ಜನರಿದ್ದಾರೆ—ಪುಸ್ತಕ ಪಿಶಾಚಿಗಳು. ಕೆಲವರು ಮದ್ಯದಿಂದ ಉನ್ಮತ್ತರಾಗುವಂತೆ ಇವರು ಪುಸ್ತಕದ ಅಮಲಿನಲ್ಲಿರುತ್ತಾರೆ. ಅವರು ಅತ್ಯಂತ ರಂಜ ಕವೂ ಉತ್ತೇಜಕವೂ ಆದ ಪ್ರಪಂಚದಲ್ಲಿ ಮಂಕುಬಡಿದು ಅಲೆಯುತ್ತಾರೆ. ಅವರಿಗೆ ಏನೂ ಕಾಣಿಸುವದಿಲ್ಲ, ಏನೂ ಕೇಳಿಸುವದಿಲ್ಲ.

—ಎಚ್. ಎಲ್. ಮೆಂಕೆನ್.

ಕೈದಿಗಳನ್ನು ಶಿಕ್ಷಿಸುವುದು ಮುಖ್ಯವೋ
ಸುಧಾರಿಸುವುದು ಮುಖ್ಯವೋ ?

# ಈ ಸೆರೆಮನೆಗಳಿಗೆ ಗೋಡೆಗಳಿಲ್ಲ

## (೧) ಉತ್ತರ ಪ್ರದೇಶದಲ್ಲಿ

೧೯೫೨ರಲ್ಲಿ ಉತ್ತರಪ್ರದೇಶ ಸರಕಾರದ ಆಗಿನ ಗೃಹಮಂತ್ರಿ ( ಈಗ ಮುಖ್ಯಮಂತ್ರಿ ) ಡಾ. ಸಂಪೂರ್ಣಾನಂದರು ಸೆರೆಮನೆಯಲ್ಲಿರುವ ಪಾತಕಿಗಳನ್ನು ಸಂಭಾವಿತರನ್ನಾಗಿ ಮಾರ್ಪಡಿಸಲು ಶಕ್ಯವಿದೆಯೆಂಬ ನಂಬಿಕೆಯಿಂದ ದಿಟ್ಟತನದ ಹೊಸ ಪ್ರಯೋಗವೊಂದನ್ನು ಪ್ರಾರಂಭಿಸಿದರು. ಅವರು ಭಾರತದಲ್ಲೇ ಮೊದಲನೆಯದೆನ್ನಬಹುದಾದ 'ಗೋಡೆಯಿಲ್ಲದ ಸೆರೆಮನೆ'ಯನ್ನು ಸ್ಥಾಪಿಸಿದರು.




ತಮ್ಮ ರಾಜ್ಯದ ಬೇರೆ ಬೇರೆ ಸೆರೆಮನೆಗಳಲ್ಲಿದ್ದ ಸುಮಾರು ೨,೦೦೦ ಕೈದಿಗಳನ್ನು ಆರಿಸಿ ಹೆಚ್ಚು ಕಡಿಮೆ ಕಾವಲೇ ಇಲ್ಲದಂತೆ ಅವರು ದುಡಿಮೆಗೆ ಹಚ್ಚಿದರು. ಈ ಕೈದಿಗಳಲ್ಲಿ ಒಂದರಿಂದ ಇಪ್ಪತ್ತು ವರ್ಷಗಳ ವರೆಗಿನ ದೀರ್ಘ ಶಿಕ್ಷೆಯಾದವರಿದ್ದರು.

ಆಗ ಕಾಶಿಯಿಂದ ೪೦ ಮೈಲು ದೂರದಲ್ಲಿರುವ ಚಂದ್ರಪ್ರಭಾ ನದಿಗೆ ಒಡ್ಡು ಕಟ್ಟುವ ಕಾರ್ಯ ನಡೆದಿತ್ತು. ಈ ೨,೦೦೦ ಕೈದಿಗಳನ್ನು ಅಲ್ಲಿ ಮೊದಲು ಕೆಲಸಕ್ಕೆ ತೊಡಗಿಸಲಾಯಿತು. ಇತರ ಕೂಲಿಕಾರರಿಗೂ ಇವರಿಗೂ ನಡುವೆ ಏನೂ ಭೇದಭಾವ ಮಾಡದೆ ಅವರಿಗೆ ಸಕಲ ಸೌಕರ್ಯಗಳನ್ನು ಒದಗಿಸಲಾಗಿತ್ತು. ಅವರಿಗಾಗಿಯೇ ನಿಲ್ಲಿಸಿದ ಡೇರೆಗಳಲ್ಲಿ ಮತ್ತು ಗುಡಿಸಲುಗಳಲ್ಲಿ ವಾಸಿಸುತ್ತಿದ್ದ ಕೈದಿಗಳ ಮೇಲೆ ಹೆಸರಿಗಷ್ಟೇ ಕಾವಲು ಇತ್ತು. ಇತರರಂತೆ ಇವರಿಗೂ

ಸಂಬಳ ಸಿಗುತ್ತಿತ್ತು ಮತ್ತು ಅದಕ್ಕೂ ಹೆಚ್ಚೆಂದರೆ ಈ ಹಣವನ್ನು ತಮಗೆ ಬೇಕೆನಿಸಿದಂತೆ ವೆಚ್ಚಮಾಡುವ ಸ್ವಾತಂತ್ರ್ಯವನ್ನೂ ಅವರಿಗೆ ಬಹಳಮಟ್ಟಿಗೆ ಕೊಡಲಾಗಿತ್ತು.

ಕೈದಿಗಳ ಸಂಪಾದನೆಯ ಬಗ್ಗೆ ವ್ಯವಸ್ಥೆ ಹೀಗಿತ್ತು: ಅದರಲ್ಲಿ ಕೆಲಭಾಗವನ್ನು ಅವರು ತಮ್ಮ ಹೊಟ್ಟೆಸೆತ್ತಿಯ ನಿರ್ವಹಣೆಗಾಗಿ ಸರಕಾರಕ್ಕೆ ಕೊಡಬೇಕು; ಉಳಿದದ್ದನ್ನು ಅವರ ಹೆಸರಿನ ಖಾತೆಗಳಲ್ಲಿ ಜಮಾ ಹಿಡಿಯಲಾಗುವದು. ಇದರಿಂದ ಹಣ ತೆಗೆದು ಅವರು ಚಹಾ, ಸಾಬೂನು, ಬೀಡಿ ವಗೈರೆ ಚಿಲ್ಲರೆ ಅವಶ್ಯಕತೆಗಳಿಗಾಗಿ ಖರ್ಚು ಮಾಡಬಹುದು. ಬೇಕಾದರೆ ಮನೆಯವರಿಗೂ ಕಳಿಸಬಹುದು. ಶಿಕ್ಷೆಯ ಅವಧಿಯ ಕೊನೆಗೆ, ಅವರ ಖಾತೆಯಲ್ಲಿ ಉಳಿದ ಹಣ ಅವರಿಗೆ ಒದಗುತ್ತಿದ್ದುದರಿಂದ ಹೊರಬಿದ್ದ ಮೇಲೆ ಅವರು ಕಂಗಾಲ ಸ್ಥಿತಿಗಿಳಿಯಬೇಕಾಗಿದ್ದಿಲ್ಲ. ಯಾವುದಾದರೊಂದು ಉದ್ಯೋಗ ಪ್ರಾರಂಭಿಸಲು ಅವರಿಗೆ ಅನುಕೂಲವಾಗಿ, ತಿರುಗಿ ಅಪರಾಧಕ್ಕಿಳಿಯುವ ಪ್ರೇರಣೆ ಉಳಿಯುತ್ತಿರಲಿಲ್ಲ.

ಈ ಪ್ರಯೋಗಕ್ಕೆ ಕೈದಿಗಳನ್ನಾರಿಸುವಾಗ ಅವರ ದೇಹದಾರ್ಢ್ಯ ಮತ್ತು ಒಳ್ಳೆ ನಡತೆಯನ್ನಷ್ಟೇ ಗಮನಿಸಲಾಗಿತ್ತು. ಒಳ್ಳೇ ನಡತೆಯನ್ನುಳಿಸಿಕೊಂಡರೆ ಶಿಕ್ಷೆಯ ಅವಧಿ ಇಳಿಸುವ ಆಶ್ವಾಸನವನ್ನೂ ಅವರಿಗೆ ಕೊಡಲಾಗಿತ್ತು.

ಈ "ಮುಕ್ತ ಸೆರೆಮನೆ"ಯಲ್ಲಿ ಒಂದು ಕ್ಯಾಂಟೀನು ತೆರೆಯಲಾಗಿತ್ತು. ಅದರಲ್ಲಿ ಸಿಕ್ಕಿದ ಲಾಭದಿಂದ ಕೈದಿಗಳ ಮನೋರಂಜನೆಯ ಏರ್ಪಾಡು ಮಾಡಿದ್ದರು. ಶೈಕ್ಷಣಿಕ ಚಿತ್ರಪಟಗಳ ಪ್ರದರ್ಶನ, ಗಂಗಾತೀರದ ನಿಸರ್ಗರಮ್ಯ ಪ್ರದೇಶಗಳಲ್ಲಿ ಪ್ರವಾಸ ಕಾರ್ಯಕ್ರಮ ಮೊದಲಾದವು ಮನೋರಂಜನೆಯ ಕೆಲ ಉದಾಹರಣೆಗಳು.

ಕೈದಿಗಳು ಅನಿರ್ಬಂಧವಾಗಿ ಅವರ ನೆಂಟರಿಷ್ಟರನ್ನೂ ಮಿತ್ರರನ್ನೂ ಭೆಟ್ಟಿಯಾಗಬಹುದಿಷ್ಟೇ ಅಲ್ಲ, ಆಗಾಗ್ಗೆ ಮನೆಗೆ ಹೋಗಿ ಕುಟುಂಬದವರನ್ನು ಭೆಟ್ಟಿಯಾಗಿ ಬರುವ ಅವಕಾಶವೂ ದೊರೆಯುತ್ತಿತ್ತು. ಕುಟುಂಬದವರ ಜಡ್ಡುಜಾಪತ್ತಿಗಳಲ್ಲಿ ಅವರನ್ನು ಕಂಡುಬರಲಿಕ್ಕೂ ಕೈದಿಗಳಿಗೆ ಅನುಮತಿ ಸಿಗುತ್ತಿತ್ತು.

ಈ ಪ್ರಯೋಗಗಳಲ್ಲಿ ಈ ವರೆಗೆ ಒಟ್ಟು ೯,೦೦೦ ಕೈದಿಗಳನ್ನು "ಮುಕ್ತ ಸೆರೆಮನೆ" ಗಳಲ್ಲಿ ಕಾಯಕಕ್ಕೆ ತೊಡಗಿಸಿದ್ದಾಗಿದೆ. ಚಂದ್ರಪ್ರಭಾ ಒಡ್ಡಿನಲ್ಲಷ್ಟೇ ಅಲ್ಲ, ಅನಂತರ ನೌಕರ ಎಂಬಲ್ಲಿನ ಒಡ್ಡು, ಶಾಹಬಾದದಲ್ಲಿ ೧೯೫೫ ರಲ್ಲಿ ಕಡಿದ ೮ ಮೈಲುದ್ದದ ಕಾಲುವೆಯ ಕಾಮಗಿರಿ—ಇವೆಲ್ಲವುಗಳಲ್ಲಿ "ವಿಶ್ವಾಸದಿಂದ ವಿಶ್ವಾಸವನ್ನು ಪ್ರೇರಿಸುವ" ಪ್ರಯೋಗವನ್ನು ಪುನಃ ಪುನಃ ಒರೆಗಲ್ಲಿಗೆ ಹಚ್ಚಿದ್ದಾಗಿದೆ.

ಇದರ ಪರಿಣಾಮ ಅದ್ಭುತವೇ ಆಗಿತ್ತು. ಕೈದಿಗಳಲ್ಲಿ ಬಹಳ ಜನರು ಓಡಿಹೋಗಿರಬಹುದೆಂದು ಯಾರಾದರೂ ತರ್ಕಿಸಿದ್ದರೆ ಅದು ತಪ್ಪು. ೯,೦೦೦ ದಲ್ಲಿ ೨೯ ಕೈದಿಗಳು ಮಾತ್ರ ತಪ್ಪಿಸಿಕೊಂಡು ಹೋದರು. ಅವರಲ್ಲಿ ೧೩ ಜನರನ್ನು ಪುನಃ ಬಂಧಿಸಲಾಯಿತು. ಮನೆಗೆ ಹೋಗಲು ಅನುಮತಿ ಪಡೆದ ೧೩೫ ಕೈದಿಗಳಲ್ಲಿ ಒಬ್ಬನಿಗಾದರೂ ಓಡಿಹೋಗುವ ವಿಚಾರ ಬರಲಿಲ್ಲ; ಅವರೆಲ್ಲರೂ ಮರಳಿ ಕೆಲಸಕ್ಕೆ ಹಾಜರಾದರು.

ಕೈದಿಗಳು ಹೀಗೆ ಈ ವರೆಗೆ ೧೨ ಲಕ್ಷ ರೂಪಾಯಿಗಳಷ್ಟು ದುಡಿದಿದ್ದಾರೆ. ಅದರಲ್ಲಿ ರೂ. ೮ ಲಕ್ಷವನ್ನು ಸರಕಾರ ಅವರ ಪೋಷಣೆಯ ವೆಚ್ಚಕ್ಕಾಗಿ ಮುರಿದುಕೊಂಡಿದ್ದು ಸರಕಾರಕ್ಕೆ ಅಷ್ಟು ಹಣ ಉಳಿತಾಯವಾಯಿತೆನ್ನಬಹುದು.

ಅವರ ಕೆಲಸವೂ ಉತ್ತಮ ತರಗತಿಯದಾಗಿತ್ತು. ತಜ್ಞರ ಅಂದಾಜಿನಲ್ಲಿ ಇವರ ಕೆಲಸ ಸಾಮಾನ್ಯ ಕೂಲಿಯವರಿಗಿಂತ ನೂರಕ್ಕೆ ೨೦ ರಷ್ಟು ಉತ್ತಮವಾಗಿತ್ತು.

ಉತ್ತರ ಪ್ರದೇಶದ ಈ ಪ್ರಯೋಗವನ್ನು ಪರಿಶೀಲಿಸಿ, "ಅಪರಾಧ ನಿರೋಧದ ಜಾಗತಿಕ ಸಂಸ್ಥೆ"ಯು ಇದೇ ಮಾದರಿಯಲ್ಲಿ ಬೇರೆ ಕಡೆಗೂ ಪ್ರಯೋಗ ನಡೆಸಬೇಕೆಂದು ತೀರ್ಮಾನಿಸಿದೆ.

**ಬ್ರಿಟನಿನಲ್ಲಿ ಮುಕ್ತ ಕಾರಾಗೃಹಗಳ ಪ್ರಯೋಗ ೧೯೩೬ ರಿಂದಲೇ ಪ್ರಾರಂಭವಾಯಿತು. ೧೯೪೬ ರಲ್ಲಿ ಲೇ ಹಿಲ್ ಎಂಬಲ್ಲಿ ಮೊದಲನೇ ನಿರ್ಬಂಧರಹಿತ ಕಾರಾಗೃಹ ಸ್ಥಾಪಿಸಲ್ಪಟ್ಟಿತು. ಅನಂತರ ಇಂಥ ನಾಲ್ಕು ಗಂಡಸರ ಮತ್ತು ಒಂದು ಹೆಂಗಸರ ಸೆರೆಮನೆಗಳು ನಡೆಯುತ್ತಿವೆ.**

**ಅಲ್ಲಿ ಕೈದಿಗಳನ್ನು ಸಾಮೂಹಿಕವಾಗಿ ಸಾರ್ವಜನಿಕ ಕಾಮಗಿರಿಗಳಲ್ಲಿ ಕೆಲಸಕ್ಕೆ ಹಚ್ಚುತ್ತಿರುವದಿಲ್ಲ. ಅವರ ಶಿಬಿರದಲ್ಲೇ ಹೆಚ್ಚು ಕೈದಿಗಳಿಗೆ ಕೆಲಸ, ಆಟ, ನೋಟಗಳನ್ನೊದಗಿಸಲಾಗುತ್ತದೆ. ಕೆಲವರನ್ನು ಹೊರಗೂ ಕೆಲಸಕ್ಕೆ (ಕಾವಲಿಲ್ಲದೆ) ಬಿಡಲಾಗುತ್ತದೆ.**

**ಅಲ್ಲಿನ ಅನುಭವಗಳೂ ಇದೇ ತೆರನಾಗಿವೆ. ಜೇಲಾ ನದಿ ಸೆರೆಮನೆಯಲ್ಲಿ ೧೯೫೪ ರಿಂದ ಬಂದು ಹೋದ ೧,೨೦೦ ಕೈದಿಗಳಲ್ಲಿ ಒಬ್ಬನು ಮಾತ್ರ ತಪ್ಪಿಸಿಕೊಂಡು ಹೋಗಲೆಳಸಿದ್ದಾನೆ. ಆದರೆ ಅವನಿಗೆ ಸೆರೆಮನೆಯ ಜೀವನದಷ್ಟೂ ಸುಖ ಹೊರಗೆ ದೊರೆಯಲಿಲ್ಲ.**

ಡಾ. ಸಂಪೂರ್ಣಾನಂದರ ಈ ಪ್ರಯೋಗದ ಪರಿಣಾಮಗಳು ಅಪರಾಧ ಮತ್ತು ದಂಡನೆಯ ಇಡೀ ಪ್ರಶ್ನೆಯ ಬಗ್ಗೆ ನಮ್ಮ ಹಳೇ ಕಲ್ಪನೆಗಳನ್ನು ಬುಡಮೇಲು ಮಾಡುವಂತಿವೆ. ಭದ್ರವಾದ ಗೋಡೆಗಳಿರುವ ಸೆರೆಮನೆಗಳಲ್ಲಿಟ್ಟರೇನೇ ಕಳ್ಳತನ, ಕೊಲೆ, ಸುಲಿಗೆಗಳಂಥ ಅಪರಾಧಗಳನ್ನು ಮಾಡಿದ ಜನರಿಗೆ "ಬುದ್ಧಿ ಕಲಿಸ" ಬಹುದು; ಕನಿಷ್ಠ, ಅವರಿಂದ ಸಮಾಜಕ್ಕೆ ಉಪದ್ರವವಾದರೂ ತಪ್ಪುವದು ಎಂಬ ಅಭಿಪ್ರಾಯವನ್ನು ನಾವೀಗ ಪುನರ್ವಿಚಾರಿಸಬೇಕಾಗಿದೆ.

ಸೆರೆಮನೆಯ ಶಿಕ್ಷೆಯಿಂದ ಅಪರಾಧಗಳ ಸಂಖ್ಯೆಯೂ ತಗ್ಗಿಲ್ಲ. ಅಪರಾಧಿಗಳಿಗೆ ಅಂಜಿಕೆಯೂ ಹುಟ್ಟಿಲ್ಲವೆಂಬುದು ಅಪರಾಧ-ದಂಡಶಾಸ್ತ್ರವನ್ನು ಅಭ್ಯಸಿಸಿದವರಿಗೆ ಎಂದೋ ಮನವರಿಕೆಯಾಗಿದೆ. ಸೆರೆಮನೆಗಳೂ ಅವುಗಳಲ್ಲಿ ಕೈದಿಗಳನ್ನು ನಡೆಸಿಕೊಳ್ಳುವ ರೀತಿಯೂ ಅವರಲ್ಲಿ ಇದ್ದಬಿದ್ದ ಮನುಷ್ಯತ್ವವನ್ನೂ ಇಂಗಿಸಿಬಿಡುವುದು. ಅಪರಾಧ ಮಾಡುವುದೇ ತಮ್ಮ ವೃತ್ತಿಯೆಂಬ ಮನವರಿಕೆ ಅವರಲ್ಲಿ ಹುಟ್ಟುತ್ತದೆ. ಯಾಕೆಂದರೆ ಅಪರಾಧಿಗೆ ಪಶ್ಚಾತ್ತಾಪವಾದರೂ ಸಮಾಜ ಅವನನ್ನು ಪತಿತನೆಂದೇ ಗ್ರಹಿಸುತ್ತದೆ.

ಸೆರೆಮನೆವಾಸವು ಅಪರಾಧಕ್ಕೆ ತಕ್ಕ "ಪ್ರಾಯಶ್ಚಿತ್ತ"ವಾಗಬೇಕೆಂಬ ಧೋರಣೆಯಿಟ್ಟುಕೊಂಡವರು ಈ ಪ್ರಯೋಗವನ್ನು ಕಂಡು ಮೂಗುಮುರಿಯಬಹುದು. ಅವರು ಕೇಳಬಹುದು: ಸೆರೆಮನೆಗಳಿಗೆ ಜನರನ್ನು ಕಳಿಸುವುದಾದರೂ ಯಾತಕ್ಕೆ? ಅವರ ಪುನರ್ನಿವೇಶನವೊಂದೇ ಅದರ ಉದ್ದೇಶವೇ? ಶಿಕ್ಷೆಯೊಂದಿಗೆ ಪುನರ್ನಿವೇಶನವಾದರೆ ಆಗಲಿ; ಆದರೆ ಶಿಕ್ಷೆಯನ್ನು ಮರೆತು ಅದರ ಬದಲು ಪುನರ್ನಿವೇಶನ ಮಾಡುವುದು ಎಂದಿಗೂ ಧರ್ಮವಲ್ಲ. ಕುಡಿದು ಮೋಟಾರು ನಡೆಸಿ ನಿರಪರಾಧಿಗಳ ಮೇಲೆ ಹಾಯ್ದು ಕೊಲ್ಲುವ ಡ್ರೈವರನಿಗೂ ಬುದ್ಧಿಪೂರ್ವಕ ವಂಚನೆ ಮಾಡುವ ಸುಶಿಕ್ಷಿತನಿಗೂ "ಸುಧಾರಣೆ" ಮಾತ್ರ ಸಾಕೆ? ಅವರಿಗೆ ಬುದ್ಧಿ ಕಲಿಸಬೇಡವೇ?

ನಿಜ; "ಮುಕ್ತ ಸೆರೆಮನೆ" ಗಳು ಹಳೇ ಅರ್ಥದಲ್ಲಿ ಶಿಕ್ಷೆಯೆನಿಸುವುದಿಲ್ಲ. ಅವುಗಳು ಒಂದು ಬಗೆಯ ನಿಯಂತ್ರಿತ ವಿಹಾರಕೂಟಗಳೆಂದರೂ ಸಲ್ಲುವದು. ಸಾಧಾರಣವಾದ ಪರಿಶ್ರಮ ಮತ್ತು ಸ್ವತಂತ್ರ ಜೀವನದಲ್ಲಿ ದೊರಕುವ ಹಲಕೆಲವು ಸೌಕರ್ಯಗಳ ವ್ಯವಸ್ಥೆ ಅಲ್ಲಿದೆ.

ಆದರೆ ಹಳೇ ಅರ್ಥದ ಶಿಕ್ಷೆ, ಮತ್ತು ಕೈದಿಯನ್ನು ನಾಗರಿಕ ಜೀವನಕ್ಕೆ ಅಣಿಗೊಳಿಸುವುದು—ಇವೆರಡನ್ನೂ ಏಕಕಾಲದಲ್ಲಿ ಸಾಧಿಸುವದು ಶಕ್ಯವಿಲ್ಲ. ಒಬ್ಬ ಪ್ರಸಿದ್ಧ ಸೆರೆಮನೆ ಸುಧಾ

ರಕನು ಹೇಳಿದಂತೆ, "ಮನುಷ್ಯನು ನಿರ್ಬಂಧದಲ್ಲಿರುವಾಗ ಅವನನ್ನು ಸ್ವತಂತ್ರ ಸಂಭಾವಿತ ಜೀವನಕ್ಕೆ ಅಣಿಗೊಳಿಸಲು ಶಕ್ಯವೇ ಇಲ್ಲ." ಸೆರೆಮನೆಗಳು ಸುಖನಿವಾಸಗಳಾದರೆ ಮುಂದೆ ಅಪರಾಧ ಮಾಡುವವರಿಗೆ ಅಂಜಿಕೆಯೇ ಇಲ್ಲದಾದೀತೆಂದು ಆಕ್ಷೇಪಿಸುವವರಿಗೆ ಬ್ರಿಟನಿನ ಇಂಥದೇ ಗೋಡೆಗಳಿಲ್ಲದ ಸೆರೆಮನೆಯಾದ ಬೇಲಾ ನದಿ ಜೈಲಿನ ಗವರ್ನರರಾದ ಕರ್ನಲ್ ನ್ಯಾಶರು ಕೊಟ್ಟ ಉತ್ತರವನ್ನೇ ಇಲ್ಲಿಯೂ ಕೊಡಬಹುದು :

"ದುಷ್ಟ ನಾಗರಿಕರನ್ನು ಶಿಕ್ಷಿಸುವುದಕ್ಕಿಂತಲೂ ಅವರನ್ನು ಶಿಷ್ಟರಾಗಿ ಮಾರ್ಪಡಿಸುವುದು ಮಹತ್ವದ ಕೆಲಸ."

ಈ ಕೆಲಸದ ಮಟ್ಟಿಗೆ ಉತ್ತರ ಪ್ರದೇಶದ ಪ್ರಯೋಗಕ್ಕೆ ತಜ್ಞರ ಮನ್ನಣೆಗಿಂತಲೂ ದೊಡ್ಡ ಸರ್ಟಿಫಿಕೇಟು ಕೈದಿಗಳ ಆಪ್ತರಿಂದಲೇ ದೊರೆತಿದೆ. ಈ ಸೆರೆಮನೆಯಲ್ಲಿದ್ದು ಬಿಡುಗಡೆ ಹೊಂದಿ ಸನ್ಮಾರ್ಗಕ್ಕೆ ಹತ್ತಿದವರು ಹಲವರಿದ್ದಾರೆ. ಅವರ ಮನೆಯವರೆಷ್ಟೋ ಜನರು ಸರಕಾರಕ್ಕೆ ಕೃತಜ್ಞತೆಯ ಪತ್ರಗಳನ್ನು ಬರೆದಿದ್ದಾರೆ.

## (೨) ಸ್ವೀಡನ್ನಿನ ಸಂಭಾವಿತ ಕೈದಿಗಳು

ಸ್ವೀಡನ್ನಿನ ಗೋಡೆಗಳಿಲ್ಲದ ಸೆರೆಮನೆಗಳಲ್ಲಿ ಬೋಗಸಂದ ಸೆರೆಮನೆಯೂ ಒಂದು. ೧೯೪೫ರಲ್ಲಿ ಮಾಡಲಾದ ಕೆಲ ಕ್ರಾಂತಿಕಾರಕ ಕಾಯದೆಗಳ ಮೇರೆಗೆ ಸ್ಥಾಪಿತವಾದ ಜೈಲುಗಳಲ್ಲಿ ಇದೊಂದು. ಈ ಸೆರೆಮನೆಗಳನ್ನು ಸೆರೆಮನೆಗಳೆನ್ನದೆ ''ವಸಾಹತು''ಗಳೆಂದು ಕರೆಯುತ್ತಾರೆ. ಸ್ವೀಡನ್ನಿನ ದಂಡನಾಪದ್ಧತಿಯು ಭೂತದಯಾಪರವಾಗಿರಬೇಕೆಂಬುದು ಈ ಸೆರೆಮನೆಗಳ ಉದ್ದೇಶವಾಗಿದೆ.

ಬೋಗಸಂದ ''ವಸಾಹತಿಗೆ'' ಕಳಿಸಲ್ಪಡುವವರಲ್ಲಿ ನೂರಕ್ಕೆ ೮೦ರಷ್ಟು ಜನ ಕೇಡಿಗಳಾಗಿರದೆ ಕೇವಲ ಕಾಯದೆ ಮುರಿದವರಾಗಿರುತ್ತಾರೆ. ಅವರಲ್ಲಿ ಬಹಳ ಜನರು ಕುಡಿದು ಮೋಟಾರು ನಡೆಸಿದ ಅಥವಾ ನಡೆಸಲು ಯತ್ನಿಸಿದ ತಪ್ಪಿಗಾಗಿ ಅಲ್ಲಿ ಕಳಿಸಲ್ಪಟ್ಟವರು.

ರಾಜಧಾನಿ ಸ್ಟಾಕ್‌ಹೋಂನಿಂದ ೫೦ ಮಿನಿಟಿನ ಮೋಟಾರು ಸವಾರಿಯಷ್ಟು ದೂರ ಇರುವ ಬೋಗಸಂದ ವಸಾಹತು ಒಂದು ಸಾವಿರ ಎಕರೆಯಷ್ಟು ವಿಶಾಲವಾಗಿದೆ. ಅದರಲ್ಲಿ ಬಹುಭಾಗ ಹೊಲಗದ್ದೆಯ ಜಮೀನು. ಅಲ್ಲಲ್ಲಿ ಸೈನ್ಯಶಿಬಿರದ ಗುಡಿಸಲುಗಳಂಥ ಕಟ್ಟಡಗಳು. ಇಂಥ ಒಂದು ಗುಡಿಸಲಲ್ಲಿ ಅದರ ಆಡಳಿತದ ಕಚೇರಿ. ಒಬ್ಬ ''ಗವರ್ನರ''ನು ಆರು ಜನ ಕಾವಲುಗಾರರೊಡನೆ (ಇವರಿಗೆ ಕೆಲಸದ ಮೇಲ್ವಿಚಾರಕರೆಂದು ಹೆಸರು!) ವಸಾಹತನ್ನು ನೋಡಿಕೊಳ್ಳುತ್ತಾನೆ. ಅಡಿಗೆಯವಳೊಬ್ಬಳು ''ಸೆರೆಯಾಳು''ಗಳ ನೆರವಿನಿಂದ ಊಟದ ವ್ಯವಸ್ಥೆ ಮಾಡುತ್ತಾಳೆ.

ಈ ಸೆರೆಯಿಲ್ಲದ ಸೆರೆಮನೆಯಲ್ಲಿ ''ಶಿಕ್ಷೆ'' ಅನುಭವಿಸಿದ ಜನರಲ್ಲಿ ಕೆಲವರ ಸಾಮಾಜಿಕ ಸ್ಥಾನಮಾನ ಕೇಳಿದರೆ ನೀವು ಬೆರಗಾಗುವಿರಿ. ಬೋಗಸಂದದ ''ಭೂತಪೂರ್ವ ಗಿರಾಕಿ''ಗಳಲ್ಲಿ ಸ್ವೀಡನ್ನಿನ ಅನೇಕ ಪ್ರಸಿದ್ಧ ಪುರುಷರು ಇದ್ದಾರೆ. ''ನಟರು, ಕಲಾವಿದರು, ಕಂಪನಿ ಡೈರೆಕ್ಟರರು, ಪಾದ್ರಿಗಳು ಕೂಡ—ಅಲ್ಲದೆ ಸರಕಾರದ ಎಷ್ಟೋ ಜನ ಉಪಮಂತ್ರಿಗಳು ಇಲ್ಲಿ ವಾಸಿಸಿ ಹೋದದ್ದುಂಟು. ಕೆಲ ವಿದೇಶೀಯರನ್ನೂ ನಾವು ಕಂಡಿದ್ದೇವೆ'' ಎಂದು ಗವರ್ನರರು ಹೇಳುತ್ತಾರೆ.

ಇಲ್ಲಿ ಶಿಕ್ಷೆಭೋಗಿಸುತ್ತಿರುವವರಿಗೆ ಅತ್ಯಗತ್ಯದ ಕೆಲಸವಿದ್ದರೆ ನಡುನಡುವೆ ಹೊರಗೆ ಹೋಗಲು ಒಂದು ದಿವಸ ರಜಾ ಕೂಡಾ ಸಿಗುತ್ತದೆಂದು

ವದಂತಿಯಿದೆ. ಸ್ವೀಡನ್ನಿನ ಸೆರೆಮನೆಗಳು ತಮ್ಮ "ದೊಡ್ಡ ಮನಸಿಗಾಗಿ" ಪ್ರಸಿದ್ಧವಾಗಿವೆ. ಈಚೆಗೆ ಕಂಪನಿಯ ರೊಕ್ಕ ಎತ್ತಿಹಾಕಿದ್ದಕ್ಕಾಗಿ ಒಂದು ಸಾಮಾನ್ಯ ಸೆರೆಮನೆಯಲ್ಲಿ ಶಿಕ್ಷೆ ಅನುಭವಿಸುತ್ತಿದ್ದ ಕಂಪನಿ ಡೈರೆಕ್ಟರನೊಬ್ಬನು ಒಂದು ದಿನ ರಜಾ ತೆಗೆದುಕೊಂಡು ರಾಜಧಾನಿಯ ಫ್ಯಾಶನೇಬಲ್ ಹೊಟೆಲೊಂದರಲ್ಲಿ "ಮಜಾ" ಮಾಡಿದನೆಂಬ ಸುದ್ದಿ ಪತ್ರಿಕೆಗಳಲ್ಲಿ ಬಂದಿತ್ತು.

ಬೋಗಸಂದದ ಗವರ್ನರರು ಇದೆಲ್ಲ ತುಸು ಅತಿಶಯೋಕ್ತಿಯೆನ್ನುತ್ತಾರೆ. ಆದರೆ ಅವರ "ವಸಾಹತಿ"ಗೆ ಬಂದವರಿಗೆ ಪತ್ರ ಮೂಲಕ ನೂರಕ್ಕೆ ಇಪ್ಪತ್ತರಷ್ಟು ಜನ ಮಾತ್ರ ಪೋಲೀಸು ಕಾವಲಿನಲ್ಲಿ ಬರುತ್ತಾರೆ. ಇವರು ಹೆಚ್ಚಾಗಿ ಇತರ ಸೆರೆಮನೆಗಳಲ್ಲಿ "ಪಾರಂಗತ ಪಾತಕಿ"ಗಳೆಂದು ಹೆಸರಾದವರು. ಬೋಗಸಂದದ "ಸಂಭಾವಿತ" ಅಪರಾಧಿಗಳ ಸಂಗಡ ಬೆರೆತರೆ ಅವರ ಬುದ್ಧಿ ಸುಧಾರಿಸಬಹುದೆಂಬ ಆಶೆಯಿಂದ ಅವರನ್ನಿಲ್ಲಿಗೆ ಕಳಿಸಲಾಗುತ್ತದೆ!

ಉಳಿದವರ ಮಟ್ಟಿಗೆ, ಅವರು ಪೋಲೀಸ ಕಾವಲಿಲ್ಲದೇ ಸೆರೆಮನೆಗೆ ಬರುತ್ತಾರೆ. ಸಾಮಾನ್ಯ ಕಾಯದೆ ಭಂಜಕರು, ತಮ್ಮ ಕಾರುಗಳಲ್ಲೇ ಸೆರೆಮನೆಗೆ ಬರಲು ಅಡ್ಡಿಯಿಲ್ಲ!




ತಮ್ಮ ವ್ಯವಹಾರ ನಡೆಸಲು ಆತಂಕವಿಲ್ಲ. ಅಪರೂಪಕ್ಕೊಮ್ಮೆ ಅವರಿಗೆ ಟೆಲಿಫೋನು ಉಪಯೋಗಿಸಲಿಕ್ಕೂ ಅಪ್ಪಣೆ ಸಿಗಬಹುದು. ಇನ್ನೂ ಅಪರೂಪವಾಗಿ ರಜಾ ಕೂಡ ದೊರೆತೀತು. ಈಚೆಗೆ ಒಬ್ಬ ಹಡಗು ಕಾರಖಾನೆಯ ಒಡೆಯನು ಒಂದು ವಿದೇಶೀ ಸರಕಾರಕ್ಕೆ ನಿಶ್ಚಿತ ತಾರೀಕಿನೊಳಗೆ ಒಂದು ಹಡಗನ್ನು ಸ್ವಂತ ಡೆಲಿವರಿ ಕೊಡಬೇಕಾದಾಗ ಅವನಿಗೆ ರಜಾ ಕೊಟ್ಟು ದಕ್ಷಿಣ ಸ್ವೀಡನ್ನಿನ ಒಂದು ಬಂದರಕ್ಕೆ ಹೋಗಲು ಅವಕಾಶ ಕೊಡಲಾಯಿತು.

ಬೋಗಸಂದ ಸೆರೆಮನೆಗೆ ಕಳಿಸಲ್ಪಟ್ಟವರಲ್ಲಿ

ಬೋಗಸಂದ ಸೆರೆಮನೆಗೆ ಹೋಗಬೇಕೆಂದು ಶಿಕ್ಷೆಯಾದವನು ಕೂಡಲೇ ಅಲ್ಲಿಗೆ ಹೋಗುವ ಅಗತ್ಯ ಬೀಳುವುದಿಲ್ಲ. ಬೋಗಸಂದದಲ್ಲಿ ಒಮ್ಮೆಗೆ ೪೦ ಜನ "ಕೈದಿ"ಗಳಿಗಷ್ಟೇ ಸ್ಥಳವಿರುತ್ತದೆ. ಆದ್ದರಿಂದ ಶಿಕ್ಷೆಯಾದವರು ಅದನ್ನು ಅನುಭವಿಸಲು ತಮ್ಮ ಸರದಿಗಾಗಿ ಕಾಯಬೇಕಾಗುವುದು. ಸ್ಟಾಕಹೋಂನಲ್ಲಿರುವ ಸೆರೆಮನೆ ಮಂಡಲದ ಕಚೇರಿಗೆ ಭೆಟ್ಟಿ ಕೊಟ್ಟು ಅವರು ತಮ್ಮ ಪಾಳಿ ಎಂದು ಬರುವುದೆಂದು ವಿಚಾರಿಸಿಕೊಂಡು ಆ ಸಮಯಕ್ಕೆ ಹಾಜರಾದರಾಯಿತು.

ಕೈದಿಯ ಗೆಳೆಯನೋ ಪರಿಚಿತನೋ ಯಾರಾ

ದರೂ ಅದೇ ಕಾಲದಲ್ಲಿ ಶಿಕ್ಷೆ ಅನುಭವಿಸುತ್ತಿದ್ದರೆ ಅವನ ಕೋಣೆಯಲ್ಲೇ ತನ್ನನ್ನೂ ಹಾಕಬೇಕೆಂದು ಕೇಳಬಹುದು. ಹೆಚ್ಚಾಗಿ ಪ್ರತಿ ಕೋಣೆಯಲ್ಲಿ ಇಬ್ಬಿಬ್ಬರು ಇರುತ್ತಾರೆ. ಆದರೆ ಯಾವುದೊಂದು ಕಾರಣದಿಂದ-ಉದಾಹರಣೆಗೆ ಒಬ್ಬನು ಗಟ್ಟಿಯಾಗಿ ಗೊರಕೆ ಹೊಡೆಯುವ ಅಭ್ಯಾಸದವನಾಗಿದ್ದರೆ,—ಅವನನ್ನು ಬೇರೆಯೇ ಕೋಣೆಯಲ್ಲಿ ಹಾಕಬಹುದಾಗಿದೆ. ಸ್ವೀಡನ್ನಿನ ಯಾವುದೇ ಸೆರೆಮನೆಯಲ್ಲಿ ಕೈದಿಯು ರಗ್ಗು, ಪರದೆ, ಚಿತ್ರ, ಪುಷ್ಪ ಮತ್ತು ಪುಸ್ತಕಗಳಿಂದ ತನ್ನ ಕೋಣೆಯನ್ನು ಸಿಂಗರಿಸಿಕೊಳ್ಳಲು ಸ್ವತಂತ್ರನಿದ್ದಾನೆ.

ಕೈದಿಗಳು ಆದಿತ್ಯವಾರ ಹೊರತು ಬೇರೆ ದಿನಗಳಲ್ಲಿ ಬೆಳಗ್ಗೆ ಆರೂವರೆ ಗಂಟೆಗೆ ಎಬ್ಬಿಸಲ್ಪಡುತ್ತಾರೆ. ಏಳರಿಂದ ಸಂಜೆ ನಾಲ್ಕರ ವರೆಗೆ ದುಡಿಯಬೇಕಾಗುತ್ತದೆ. ನಡುವೆ ಕಾಫಿಗಾಗಿ ಒಮ್ಮೆ ೧೫ ನಿಮಿಷ, ಊಟಕ್ಕಾಗಿ ಒಮ್ಮೆ ಒಂದು ತಾಸು ಬಿಡುವು. ಬೇಸಗೆಯಲ್ಲಿ ಅವರು ಬೇಸಾಯ ಮಾಡುವರು. ಚಳಿಗಾಲದಲ್ಲಿ ಸೈಕಲ್ಲುಗಳಲ್ಲಿ ಹೋಗಿ ಅಡವಿಯಲ್ಲಿ ಮರ ಕಡಿಯಬೇಕು. ನಟರಂಥ ಸುಖಪುರುಷರಿಗೆ ಇದು ತುಸು ಕಠಿನ ಶ್ರಮವೇ ಸೈ. ಆದರೆ ಅದರಿಂದ ನಿಸ್ತಾರವಿಲ್ಲ. ಕೆಲ ವೇಳೆ ಇವರಿಗೆ ಅಪಘಾತಗಳೂ ಆಗುತ್ತವೆ. "ಆದರೆ ಈ ವರೆಗೆ ಯಾರೂ ಸತ್ತಿಲ್ಲ" ಎಂದು ಗವರ್ನರರು ಭರವಸೆ ಕೊಡುತ್ತಾರೆ.

ಈ ಎಲ್ಲ ಶ್ರಮಕ್ಕೆ ಕೈದಿಗೆ ದಿನಕ್ಕೆ ೧೦ ಆಣೆಯಷ್ಟು ಪ್ರತಿಫಲ ಸಿಗುತ್ತದೆ. ಇದರಲ್ಲಿ ಅವನು ವಾರಕ್ಕೆ ಒಂದೂಕಾಲು ರೂಪಾಯಿಯಷ್ಟನ್ನು ಸಿಗರೇಟು, ಪತ್ರಿಕೆ ಇತ್ಯಾದಿಗಳಿಗಾಗಿ ವೆಚ್ಚ ಮಾಡಬಹುದು.

ರವಿವಾರ ಪೂರ್ತಿ ರಜೆ. ಎಂಟು ಗಂಟೆಯ ವರೆಗೂ ಮಲಗಬಹುದು. ಮಧ್ಯಾಹ್ನ ಎರಡರಿಂದ ನಾಲ್ಕರ ವರೆಗೆ ಅವರು ಸಂದರ್ಶಕರೊಡನೆ ಕಾವಲುಗಾರರ ಕಣ್ಣು ಕಾಪಿಲ್ಲದೆ ಕಾಲ ಕಳೆಯುತ್ತಾರೆ. "ತಾತ್ಕಾಲಿಕ ವಿಧವೆಯರು'' ಎಂದು ಕರೆಯಲ್ಪಡುವ ಕೈದಿಗಳ ಹೆಂಡಂದಿರು ಗಂಡಂದಿರಿಗಾಗಿ ಆಗ ಉಪಹಾರ ತರಬಹುದು. ಮದ್ಯ ಮೊದಲಾದ ಕೆಲ ಪದಾರ್ಥಗಳು ಮಾತ್ರ ಒಳಗೆ ಬರುವಂತಿಲ್ಲ.

ಗವರ್ನರರಿಗೆ ಒಂದೇ ಕೊರತೆ ಅನಿಸುತ್ತದೆ. ತಮ್ಮ ವಸಾಹತಿನಲ್ಲಿ ಸಾಕಷ್ಟು ಆಟಪಾಟ ಮನೋರಂಜನೆಗಳ ವ್ಯವಸ್ಥೆ ಇಲ್ಲೆಂಬುದೇ ಅದು. ಆದರೆ ಫುಟ್‌ಬಾಲ್ ವ್ಯವಸ್ಥೆ ಇದೆ ಎನ್ನಿ. ಒಟ್ಟಿನ ಮೇಲೆ ಸೆರೆಮನೆಗೆ ಹೋಗಲೇಬೇಕೆಂದಾದರೆ ಬೋಗಸಂದವು ಕೈದಿಯ ದೃಷ್ಟಿಯಿಂದ ಆದರ್ಶ ಸ್ಥಳವೆಂದು ಅಲ್ಲಿ ಹೋಗಿ ಬಂದ ಗೈಲ್ಸ್ ಪ್ಲೇಫೇರರು "ನ್ಯೂ ಸ್ಟೇಟ್ಸಮನ್"ನಲ್ಲಿ ಬರೆಯುತ್ತಾರೆ.

ಸ್ವೀಡನ್ನಿನಲ್ಲಿ ಎಷ್ಟೋ ಜನರು ತಮ್ಮ ದೇಶದ ದಂಡನೀತಿ ಮಿತಿಮೀರಿ ಭೂತದಯಾಪರವಾಗಿದೆಯೆಂದು ದೂರುವವರಿದ್ದಾರೆ. ಬೋಗಸಂದದಂಥ ಸ್ಥಳಕ್ಕೆ ಹೋಗುವುದೆಂದರೆ ಶಿಕ್ಷೆಯಲ್ಲ, ವಿಶ್ರಾಂತಿ ಚಿಕಿತ್ಸೆಯೇ ಸೈ ಎಂದು ಅವರ ಅಂಬೋಣ.



## ಪಾಪ-ಪುಣ್ಯ

ನಾವೆಲ್ಲರೂ ಒಬ್ಬರ ಮುಂದೊಬ್ಬರು ನಮ್ಮನಮ್ಮ ಪಾಪಗಳ ಕಂತೆಯನ್ನು ಓದಹತ್ತಿದರೆ ಯಾರಲ್ಲಿಯೂ ಏನೂ ವೈಶಿಷ್ಟ್ಯವಿಲ್ಲೆಂದರಿತು ಬಿದ್ದುಬಿದ್ದು ನಕ್ಕೇವು.

ಹಾಗೆಯೇ ನಾವು ನಮ್ಮನಮ್ಮ ಸದ್ಗುಣಗಳನ್ನು ಒಬ್ಬರಿಗೊಬ್ಬರು ಬಣ್ಣಿಸಿದರೆ ಆಗಲೂ ಅದೇ ಕಾರಣದಿಂದ ನಕ್ಕುನಕ್ಕು ಸತ್ತೇವು.

—"ಮೃಗಜಲಕೇ ಮೋಹಿ"ಯಿಂದ

**ಅತ್ತೆ ನಾದಿನಿ ಗಂಡಂದಿರ ಜಾಲದಿಂದ ಗಲ್ಲಿಗೇರ ಬೇಕಾಗಿದ್ದ ನಿರಪರಾಧಿನಿ ಕೂದಲೆಳೆಯಷ್ಟು ಸುದೈವದಿಂದ ಪಾರಾದಳು.**

# ಅದೃಷ್ಟಶಾಲಿ ನಿರ್ಭಾಗ್ಯೆ

ರಂಗರಾವ ತಲಚೇರಕರ

ಪೂರ್ಣವಾಗಿ ನಿರಪರಾಧಿಯಾದ ಮನುಷ್ಯನು ತಾನು ಅಪರಾಧ ಮಾಡಿದ್ದೇನೆಂದು ಕಬೂಲಿ ಜವಾಬು ಕೊಡುವದೆಂದರೆ ನಂಬಲಸಾಧ್ಯವಾದ ವಿಷಯವೆಂದು ನ್ಯಾಯಸ್ಥಾನಗಳ ಸಂಪರ್ಕ, ಪರಿಚಯವಿಲ್ಲದ ಸಾಮಾನ್ಯ ಜನರು ಭಾವಿಸಬಹುದು. ಆದರೆ, ಪೋಲೀಸರು ಕೊಡಬಹುದಾದ ಚಿತ್ರಹಿಂಸೆಯಿಂದ ಅಥವಾ ಅದರ ಭೀತಿಯಿಂದ ಇಲ್ಲವೆ ಪೋಲೀಸರಾಗಲಿ ಇತರರಾಗಲಿ ತೋರಿಸಿದ ಅಂಜಿಕೆಯಿಂದ ಅಥವಾ ಕೊಟ್ಟ ಯಾವದೇ ರೀತಿಯ ಆಶ್ವಾಸನದಿಂದ ನಿರಪರಾಧಿಗಳು ಸಹ ಅಪರಾಧ ಕಬೂಲು ಮಾಡಿದ ಸಂದರ್ಭಗಳು ಎಷ್ಟೋ ಅನುಭವಕ್ಕೆ ಬರುತ್ತವೆ. ಇಂತಹ ಅಪರಾಧ ಕಬೂಲಿಯಿಂದ ಆಗುವ ಅನ್ಯಾಯವನ್ನು ತಪ್ಪಿಸುವದಕ್ಕಾಗಿಯೇ ಭಾರತದ ಪುರಾವೆಯ ಕಾಯದೆಯಲ್ಲಿ ಯಾವದೇ ಅಪರಾಧ ಕಬೂಲಿಯು ಅಂಜಿಕೆ ಅಥವಾ ಆಶ್ವಾಸನದಿಂದ ಪ್ರೇರಿತವಾದುದೆಂದು ಕೋರ್ಟಿಗೆ ಸಂಶಯ ಉಂಟಾದರೆ, ಅದು ಪುರಾವೆಯಲ್ಲಿ ಅಗ್ರಾಹ್ಯವೆಂದು ಹೇಳಲಾಗಿದೆ.

ಅಪರಾಧ ಪತ್ತೆ ಹಚ್ಚುವ ಶ್ರಮ ಹಾಗೂ ಪತ್ತೆ ಆಗದಿದ್ದರೆ ಬರುವ ಅಪಯಶ, ಇವುಗಳನ್ನು ತಪ್ಪಿಸಲು ಆರೋಪಿತನು ಅಪರಾಧವನ್ನು ಒಪ್ಪಿದ್ದಾನೆಂಬ ಸುಲಭ ಉಪಾಯವನ್ನು ಪೋಲೀಸರು ಕೈಕೊಳ್ಳುವ ಸಂಭವವಿರುವದರಿಂದ ಪೋಲೀಸರ ಮುಂದೆ ಮಾಡಿದ್ದೆಂದು ಹೇಳಲಾಗುವ ಅಪರಾಧ ಕಬೂಲಿಯು ಪುರಾವೆಯ ಕಾಯದೆಯ ಪ್ರಕಾರ ಗ್ರಾಹ್ಯವಿರುವದಿಲ್ಲ. ಅಂತಹ ಕಬೂಲಿಯು ಗ್ರಾಹ್ಯವಾಗಬೇಕಾದರೆ, ಅದನ್ನು ಮ್ಯಾಜಿಸ್ಟ್ರೇಟರ ಮುಂದೆ ಮಾಡತಕ್ಕದ್ದು.

ನಿಜವಲ್ಲದ ಅಪರಾಧ ಕಬೂಲಿಯು ಮುಂದೆ ಬಾರದಂತೆ ಕಾಯದೆಯು ಈ ವ್ಯವಸ್ಥೆ ಮಾಡಿದ್ದರೂ ಕಬೂಲಿ ಮಾಡಿಸುವವರ ಚಾಣಾಕ್ಷತನದಿಂದ ಎಷ್ಟೋ ಸಾರೆ ಅದೂ ಸಹ ನಿರರ್ಥಕವಾಗಬಹುದು. ಅಪರಾಧ ಕಬೂಲಿ ಮಾಡಲು ಪ್ರೇರೇಪಿಸಿದವರು ಆರೋಪಿತನಿಗೆ "ಮ್ಯಾಜಿಸ್ಟ್ರೇಟರು ನಿನಗೆ ಅಪರಾಧ ಕಬೂಲಿ ಕೊಡಬೇಕೆಂದು ಅಂಜಿಕೆ ಹಾಕಿದ್ದಾರೊ ಅಥವಾ ಏನಾದರೂ ಆಶ್ವಾಸನ ಕೊಟ್ಟಿದ್ದಾರೊ ಎಂದು ಕೇಳ

---

**ಶ್ರೀ ತಲಚೇರಕರ ರಂಗರಾಯರು ಹಳಗಿದ ಕ್ರಿಮಿನಲ್ ವಕೀಲರು. ಮಂಗಳೂರಲ್ಲಿ ಹಲ ವರ್ಷ ವಕೀಲಿ ನಡೆಸಿ ಈಗ ಬೆಳಗಾವಿಯಲ್ಲಿದ್ದಾರೆ.**



ಬಹುದು. ಅದಕ್ಕೆ ಇಲ್ಲವೆಂದು ಹೇಳು" ಹಾಗೂ "ಅಪರಾಧ ಕಬೂಲಿ ಮಾಡಿದ್ದರಿಂದ ನಿನಗೆ ಏನಾದರೂ ಸೌಕರ್ಯ ಇಲ್ಲವೆ ಲಾಭ ಸಿಗುವದಿಲ್ಲವೆಂಬುದು ಗೊತ್ತಿದೆಯೊ ಎಂದು ಕೇಳಿದರೆ ಗೊತ್ತಿದೆಯೆಂದು ಹೇಳು" ಈ ರೀತಿ ಉತ್ತರ ಹೇಳಲು ಕಲಿಸಿಕೊಟ್ಟು ಇಂತಹ ಉತ್ತರಗಳಿಂದ ಅಪರಾಧ ಕಬೂಲಿಯು ಸ್ವಯಂ ಪ್ರೇರಣೆಯಿಂದ ಮಾಡಿದ್ದಲ್ಲವೆಂಬ ಸಂಗತಿಯು ಮ್ಯಾಜಿಸ್ಟ್ರೇಟರಿಗೂ ತಿಳಿದುಬಾರದಂತೆ ಉಪಾಯಯೋಜನೆ ಮಾಡುತ್ತಾರೆ.

ಇಂತಹ ಒಂದು ಸಂಗತಿಯು ನನ್ನ ವಕೀಲಿಯ ವ್ಯವಸಾಯದ ಉಷಃಕಾಲದಲ್ಲೇ ನನ್ನ ಅನುಭವಕ್ಕೆ ಬಂದಿತು. ಆ ಖಟ್ಲೆಯಲ್ಲಿನ ಆರೋಪಿತ ಹೆಣ್ಣುಮಗಳು ಒಂದು ಆಕಸ್ಮಿಕ ಘಟನೆ ನಡೆಯದಿದ್ದರೆ ತಾನು ಮಾಡದಿದ್ದ ಅಪರಾಧವನ್ನು ಮ್ಯಾಜಿಸ್ಟ್ರೇಟರ ಮುಂದೆ ಒಪ್ಪಿಕೊಂಡು ದೇಹಾಂತ ಶಿಕ್ಷೆಗೆ ಗುರಿಯಾಗುತ್ತಿದ್ದಳು.

ಮಂಗಳೂರಿನಲ್ಲಿನ ಒಂದು ಬ್ಯಾಂಕಿನ ಸಿಪಾಯಿಯು ಅನಾಥೆಯಾದ ಕಮಲೆ ಎಂಬ ಹುಡುಗಿಯನ್ನು ಮದುವೆಯಾಗಿದ್ದನು. ಅವಳು ಸುಶೀಲೆಯೂ ಅತ್ಯಂತ ಸೌಮ್ಯಸ್ವಭಾವದವಳೂ ಇದ್ದಳು. ಆದರೆ, ಅದೇ ಮನೆಯಲ್ಲಿದ್ದ ಅವನ ತಂಗಿಯು ಗಂಡನಿಂದ ಪರಿತ್ಯಕ್ತೆಯಾಗಿ ವೇಶ್ಯಾಜೀವನವನ್ನೇ ನಡೆಸುತ್ತಿದ್ದಳು. ಅವಳ ತಾಯಿಯೂ ಅದೇ ಮನೋವೃತ್ತಿಯವಳಿದ್ದು ಮಗಳಿಗೆ ಅನುಕೂಲವಾಗಿದ್ದಳು. ಗಂಡನು ದುರ್ಬಲ ಮನಸ್ಸಿನವನಿದ್ದು ಸಂಪೂರ್ಣವಾಗಿ ತಾಯಿ, ತಂಗಿಯರ ಅಧೀನನಾಗಿದ್ದುದರಿಂದ ಕಮಲೆ ನರಕವಾಸವನ್ನೇ ಅನುಭವಿಸಬೇಕಾಗುತ್ತಿತ್ತು.

ಗಂಡನು ಹೆಚ್ಚಾಗಿ ರಾತ್ರಿಯಲ್ಲಿ ಬ್ಯಾಂಕಿನಲ್ಲೇ ಮಲಗಬೇಕಾಗುತ್ತಿತ್ತು. ಹಾಗಾಗಿ ಮನೆಯಲ್ಲಿ ಅವನ ತಂಗಿಯ ವ್ಯವಸಾಯ ಸರಾಗವಾಗಿ ನಡೆಯುತ್ತಿತ್ತು. ಒಂದು ರಾತ್ರಿ ಒಬ್ಬ ಶ್ರೀಮಂತ ವಿಟನು ಬಂದನು. ಆದರೆ, ದುರ್ದೈವದಿಂದ ಅಂದು ತಂಗಿಯು ಮುಟ್ಟಾಗಿದ್ದಳು. ವಿಟನು

ಬಂದ ಹಾಗೆ ಹಿಂದೆ ಹೋಗಲು ತಯಾರಿರಲಿಲ್ಲ. ತಾಯಿಯೊಡನೆ "ಮಗಳು ಮುಟ್ಟಾದರೆ ಸೊಸೆಯನ್ನು ಕಳಿಸು" ಎಂದು ಹಟಹಿಡಿದನು. ಧನಿಕ ಗಿರಾಕಿಯನ್ನು ನಿರಾಶೆಗೊಳಿಸಲು ತಾಯಿಯು ಸಿದ್ಧಳಿರಲಿಲ್ಲ. ಆದರೆ, ಸೊಸೆಯು ದೇಹವಿಕ್ರಯಕ್ಕೆ ಎಂದೂ ಒಪ್ಪಲಾರಳೆಂದು ಅವಳಿಗೆ ನಿಶ್ಚಯವಿತ್ತು. ಆದ್ದರಿಂದ, ಉಪಾಯ, ಬಲಾತ್ಕಾರಗಳ ಪ್ರಯೋಗದಿಂದಾದರೂ ಆಕೆಯನ್ನು ಬಗ್ಗಿಸಬಹುದೆಂದು ಬಗೆದು ಏನೋ ಒಂದು ನೆವ ಹೇಳಿ ಅವನಿದ್ದ ಕೋಣೆಗೆ ಕಳಿಸಿದಳು. ಏನೂ ಅರಿಯದ ಆ ಮುಗ್ಧ ಹೆಣ್ಣು ಮಗಳು ಒಳಗೆ ಹೋದಳು. ಅವಳ ಕಂಕುಳಲ್ಲಿ ಎಳೇ ಕೂಸು ಇತ್ತು. ಇವಳು ಒಳಗೆ ಕಾಲಿಟ್ಟೊಡನೆ ಆ ವಿಟನು ಬಾಗಿಲು ಇಕ್ಕಿ ಅವಳನ್ನು ಬಲಾತ್ಕರಿಸಲು ತೊಡಗಿದನು. ಅವಳು ಮಣಿಯಲಿಲ್ಲ. ಕುಡಿದು ಮತ್ತನಾಗಿದ್ದ ಅವನು ಕೋಪಾವೇಶದಿಂದ ಆಕೆಯನ್ನು ತುಳಿದನು. ಆ ಜೋರಿನ ತುಳಿತದ ಪೆಟ್ಟು ಕೂಸಿಗೆ ತಾಗಿ ಅದು ತತ್ಕಾಲ ತೀರಿಕೊಂಡಿತು. "ಅಯ್ಯೋ, ಕೂಸು" ಎಂದು ಆಕ್ರೋಶಮಾಡಿ ಕಮಲೆಯು ಸ್ಮೃತಿತಪ್ಪಿ ಬಿದ್ದುಬಿಟ್ಟಳು.

ತನ್ನ ಒಬ್ಬನೇ ಮಗನ ಒಂದೇ ಮಗು ಈ ರೀತಿ ಅಕಾಲಮೃತ್ಯುವಿಗೆ ತುತ್ತಾದುದಕ್ಕಿಂತ ಆ ನೀಚ ತಾಯಿಗೆ ತನ್ನ ಮಗಳ ಹಾಗೂ ಅವಳ ಗೆಣೆಯನ ಮಾನಕ್ಕಾಗಲಿ ಪ್ರಾಣಕ್ಕಾಗಲಿ ಅಪಾಯಬಾರದಂತೆ ಮಾಡುವದೇ ಮಹತ್ವದ್ದೆನಿಸಿತು. ಕೂಸು ಪೆಟ್ಟಿನಿಂದ ಸತ್ತದ್ದನ್ನು ಮುಚ್ಚಿಡುವ ಹಾಗೂ ತಮ್ಮ ನೀಚಕೃತ್ಯಗಳಿಗೆ ಕಂಟಕಪ್ರಾಯಳಾದ ಸೊಸೆಯನ್ನು ಕಿತ್ತೊಗೆಯುವ ಎರಡೂ ಉದ್ದೇಶಗಳನ್ನು ಸಾಧಿಸಲು ಆ ನರಾಧಮಳು ಕೂಸಿನ ಶರೀರವನ್ನು ಬಾವಿಗೆ ಎಸೆದಳು. ಹಿತ್ತಿಲಲ್ಲಿ ಬೇರೆ ಮನೆಗಳಿರಲಿಲ್ಲ. ಅಲ್ಲದೆ ಮಳೆಯೂ ಜೋರಾಗಿ ಬೀಳುತ್ತಲಿತ್ತು. ಬಾವಿಯೂ ಆಳವಿರಲಿಲ್ಲ. ಹಾಗಾಗಿ ಕೂಸನ್ನು ಒಗೆದ ಸಪ್ಪಳ ಯಾರಿಗೂ ಹೊರಗಿನವರಿಗೆ ಕೇಳಿಸಲಿಲ್ಲ.

ಮುಂಜಾನೆ ಮಗನು ಮನೆಗೆ ಬಂದೊಡನೆ ಕಮಲೆಯೇ ಕೂಸನ್ನು ಬಾವಿಗೆ ಎಸೆದು ಕೊಂದಳೆಂದು ತಾಯಿ, ಮಗಳು ಹೇಳಿದರು. ರಾತ್ರಿಯಲ್ಲಿ ಏನೋ ಮಾತಿಗೆ ಮಾತು ಬಂತೆಂದೂ ಆ ಸಿಟ್ಟಿನಲ್ಲಿ ಕೂಸನ್ನು ಎತ್ತಿಕೊಂಡು ಹೊರಗೆ ಹೋದಳೆಂದೂ ಒಂದೆರಡು ತಾಸಿನಮೇಲೆ ಒಬ್ಬಳೇ ತಿರುಗಿ ಬಂದಳೆಂದೂ ಕೂಸು ಎಲ್ಲಿದೆಯೆಂದಾಗ ಮಾತೇ ಆಡಲಿಲ್ಲವೆಂದೂ ಮುಂಜಾನೆ ನೀರಿಗೆಂದು ಭಾವಿಗೆ ಹೋದಾಗ ಕೂಸಿನ ಶವವು ಕಂಡಿತೆಂದೂ ಕತೆಯನ್ನು ರಚಿಸಿ ಅವನಿಗೆ ಹೇಳಿದರು.

ತಾಯಿ, ತಂಗಿಯರ ಕೈಗೊಂಬೆಯಾಗಿದ್ದ ಆ ಗಂಡನು ಅವರು ಹೇಳಿದ್ದನ್ನೇ ಪೋಲೀಸ ಸ್ಟೇಶನಿಗೆ ಹೋಗಿ ತಿಳಿಸಿದನು. ಕೂಡಲೇ ಪೋಲೀಸರು ಬಂದು ಶವದ ಮಹಾಜರ ಮಾಡಿದರು.

ಕಮಲೆಯು ನಿಜ ಸಂಗತಿಯನ್ನು ಹೇಳಿದರೂ ಅದು ಅರಣ್ಯರೋದನವಾಯಿತು. ಗಂಡನು ಸಹ ಅದನ್ನು ಸಮರ್ಥಿಸದಿರುವಾಗ, ಅದು ಸಿದ್ಧವಾಗುವುದು ಹೇಗೆ? ಹಾಗೂ ಅವಳನ್ನು ಅತ್ತೆ ನಾದಿನಿಯರು ಬಹಳವಾಗಿ ಪೀಡಿಸುತ್ತಿದ್ದುದು ಸರ್ವಶ್ರುತವಿದ್ದುದರಿಂದ ಅವಳು ಮಗುವನ್ನು ಬಾವಿಗೆ ಎಸೆದು ತಾನೂ ಹಾರುವ ಉದ್ದೇಶದಿಂದ ಈ ರೀತಿ ಮಾಡಿರಬೇಕೆಂದು ಊಹಿಸಲು ಆಧಾರವಿದ್ದಿತು.

ಅಂತೂ ಕಮಲೆಯು ಮಗುವನ್ನು ಕೊಂದ ಆರೋಪದ ಮೇಲೆ ದಸ್ತಗಿರಿ ಮಾಡಲ್ಪಟ್ಟು ಸೆರೆಮನೆಯನ್ನು ಪ್ರವೇಶಿಸಿದಳು.

ಪೋಲೀಸರು ಆಕೆಯ ಮೇಲೆ ಖಟ್ಲೆ ಹಾಕುವದಾಗಿ ನಿರ್ಧರಿಸಿದ್ದರೂ ಪ್ರತ್ಯಕ್ಷ ಪುರಾವೆಯ ಅಭಾವದಲ್ಲಿ ಇದ್ದ ಪುರಾವೆಯು ಅಪರಾಧ ಸಾಬೀತಾಗುವಷ್ಟು ಬಲವತ್ತರವಿತ್ತೆಂದು ಹೇಳಬರುವಂತಿರಲಿಲ್ಲ. ಅಲ್ಲದೆ, ಸತ್ಯ ಸಂಗತಿಯು ಎಂದಾದರೂ ಹೊರಬೀಳುವ ಸಂಭವ ಇದ್ದೇ ಇತ್ತು.

ಇದರ ನಿವಾರಣೆಗಾಗಿ ಆ ನೀಚ ತಾಯಿ ಮಗಳಿಬ್ಬರು ಕಮಲೆಯಿಂದ ಅಪರಾಧ ಕಬೂಲಿ ಮಾಡಿಸುವ ಕೃಷ್ಣ ಕಾರಸ್ಥಾನವನ್ನು ಹೂಡಿ

ದರು. ಇದರಲ್ಲಿ ಅತ್ಯಂತ ನಾಚಿಕೆಗೇಡಿತನದ ಸಂಗತಿಯೆಂದರೆ ಒಬ್ಬ ವಕೀಲರೇ ಸಲಹೆ ಕೊಟ್ಟು ಈ ನ್ಯಾಯದ ಕೊಲೆಯಲ್ಲಿ ನೆರವಾದರು.

ಗಂಡನನ್ನು ಅವಳ ಬಳಿಗೆ ಕಳಿಸಿ "ನೀನೇ ಕೂಸನ್ನು ಕೊಂದಿರುವಿ ಎಂದು ಪೋಲೀಸರ ಗ್ರಹವಾಗಿದೆ. ನಾವು ಎಷ್ಟು ಹೇಳಿದರೂ ನೀನು ನಿರಪರಾಧಿಯೆಂದು ಅವರು ನಂಬುವದಿಲ್ಲ. ನಿನ್ನನ್ನು ಬಿಡಿಸಲು ಒಂದೇ ದಾರಿಯಿದೆ. ನೀನು ಅಪರಾಧವನ್ನು ಒಪ್ಪಿಕೊಂಡು ಮನಸ್ಸಿಗೆ ಬಹಳ ವ್ಯಥೆಯಾಗಿದ್ದಾಗ ಆ ಕೃತ್ಯವನ್ನು ಮಾಡಿದೆ ನೆಂದು ಹೇಳಿ ಕ್ಷಮೆ ಕೇಳಿದರೆ ನಿನ್ನನ್ನು ಅವರು ಬಿಡಬಹುದು" ಎಂದು ಹೇಳಿಸಿದರು. ಮೇಲಿಂದ ಮೇಲೆ ಗಂಡನು ಈ ರೀತಿ ಹೇಳುವಾಗ ಏನೂ ತಿಳಿಯದ ಆ ನಿಷ್ಪಾಪ ಜೀವಿಯು ಅವನ ಮಾತುಗಳನ್ನು ನಂಬಿದಳು.

ತಾನು ಅವಳನ್ನು ಉಳಿಸುವ ಸಲುವಾಗಿ ವಕೀಲರನ್ನು ಇಟ್ಟಿದ್ದೇನೆಂದು ಅವಳಿಗೆ ಗಂಡನು ಭರವಸೆ ಕೊಟ್ಟನು. ಆ ವಕೀಲರೂ ಗಂಡನೂ ಇಬ್ಬರೂ ಅವಳಿಗೆ "ನೋಡು, ಮ್ಯಾಜಿಸ್ಟ್ರೇಟರಿಗೆ ನೀನು ಯಾರದಾದರೂ ಮಾತು ಕೇಳಿ ಅಪರಾಧ ಕಬೂಲಿ ಮಾಡುತ್ತಿಯೆಂದು ಸಂಶಯ ಬಂದರೆ ಅವರು ನಿನ್ನನ್ನು ಕ್ಷಮಿಸಲಿಕ್ಕಿಲ್ಲ. ಆದ್ದರಿಂದ, ಅಂತಹ ಸಂಶಯ ಬಾರದಂತೆ ಅವರು ಕೇಳಿದ ಪ್ರಶ್ನೆಗಳಿಗೆ ಉತ್ತರ ಕೊಡು" ಎಂದು ಹೇಳಿ ಮ್ಯಾಜಿಸ್ಟ್ರೇಟರು ಅಪರಾಧ ಕಬೂಲಿಯು ಸ್ವಯಂ ಸ್ಫೂರ್ತಿಯಿಂದ ಮಾಡಲ್ಪಟ್ಟದ್ದೆಂದು ಖಾತ್ರಿ ಮಾಡಿಕೊಳ್ಳಲು ಕೇಳುವ ಪ್ರಶ್ನೆಗಳಿಗೆಲ್ಲಾ ಏನು ಉತ್ತರ ಹೇಳಬೇಕೆಂದು ಸರಿಯಾಗಿ ಕಲಿಸಿಕೊಟ್ಟರು.

ಇನ್ನು ಇವರ ಪಾಶವೀ ಹಂಚಿಕೆಯು ಕೈಗೂಡಲು ಯಾವದೇ ಆತಂಕವಿರಲಿಲ್ಲ. ಆರೋಪಿತಳು ಅಪರಾಧ ಕಬೂಲಿ ಕೊಡುತ್ತಾಳೆಂದು ಪೋಲೀಸರಿಂದ ವರದಿ ಬಂದೊಡನೆ ಮ್ಯಾಜಿಸ್ಟ್ರೇಟರು ಅಪರಾಧಿಯನ್ನು ಕೋರ್ಟಿಗೆ ಕರೆಯಿಸಿ ಅಪರಾಧ ಕಬೂಲಿ ಬರೆದುಕೊಳ್ಳುವ ಪೂರ್ವದಲ್ಲಿ ಕ್ರಮದಂತೆ ಕೊಡಬೇಕಾದ ಎಚ್ಚರಿಕೆಯನ್ನು ಕೊಟ್ಟು ಮರುದಿನ ಮುಂಜಾನೆ ಅವಳ ಹೇಳಿಕೆಯನ್ನು ಬರೆದುಕೊಳ್ಳಲು ಜೇಲಿಗೆ ಬರುವದಾಗಿ ತಿಳಿಸಿದರು.

ತಿಳಿಸಿದಂತೆ ಅವರು ಮರುದಿನ ಮುಂಜಾನೆ ಜೇಲಿಗೆ ಹೋಗಿದ್ದರೆ, ಅವಳು ಅಪರಾಧ ಕಬೂಲಿ ಮಾಡುತ್ತಿದ್ದಳು ಹಾಗೂ ಅದು ಖಟ್ಲೆಯಲ್ಲಿ ಹಾಜರ ಮಾಡಲ್ಪಟ್ಟು ಅವಳು ದೇಹಾಂತ ಅಥವಾ ಜೀವಾವಧಿ ಶಿಕ್ಷೆಗೆ ಒಳಗಾಗುತ್ತಿದ್ದಳು.

ಮನುಷ್ಯಜೀವನದಲ್ಲಿ ಎಷ್ಟೋ ಸಾರೆ ಅತಿ ಅಲ್ಪವೆಂದು ತೋರುವ ಅನಿರೀಕ್ಷಿತ ಘಟನೆಗಳಿಂದ ಜೀವನದ ದಿಶೆಯೇ ಬದಲಾಗುತ್ತದೆ. ಹಾಗೆಯೇ ಕಮಲೆಯ ಜೀವನದಲ್ಲೂ ಆಯಿತು.

ಮರುದಿನ ಒಂಭತ್ತು ಗಂಟೆಗೆ ಜೇಲರರು ಆಕೆಯನ್ನು ತನ್ನ ಕೋಣೆಗೆ ಕರೆಯಿಸಿ ಮ್ಯಾಜಿಸ್ಟ್ರೇಟರ ಹಾದಿ ನೋಡುತ್ತಾ ಕುಳಿತಿದ್ದರು. ಆ ಕಾಲದಲ್ಲಿ ಮಂಗಳೂರ ಜೇಲಿನಲ್ಲಿ ಅಮೃತರಾಯರೆಂಬವರು ಜೇಲರರಿದ್ದರು. ಅವರು ಅತ್ಯಂತ ಕಠೋರರೆಂದು ಹೆಸರು ಪಡೆದಿದ್ದರೂ ನ್ಯಾಯಪಕ್ಷಪಾತಿಗಳೂ ಸಾಹಸಿಗಳೂ ಇದ್ದರು. ಕೋಣೆಗೆ ತರಲ್ಪಟ್ಟೊಡನೆ ಕಮಲೆಯು ಒಂದೇ ಸವನೆ ಅಳಹತ್ತಿದ್ದನ್ನು ನೋಡಿ ಅವರಿಗೇನೋ ಸಂಶಯ ಬಂದಿತು. ಸಹಾನುಭೂತಿಯಿಂದ ಅವಳೊಡನೆ ಸಂಭಾಷಣೆಗೆ ತೊಡಗಿದಾಗ ಅವಳು ನಡೆದ ಯಾವತ್ತೂ ಸಂಗತಿಯನ್ನೂ ಗಂಡನ ಕಾರಸ್ಥಾನವನ್ನೂ ವಿವರವಾಗಿ ಹೇಳಿಬಿಟ್ಟಳು. ಅವಳ ಸುದೈವದಿಂದ ಮ್ಯಾಜಿಸ್ಟ್ರೇಟರು ಬರುವಾಗ ಒಂದು ತಾಸು ತಡವಾದುದರಿಂದ ಇದೆಲ್ಲಾ ಸಾಧ್ಯವಾಯಿತು. ಮ್ಯಾಜಿಸ್ಟ್ರೇಟರು ಬಂದೊಡನೆ ಜೇಲರರು ಅವಳು ಹೇಳಿದ್ದನ್ನೆಲ್ಲ ತಿಳಿಸಿದರು. ಮ್ಯಾಜಿಸ್ಟ್ರೇಟರು ಅವಳ ಹೇಳಿಕೆಯನ್ನು ಬರೆದುಕೊಳ್ಳಲು ಇನ್ನೆರಡು ದಿವಸಗಳಲ್ಲಿ ಬರುವದಾಗಿ ಹೇಳಿ ಹಿಂತಿರುಗಿದರು.

ನಾನು ಅದೇ ಆಗ ಮಂಗಳೂರಲ್ಲಿ ವಕೀಲಿಯನ್ನು ಪ್ರಾರಂಭಿಸಿದ್ದೆನು. ಅಮೃತರಾಯರು ನನ್ನನ್ನು ಕರೆದು ಅವಳ ಪರವಾಗಿ ಕೆಲಸ ಮಾಡಲು ಹೇಳಿದರು. ನಿರಪರಾಧಿ ಹೆಣ್ಣು

ಮಗಳನ್ನು ಬಿಡಿಸುವ ಈ ಸಂಧಿಯನ್ನು ಸ್ವೀಕರಿಸಲು ನನಗೂ ಆನಂದವಾಯಿತು. ಅಪರಾಧ ಕಬೂಲಿಯಿಂದಾಗುವ ಪರಿಣಾಮವನ್ನು ನಾವು ಅವಳಿಗೆ ಸಾದ್ಯಂತವಾಗಿ ತಿಳಿಸಿದೆವು. ಆದರೆ ಅಪರಿಚಿತರಾದ ನಮ್ಮ ಮೇಲೆ ಅವಳಿಗೆ ಸಂಪೂರ್ಣ ವಿಶ್ವಾಸ ಹುಟ್ಟುವ ವಿಷಯದಲ್ಲಿ ನಮಗೂ ಸಂಶಯವಿತ್ತು.

ಕಮಲೆಯು ಮೇಲೆ ಹೇಳಿದಂತೆ ಅನಾಥೆಯಾಗಿದ್ದಳು. ಅವಳ ದೂರದ ಆಪ್ತರು ಮಂಗಳೂರಿನಿಂದ ೧೦-೧೨ ಮೈಲು ದೂರದಲ್ಲಿದ್ದ ಕಟೀಲ ಎಂಬಲ್ಲಿದ್ದಾರೆಂದು ಗೊತ್ತಾಗಿ ಅದೇ ಊರಿನ ಸಮೀಪದವರೂ ಪ್ರಖ್ಯಾತ ಕಾಂಗ್ರೆಸ ಹಾಗೂ ಸಾಮಾಜಿಕ ಕಾರ್ಯಕರ್ತರೂ ಆದ ದಿವಂಗತ ನಾರಾಯಣ ಕಿಲ್ಲೆಯವರ ನೆರವಿನಿಂದ ಅವರನ್ನು ಮಂಗಳೂರಿಗೆ ಕರೆಸಿ ಅವರೂ ನಾರಾಯಣ ಕಿಲ್ಲೆಯವರೂ ಅವಳಿಗೆ ಸರಿಯಾದ ತಿಳಿವಳಿಕೆ ಕೊಡುವಂತೆ ವ್ಯವಸ್ಥೆ ಮಾಡಿದೆವು. ಹಾಗೂ ಮ್ಯಾಜಿಸ್ಟ್ರೇಟರ ಮುಂದೆ ನಿರ್ಭೀತಿಯಿಂದ ನಿಜ ಸಂಗತಿಯನ್ನು ಹೇಳಬೇಕೆಂದು ಧೈರ್ಯಕೊಟ್ಟು ಖಟ್ಲೆಯನ್ನು ನಾನು ಪುಕ್ಕಟೆಯಾಗಿ ನಡೆಸುವೆನೆಂದು ಆಶ್ವಾಸನ ಕೊಟ್ಟೆನು.

ಖಟ್ಲೆಯು ಚೌಕಶಿಗೆ ಬಂತು. ನಾನು ಆ ದಿನ ಕೋರ್ಟಿಗೆ ಹೋದಾಗ, ಯಾರ ಸಲಹೆಯಿಂದ ಅವಳ ಅತ್ತೆ, ಗಂಡ ಈ ಕೃಷ್ಣಕಾರಸ್ಥಾನ ರಚಿಸಿದ್ದರೋ ಅವರು ಅಲ್ಲಿ ಹಾಜರಿದ್ದದ್ದನ್ನು ನೋಡಿ ನನಗೆ ಆಶ್ಚರ್ಯವಾಯಿತು. ಅವರು ಅವಳ ಕಡೆಯಿಂದ ವಕಾಲತನ್ನು ಮೊದಲೇ ಹಾಜರ ಮಾಡಿದ್ದರೂ ಇಷ್ಟೆಲ್ಲಾ ನಡೆದ ಮೇಲೆ ಅವರು ಮುಂದೆ ಬರಬಹುದೆಂದು ನಾನು ಎಣಿಸಿರಲಿಲ್ಲ. ಅವರು ಹಿರಿಯರಿದ್ದುದರಿಂದ, ಖಟ್ಲೆಯನ್ನು ನಡೆಸುವ ಅಧಿಕಾರ ಅವರದೇ ಇತ್ತು. ಈ ಪೇಚಿನ ಪ್ರಸಂಗದಿಂದ ಪಾರಾಗುವದು ಒಂದು ಸಮಸ್ಯೆಯೇ ಆಯಿತು. ಕೊನೆಗೆ ಕಮಲೆಗೇನೇ ಇದನ್ನೆಲ್ಲಾ ಹೇಳಿ " ನಿನ್ನ ವಕೀಲರು ಯಾರೆಂದು ನೀನೇ ಮ್ಯಾಜಿಸ್ಟ್ರೇಟರಿಗೆ ಹೇಳು " ಎಂದೆನು.

ಅವಳನ್ನು ಕೋರ್ಟಿನ ಮುಂದೆ ನಿಲ್ಲಿಸಿದ ಕೂಡಲೇ ಅವಳು ಉಚ್ಚ ಸ್ವರದಲ್ಲಿ ಆ ಹಿರಿಯ ವಕೀಲರ ಹೆಸರು ತಕ್ಕೊಂಡು " . . . . ನನ್ನ ವಕೀಲರಲ್ಲ. ಅವರನ್ನು ನನ್ನ ಗಂಡ ನನ್ನನ್ನು ಗಲ್ಲಿಗೇರಿಸುವದಕ್ಕಾಗಿ ನೇಮಿಸಿದ್ದಾನೆ " ಎಂದು ಹೇಳಿಯೇಬಿಟ್ಟಳು. ಹಾಗೂ ನನ್ನ ವಕೀಲರು ಇವರೇ ಎಂದು ನನ್ನಕಡೆ ಬೆರಳು ತೋರಿಸಿದಳು. ಕೋರ್ಟಿನ ವಾತಾವರಣ ಗಂಭೀರವಾಯಿತು.

ಅನ್ಯಾಯಕ್ಕೆ ಹತ್ತಿದ ಈ ಮೊದಲ ಧಕ್ಕೆಯಿಂದ ಫಿರ್ಯಾದಿ ಪಕ್ಷದವರ ಧೈರ್ಯಗುಂದಿತು. ಡಾಕ್ಟರರ ಸಾಕ್ಷಿಯ ನಂತರ ಅವರು ರಚಿಸಿದ ಸುಳ್ಳಿನ ಕಟ್ಟಡವು ಸಂಪೂರ್ಣವಾಗಿ ಕುಸಿದುಬಿತ್ತು.

ಮಗುವಿನ ಮರಣೋತ್ತರ ಪರೀಕ್ಷೆ ಮಾಡಿದ ಡಾಕ್ಟರರು ಲಂಚಖೋರರಿರಲಿಲ್ಲ. ಆದರೆ, ಸರಿಯಾದ ಪರೀಕ್ಷೆ ಹಾಗೂ ಯೋಗ್ಯ ವಿಚಾರ ಮಾಡದೆ ವೈದ್ಯಕೀಯ ಪರೀಕ್ಷೆಗಾಗಿ ಶವವನ್ನು ರವಾನಿಸುವಾಗ ಪೋಲೀಸರು ಕಳಿಸಿದ ರಿಪೋರ್ಟಿನಲ್ಲಿ ನಮೂದಿಸಿದ ಮರಣದ ಕಾರಣವನ್ನೇ ತಮ್ಮ ಅಭಿಪ್ರಾಯವೆಂದು ತಮ್ಮ ರಿಪೋರ್ಟಿನಲ್ಲಿ ಬರೆದಿದ್ದರು.

ನಿಜವಾಗಿಯೂ ಮಗುವು ನೀರಿನಲ್ಲಿ ಬಿದ್ದು ಮೃತಪಟ್ಟಿರಲಿಲ್ಲ. ನಾನು ಆ ವಿಷಯದ ವೈದ್ಯಕೀಯ ಪುಸ್ತಕಗಳ ಅಭ್ಯಾಸ ಮಾಡಿಕೊಂಡೇ ಕೋರ್ಟಿಗೆ ಹೋಗಿದ್ದೆನು. ಹಾಗಾಗಿ ಅವುಗಳ ಆಧಾರದಿಂದ, ನೀರಿನಲ್ಲಿ ಬಿದ್ದು ಸತ್ತಾಗ ಕಂಡುಬರಬೇಕಾದ ಯಾವದೇ ಲಕ್ಷಣಗಳು ಈ ಮಗುವಿನ ಶರೀರದಲ್ಲಿರಲಿಲ್ಲವೆಂಬದನ್ನು ಅಡ್ಡ ಸವಾಲಿನಲ್ಲಿ ಡಾಕ್ಟರರ ಬಾಯಿಯಿಂದ ತರಿಸಿದೆನು. ಹಾಗೂ ಹೊಟ್ಟೆಗೆ ತುಳಿತದಂತಹ ಪೆಟ್ಟು ಬಿದ್ದಾಗ, ಅದು ಪ್ರಾಣಾಂತಿಕವಾದ ಸಂದರ್ಭದಲ್ಲಿ ಕೂಡ ಎಷ್ಟೋ ಸಾರೆ ಹೊರಗೆ ಯಾವದೇ ಜಖಮ ಅಥವಾ ಗಾಯ ಇರುವದಿಲ್ಲವೆಂಬುದನ್ನೂ ಡಾಕ್ಟರರು ಒಪ್ಪಿದರು.

ಅಂತೂ ಮಗು ನೀರಿನಲ್ಲಿ ಮುಳುಗಿ ಸತ್ತದ್ದೆಂಬುದು ಸುಳ್ಳೆಂದು ಸ್ಪಷ್ಟವಾಯಿತು. ಆರೋಪಿತಳ ಅಂಬೋಣವು ಇದರಿಂದ ಸಾಬೀತಾಗದಿದ್ದರೂ

ಅದು ಬಹುಮಟ್ಟಿಗೆ ಸಂಭವನೀಯವಾಯಿತು.

ಇನ್ನು ತಾಯಿ, ಮಗ, ಮಗಳು ಈ ತ್ರಿಮೂರ್ತಿಗಳಷ್ಟೇ ಉಳಿದರು. ವಕೀಲಿಯ ವ್ಯವಸಾಯದಲ್ಲಿ ನನ್ನ ಅನುಭವವೇನಂದರೆ, ಸತ್ಯ, ನ್ಯಾಯಕ್ಕಾಗಿ ಹೋರಾಡುವಾಗ ನಮ್ಮ ಶಕ್ತಿಯು ದ್ವಿಗುಣಿತವಾಗುತ್ತದೆ. ಮೈಯಲ್ಲಿ ನ್ಯಾಯದೇವತೆಯ ಸಂಚಾರವಾದಂತಾಗಿ ಎಂದೂ ಇಲ್ಲದ ಕಲ್ಪನಾತೀತ ಸ್ಫೂರ್ತಿಯು ಬರುತ್ತದೆ. ಇದನ್ನು ಮೊದಲ ಬಾರಿಗೆ ಈ ಕಮಲೆಯ ಖಟ್ಲೆಯಲ್ಲಿ ಅನುಭವಿಸಿದೆ. ಅಡ್ಡ ಸವಾಲು ಮಾಡುವದರಲ್ಲಿ ವಿಶೇಷ ಅನುಭವ, ಪ್ರಾವೀಣ್ಯ ಇಲ್ಲದಿದ್ದರೂ ಅಂದಿನ ನನ್ನ ಅಡ್ಡ ಸವಾಲು ಅತ್ಯಂತ ಪರಿಣಾಮಕಾರಿಯಾಯಿತೆಂದು ಕೇಳಿದವರು ಹೇಳಿದರು.

ಈ ಮೂವರ ಸಾಕ್ಷಿಯು ಸುಳ್ಳೆಂಬುದು ಸೂರ್ಯಪ್ರಕಾಶದಷ್ಟು ಸ್ಪಷ್ಟವಾಯಿತು. ಆರೋಪಿತಳು ಸಂಪೂರ್ಣ ನಿರಪರಾಧಿಯೆಂದು ಮ್ಯಾಜಿಸ್ಟ್ರೇಟರು ಅಭಿಪ್ರಾಯಪಟ್ಟು ಸೆಶ್ಶನ್ಸ್ ಕೋರ್ಟಿಗೆ ಸಹ ಕಳಿಸದೆ ತಾವೇ ಅವಳನ್ನು ಬಿಡುಗಡೆ ಮಾಡಿದರು.

"Spiritualise your profession" ನಿಮ್ಮ ವ್ಯವಸಾಯವನ್ನು ಅಧ್ಯಾತ್ಮೀಕರಿಸಿರಿ ಎಂದು ಗಾಂಧಿಜಿಯವರೊಮ್ಮೆ ವಕೀಲರನ್ನುದ್ದೇಶಿಸಿ ಹೇಳಿದ್ದರು. ಅದನ್ನು ಪೂರ್ಣವಾಗಿ ಆಚರಣೆಯಲ್ಲಿ ತರುವದು ವ್ಯವಹಾರ್ಯವಾಗುವದಿಲ್ಲವಾದರೂ ತ್ಯಾಗಬುದ್ಧಿಯಿಂದ ಸತ್ಯನ್ಯಾಯಕ್ಕಾಗಿ ಹೋರಾಡುವ ಸಂದರ್ಭಗಳು ವಕೀಲ ಜೀವನದಲ್ಲಿ ಒದಗುತ್ತವೆ. ತಾವಾಗಿ ಒದಗದಿದ್ದರೂ ದೊರಕಿಸುವದು ಸಾಧ್ಯವಿದೆ.

ಗತಜೀವನದ ಸಿಂಹಾವಲೋಕನ ಮಾಡುವಾಗ, ಮರುಭೂಮಿಯಲ್ಲಿನ Oasis ಗಳಂತೆ ಕಮಲೆಯ ಖಟ್ಲೆಯಂತಹ ಆತ್ಮಸಂತೃಪ್ತಿಯನ್ನು ಕೊಡುವ ಸನ್ನಿವೇಶಗಳು ನೆನಪಿನ ಪರದೆಯ ಮೇಲೆ ಬಂದು ಹೋಗುತ್ತವೆ.

---

## ಮಿತ್ರ-ಶತ್ರು

ಇಬ್ಬರು ಮಿತ್ರರು ತಮ್ಮೊಳಗಿನ ಜಗಳ ತೀರಿಸಲು ನಿಮ್ಮನ್ನು ಕೇಳಿಕೊಂಡರೆ ಒಪ್ಪಬೇಡಿರಿ ; ಅದರಿಂದ ನೀವು ಒಬ್ಬ ಮಿತ್ರನನ್ನು ಕಳೆದುಕೊಳ್ಳುವಿರಿ. ಇಬ್ಬರು ಅಪರಿಚಿತರು ತಮ್ಮೊಳಗಿನ ಜಗಳ ತೀರಿಸಲು ಕೇಳಿಕೊಂಡರೆ ಒಪ್ಪಿಕೊಳ್ಳಿರಿ : ಅದರಿಂದ ನೀವು ಒಬ್ಬ ಮಿತ್ರನನ್ನು ಸಂಪಾದಿಸುವಿರಿ.

—ವಾಲ್ ಸ್ಟ್ರೀಟ ಜರ್ನಲ್.

ನಿಮಗೆ ಶತ್ರುಗಳಿಲ್ಲದಿದ್ದರೆ ಮಿತ್ರರ ಅಭಾವವೂ ಇರುವ ಸಂಭವ ಹೆಚ್ಚು.

—ಎಲ್ಬರ್ಟ್ ಹುಬರ್ಡ್.

---

ಜೀವನಕ್ಕೊಂದು ರೂಪ ಬರುವ ವರೆಗೆ ಮನುಷ್ಯನು ಮಹತ್ವಾಕಾಂಕ್ಷಿಯೂ ಸುಖಿಯೂ ಆಗಿರುತ್ತಾನೆ. ಜೀವನಕ್ಕೊಂದು ರೂಪ ಬಂದಿತೇ ಅವನು ಒಂದೇ ಬಗೆಯ ಬಾಳನ್ನು ಬಾಳುತ್ತ ಬೇಸತ್ತು ಹೋಗುತ್ತಾನೆ.

ಆಕಳಿಕೆ : " ನನ್ನನ್ನು ರಕ್ಷಿಸಿರಿ " ಎಂಬ ಆರ್ತನಾದ !

## ಗೊತ್ತಿರುವ ಅಪರಿಚಿತರು—೨



# ಪ್ರೇಕ್ಷಕ

ಕೀರ್ತಿ ಕುರ್ತಕೋಟಿ

'All the world is a stage'—ಇಡೀ ಜಗತ್ತು ಒಂದು ನಾಟ್ಯರಂಗ ಎಂದು ಶೇಕ್ಸಪಿಯರ್ ಹೇಳಿದ್ದಾನೆ. ಈ ವಾಕ್ಯದಲ್ಲಿ stage— ರಂಗದ ಬದಲಾಗಿ auditorium—ಪ್ರೇಕ್ಷಾಗೃಹ ಎಂಬ ಶಬ್ದ ಹಾಕಬೇಕೆಂಬ ವಿಚಾರ, ಪ್ರೇಕ್ಷಾಗೃಹದಲ್ಲಿ ಕಾಲಿಟ್ಟೊಡನೆ ನನಗೆ ಹೊಳೆಯಿತು. ರಂಗಭೂಮಿಯ ಮೇಲೆ ನಾವು ಜೀವನದ ಚಿತ್ರವನ್ನು ಕಾಣುತ್ತೇವೆ. ಆದರೆ ಪ್ರೇಕ್ಷಾಗೃಹದಲ್ಲಿ ಮಾತ್ರ ಜೀವನ ತನ್ನೆಲ್ಲ ವಿಕೃತಿಗಳೊಂದಿಗೆ ಪ್ರಕಟವಾಗುತ್ತದೆ. ನಾನು ಹೋದಾಗ ನಾಟಕವಿನ್ನೂ ಪ್ರಾರಂಭವಾಗಿರಲಿಲ್ಲ. ನಾನು ಕುರ್ಚಿಯ ಮೇಲೆ ಕುಳಿತುಕೊಂಡು ಒಮ್ಮೆ ಸುತ್ತಲೂ ಸಹಜ ಕುತೂಹಲದಿಂದ ಕಣ್ಣು ಹೊರಳಿಸಿದೆ. ಅಲ್ಲಿ ಕಂಡ ನೋಟ ಅಮೋಘವಾಗಿತ್ತು.

ನಾಟಕ ಸುರುವಾಗುವದಕ್ಕಿಂತ ಮೊದಲು ಪ್ರೇಕ್ಷಕ ಇನ್ನೂ ಸಾಮಾನ್ಯ ಮನುಷ್ಯನಾಗಿಯೇ ಇರುತ್ತಾನೆ. ಬಣ್ಣ ಹಚ್ಚಿಕೊಳ್ಳದ ನಟನಂತೆ. ಉಕ್ಕೇರುವ ಸಮುದ್ರದಂತೆ ಇಡೀ ಪ್ರೇಕ್ಷಕ ಸಮುದಾಯ ಅಧೀರವಾಗಿರುತ್ತದೆ. ಯಾವಾಗ ನಾಟಕ ಸುರುವಾದೀತೋ ಎಂಬ ಕುತೂಹಲ ಅವರಲ್ಲಿ ತುಂಬಿರುತ್ತದೆ. ಈ ವಿಷಯದಲ್ಲಿ ಪ್ಲ್ಯಾಟಫಾರ್ಮಿಗೆ ನುಗ್ಗುವ ಪ್ರಯಾಣಿಕನೂ ಥಿಯೇಟರಿಗೆ ಓಡುವ ಪ್ರೇಕ್ಷಕನೂ ಸಮಾನ ಶೀಲರು.

ತಾನು ಬರುವದಕ್ಕಿಂತ ಮೊದಲು ನಾಟಕ ಪ್ರಾರಂಭವಾಗಿರಬಾರದು ಎನ್ನುವ ಪ್ರೇಕ್ಷಕ, ಬಂದ ಮೇಲೆ ಏಕೆ ತಡ ಎಂದು ಅಸಹನೆಗೊಳ್ಳಗಾಗುತ್ತಾನೆ. ಅದರಲ್ಲಿ ನಡುನಡುವೆ ಎದ್ದು

ಓಡಾಡುವವರ ಕಾಟ ಬೇರೆ. ಕುರ್ಚಿಯ ಸಾಲುಗಳ ನಡುವೆ ಹಾದು ಹೋಗುವ ಪುಣ್ಯಾತ್ಮರು ನಿಮ್ಮ ಚಪ್ಪಲಿಗಳನ್ನೇ ಉಡುಗಿಕೊಂಡು ಹೋಗುತ್ತಾರೆ. ಕುಳಿತವರು ಸುಮ್ಮನೆ ಕೂಡಲಾರರು. ಸಿಳ್ಳು ಹೊಡೆದು ಅಂಕಪಡದೆಯನ್ನು ಮೇಲಕ್ಕೆತ್ತಲು ಕೆಲವರು ಪ್ರಯತ್ನಿಸುತ್ತಾರೆ. ಹರಟೆ, ಮಾತುಕತೆ, ಕೂಗಾಟ, ವಿವಿಧ ಚಟಗಳು ಇವನ್ನೆಲ್ಲ ಹತ್ತು ನಿಮಿಷಗಳಲ್ಲಿಯೇ ಮುಗಿಸಲು ಹಟತೊಟ್ಟಿರುತ್ತಾರೆ. ಇದನ್ನೆಲ್ಲ ನೋಡಿದಾಗ ಇದೊಂದು ಮಾನವ ವರ್ಗದ ಒಳ್ಳೆಯ ಪ್ರದರ್ಶನ ಎಂದು ನನಗನಿಸಿದೆ.

ಇನ್ನು ನಾಟಕ ಪ್ರಾರಂಭವಾದ ಮೇಲೆ ಪ್ರೇಕ್ಷಕ ಪ್ರೇಕ್ಷಕನಾಗುತ್ತಾನೆ. ಅವನಲ್ಲಿ ಪ್ರೇಕ್ಷಕಭಾವ ಜಾಗೃತವಾಗುತ್ತದೆ. ಈಗ ಅವನ ಲಕ್ಷ್ಯವೆಲ್ಲ ನಾಟಕದ ಕಡೆಗೆ. ಆದರೆ ಇದನ್ನೂ ಮೀರಿದ ಕೆಲವು ಮನುಷ್ಯರಿದ್ದಾರೆ. ನನ್ನ ಹತ್ತರ ಇದ್ದ ಕುರ್ಚಿಯ ಮೇಲೆ ಒಬ್ಬ ಬಂದು ಕುಳಿತ. ಕೆಲಹೊತ್ತಿನ ಮೇಲೆ ಇನ್ನೊಬ್ಬ ಬಂದು ಅದು ತನ್ನ ಸ್ಥಾನ ಎಂದು ಜಗಳ ಹೂಡಿದ. ಇಬ್ಬರೂ ಸರಿಯುವಂತಿರಲಿಲ್ಲ. ಕೊನೆಗೆ ಅದನ್ನು ಬಗೆಹರಿಸಲು ಕಂಪನಿಯ ಮ್ಯಾನೇಜರ ಬರಬೇಕಾಯಿತು.

ಹೆಂಡತಿಯ ಎದುರಿಗೆ ಹೇಗೋ ಹಾಗೆ ನಾಟಕಗೃಹದಲ್ಲಿಯೂ ಮನುಷ್ಯ ಅಪಮಾನವನ್ನು ಸಹಿಸಲಾರ. ಅದು ನಾಟಕಗೃಹದ ಸ್ಥಾನಮಹಾತ್ಮೆ ಎಂದು ನನಗನಿಸಿದೆ. ಇಂಗ್ಲಂಡದ ಪ್ರಖ್ಯಾತ ನಗೆಗಾರನಾದ ಡಾಕ್ಟರ ಜಾನ್‌ಸನ್ನನೇ ತನ್ನ ಸ್ಥಾನವನ್ನಾಕ್ರಮಿಸಿದ್ದ ಒಬ್ಬ ಪ್ರೇಕ್ಷಕನನ್ನು ಕುತ್ತಿಗೆ ಹಿಡಿದು ದಬ್ಬಿದ್ದನಂತೆ. ಅಂದಮೇಲೆ ಉಳಿದವರ ಪಾಡೇನು ?

ಇನ್ನು ಕೆಲವರಿಗೆ ನಾಟಕ ನಡೆದಿರುವಾಗಲೂ ಮಾತನಾಡುವ ಚಟ ಮುಗಿದಿರುವದಿಲ್ಲ. ನನ್ನ ಹಿಂದೆ ಇಬ್ಬರು ಅಂಥ ಹರಟೆಯಲ್ಲಿ ಮಗ್ನರಾಗಿದ್ದರು. ಅವರು ಬೇರೆ ಊರಿಂದ ನಾಟಕ ನೋಡಲಿಕ್ಕೆಂದೇ ಬಂದವರು. ಆದರೇನು, ಅವರು ಹತ್ತಾರು ಧಾರಣೆ, ಪೇಟೆಯಲ್ಲಿಯ ಅನುಭವ, ಯಾರನ್ನೋ ಭೆಟ್ಟಿಯಾಗಲು ಹೋದಾಗ ಅವರು ಸಿಗದೆ ಇದ್ದದ್ದು, ಯಾರೋ ಹಡೆದದ್ದು, ಮತ್ತಾರೋ ಸತ್ತದ್ದು ಇವುಗಳ ಬಗ್ಗೆಯೇ ಮಾತು ನಡೆಸಿದ್ದರು. ನಾನು ಪ್ರಯತ್ನಪೂರ್ವಕವಾಗಿ ನಾಟಕ ನೋಡುತ್ತಿದ್ದರೂ ನನ್ನ ಏಕಾಗ್ರತೆಗೆ ಆಗಾಗ ಭಂಗ ಬರುತ್ತಿತ್ತು. ಇಷ್ಟರಲ್ಲಿ ಒಂದು ಸಂಗತಿ ನಡೆಯಿತು. ನನ್ನ ಮುಂದಿನ ಸಾಲಿನಲ್ಲಿ ಹೆಡಿಗೆ ರುಮಾಲಿನ ಒಬ್ಬ ಸದ್ಗೃಹಸ್ಥ ಎತ್ತರವಾಗಿ ಕುಳಿತಿದ್ದ. ನನ್ನ ಹಿಂದೆ ಹರಟೆ ಹೊಡೆಯುತ್ತಿದ್ದವರ ಕಣ್ಣಿಗೆ ಅದು ಬಿತ್ತು. ಕೂಡಲೆ ಆ ಗೃಹಸ್ಥನನ್ನು ಒದರಿ, ಅವನ ತಲೆಯ ಮೇಲಿನ ರುಮಾಲು ತೆಗೆಸಿ ತಾವು ಮತ್ತೆ ಹರಟೆಯಲ್ಲಿ ಮಗ್ನರಾದರು.

ಇನ್ನು ನಾಟಕದ ವಿಮರ್ಶೆ. ಪ್ರೇಕ್ಷಕರ ರಸಿಕತೆಯನ್ನು ನಾಟಕ ನಡೆದಿರುವಾಗಲೇ ಅನುಭವಿಸಬೇಕು. ಸಾಮಾನ್ಯ ಪ್ರೇಕ್ಷಕ, ವಿಮರ್ಶಕನಂತೆ ನಾಟಕ ಮುಗಿದಮೇಲೆ ಯಾರೂ ಇಲ್ಲದಾಗ ವಿಮರ್ಶೆಯನ್ನು ಬರೆಯುವಂಥ ಹೇಡಿಯಲ್ಲ. ಅವನ ವಿಮರ್ಶೆ ತತ್ಕಾಲೀನ ಸ್ಫೂರ್ತಿಯಿಂದಲೇ ಚಿಮ್ಮಿ ಬರುವಂತಹದು. ತಾನು ಕೊಟ್ಟ ಹಣ ವ್ಯರ್ಥವಾಗಿ ಹೋಗಬಾರದೆಂಬುದೇ ಅವನ ಆಶಯ. ಅಂಗಡಿಗೆ ಸಾಮಾನು ಕೊಳ್ಳಲು ಹೋದಾಗ ಅಂಗಡಿಕಾರನ ಎದುರಿಗೇ ಇದು ಒಳ್ಳೆಯದು ಕೆಟ್ಟದು ಎಂದು ಹೇಳುವದಿಲ್ಲವೇ? ಅಂದಮೇಲೆ ಇಲ್ಲೇಕೆ ಸುಮ್ಮನಿರಬೇಕು? ಹೌದು, ಮೆಚ್ಚಿಗೆಯಾದರೆ 'ಒನ್ಸಮೋರ' ಹೇಳಿ ಮುಂದುವರಿಸಬಲ್ಲ; ಮೆಚ್ಚಿಗೆಯಾಗದಿದ್ದರೆ ಅಷ್ಟೇ ಸಥಿಯಿಂದ ಹಾಡುವವನನ್ನು ಒಳಗೆ ಕಳಿಸಲೂ ಬಲ್ಲ. ಕೆಲವು ವೇಳೆಯಲ್ಲಂತೂ ನಟನಿಗಿಂತ ಪ್ರೇಕ್ಷಕನಿಗೇ ಭಾವಾವೇಶ ಹೆಚ್ಚು. ಹರಿಶ್ಚಂದ್ರನ ಗೋಳನ್ನು ನೋಡಿ ತಡೆಯಲಾರದೆ ಒಬ್ಬ ಪ್ರೇಕ್ಷಕ ರಂಗದ ಮೇಲೆ ಎದ್ದು ಹೋಗಿ ವಿಶ್ವಾಮಿತ್ರನನ್ನೇ ಹಿಡಿದು ಹೊಡೆದನಂತೆ. ಗಾಯಕನ ಜೊತೆಗೇ ಹಾಡುವ ಮಹಾನುಭಾವರಿದ್ದಾರೆ; ನಟನ ಮಾತಿಗೆ ಆಗಿಂದಾಗ ಪ್ರತ್ಯುತ್ತರ ಕೊಟ್ಟು, ಇನ್ನೊಬ್ಬ ನಟನಿಗೆ ಸಹಾಯ ಮಾಡುವ ಪ್ರಾಮ್ಪ್ಟರರಿದ್ದಾರೆ.

ಆದರೆ ಪ್ರೇಕ್ಷಕನ ವಿಮರ್ಶೆ ಕೇವಲ ಭಾವ

ಪರವಶತೆಯ ಫಲ ಎಂದು ತಿಳಿಯಬಾರದು. ನಾಟಕಗೃಹದಲ್ಲಿ ದೀಪಗಳು ಆರಿ, ಧೂಪದ ವಾಸನೆ ಮೂಗಿಗೆ ಬಡಿದ ಕೂಡಲೆ ಪ್ರೇಕ್ಷಕನ ಎಲ್ಲ ಜ್ಞಾನೇಂದ್ರಿಯಗಳೂ ಜಾಗೃತವಾಗುತ್ತವೆ. ಅವನ ಕಣ್ಣಿಗೆ ಕಾಣದ ದೋಷವಿಲ್ಲ; ಕಿವಿಗೆ ಕೇಳಿಸದ ಅಪಶ್ರುತಿಯಿಲ್ಲ. ರಾಜನ ಬದಿಯಲ್ಲಿ ಖಡ್ಗವಿರದಿದ್ದರೆ ಅವನೇ ಎಚ್ಚರಿಕೆ ಕೊಡುತ್ತಾನೆ. ಸಾಮಾಜಿಕ ನಾಟಕಗಳಲ್ಲಿ ಚಹ ಕುಡಿಯುವ ದೃಶ್ಯ ನಡೆದಾಗ, ಕಪ್ಪಿನಲ್ಲಿ ಚಹವಿಲ್ಲದ್ದು ಅವನಿಗೇ ಮೊದಲು ತಿಳಿಯುತ್ತದೆ. ಪ್ರಾಮ್ಟರನ ಮಾತು ನಟನಿಗಿಂತ ಮೊದಲೇ ಅವನಿಗೆ ಕೇಳಿಸುತ್ತದೆ. ದೃಶ್ಯ ಮುಗಿದು ಪಡದೆ ಬೀಳಲು ತಡವಾದರೆ ಮ್ಯಾನೇಜರನಿಗಿಂತ ಪ್ರೇಕ್ಷಕನೇ ಹೆಚ್ಚು ಅಸಹನೆಗೆ ಒಳಗಾಗುತ್ತಾನೆ. ಗ್ರೀನ ರೂಮಿನಲ್ಲಿ ನಡೆದ ಗೊಂದಲವನ್ನು, ಮೂಲೆಯಲ್ಲಿ ಕುಳಿತ ಪ್ರೇಕ್ಷಕನಿಗಿಂತ ಹೆಚ್ಚಾಗಿ ಯಾರು ನೋಡಬಲ್ಲರು? ಕಂಪನಿಯ ಯಾವ ವೈಭವವೂ ನಟನ ಯಾವ ಕೌಶಲ್ಯವೂ ಅವನನ್ನು ಮೋಸಗೊಳಿಸಲಾರದು. (ಮೇಲೆ ಹೇಳಿದ, ನಟನನ್ನು ಹೊಡೆದ ಪ್ರೇಕ್ಷಕನೊಬ್ಬನನ್ನು ಬಿಟ್ಟು; ಅಂಥವರು ಬಹಳ ವಿರಳ ಎಂದು ಬೇರೆ ಹೇಳಬೇಕಾಗಿಲ್ಲ). ನಾಟಕ ಅವನಿಗೆ ಒಂದು ಕತೆಯಲ್ಲ, ಕಾವ್ಯವಲ್ಲ, ಕಲೆಯ ಯಾವ ರೂಪವೂ ಅಲ್ಲ; ಅದೊಂದು ಮೋಜಿನಾಟ. ಶಕುಂತಲೆಯ ಪಾತ್ರಕ್ಕಿಂತ, ಅವಳು ಯಾವ ಊರಿನ 'ಗರತಿ' ಎಂಬುದನ್ನು ಅವನು ಮೊದಲು ತಿಳಿದುಕೊಳ್ಳಬೇಕು. ಪಾತ್ರವರ್ಗದಲ್ಲಿ ಕಂಪನಿಯ ಮಾಲಕನಾರು ಎಂಬುದನ್ನು ಅವನು ಪತ್ತೆಹಚ್ಚಬೇಕು. ನಟರು ಯಾವ ಯಾವ ಕಂಪನಿಗಳಲ್ಲಿ ದುಡಿದು ಬಂದವರು, ಮುಖ್ಯ ಪಾತ್ರ ವಹಿಸಿದ ನಟಿಗೆ ಎಷ್ಟು ಹಣ ಹೋಗಿರುತ್ತದೆ ಎಂಬ ಅಂದಾಜಿನಲ್ಲಿಯೇ ಅವನ ಹೊತ್ತು ಹೋಗುತ್ತದೆ. ಇವೇ ಅವನ ನಾಟ್ಯವಿಮರ್ಶೆಯ ತ್ರಿಕಾಲಾಬಾಧಿತ ನಿಯಮಗಳು.

ನಾನು ಎಷ್ಟೋ ಸಾರೆ ನಾಟಕಗೃಹದಲ್ಲಿ ಇಂಥ ಮೂಕ ಸಂಕಟವನ್ನು ಅನುಭವಿಸಿದ್ದೇನೆ. ನಿಮ್ಮ ಜೊತೆಗಿರುವ ಪ್ರೇಕ್ಷಕ ನಿಮಗೆ ಹಿತಕರನಾಗಿರಬೇಕಾದರೆ ಪೂರ್ವಜನ್ಮದ ಪುಣ್ಯ ಬೇಕು. ಇಲ್ಲದಿದ್ದರೆ ಆ ಗತಿ ದೇವರೇ ಬಲ್ಲ. ಒಮ್ಮೆ ನನ್ನ ಜೊತೆಗಿದ್ದ ಪ್ರೇಕ್ಷಕ ಆ ನಾಟಕವನ್ನು ಮೊದಲೊಮ್ಮೆ ನೋಡಿದವನಾದ್ದರಿಂದ, ನನಗೆ ಅದರ ಕತೆಯನ್ನೆಲ್ಲ ಹೇಳಲು ಪ್ರಾರಂಭಿಸಿದ. ಮತ್ತೊಮ್ಮೆ ಮತ್ತೊಬ್ಬ ನಾಟಕದ ಅರ್ಥವನ್ನು ಕೇಳಲು ಸುರು ಮಾಡಿದ. ಎರಡನೆಯವನು ಕೊಟ್ಟ ಶಿಕ್ಷೆ ಹೆಚ್ಚು ಅಸಹನೀಯವಾಗಿತ್ತು. ಆ ನಟ ಯಾರು, ಅವನೇನು ಮಾತಾಡಿದ, ಪ್ರೇಕ್ಷಕರು ಯಾಕೆ ನಕ್ಕರು, ಒನ್ಸಮೋರ ಅಂದರೇನು, ನಾಟಕ ಒಳ್ಳೆಯದಾಯಿತೆ, ಹೀಗೆ ಸಾವಿರಾರು ಪ್ರಶ್ನೆಗಳನ್ನು ಕೇಳಿ ಉತ್ತರ ಪಡೆದುಕೊಂಡ.

ಇಷ್ಟೆಲ್ಲ ಆದರೂ ಇಂಥ ಪ್ರೇಕ್ಷಕರ ನಡುವೆ ಕುಳಿತು ನಾಟಕ ನೋಡುವದರಲ್ಲಿ ಏನೋ ಒಂದು ಸುಖವಿದೆ. ನಾವು ಕೇವಲ ನಾಟಕ ನೋಡಲಿಕ್ಕೆಂದೇ ಬರುತ್ತೇವೆ ಎಂದು ನನಗನಿಸಲಿಲ್ಲ. ಹಾಗಿದ್ದರೆ ಒಬ್ಬನೇ ಕುಳಿತು ನಾಟಕ ನೋಡುವದಕ್ಕಾದೀತೆ? ಎಂದಿಗೂ ಇಲ್ಲ. ಮನುಷ್ಯ ಸಂಘಜೀವಿ ಎಂಬ ಸತ್ಯ ಅಡಿಗಡಿಗೆ ಇಂಥಲ್ಲಿ ಸಿದ್ಧವಾಗುತ್ತದೆ. ಪ್ರೇಕ್ಷಕರಲ್ಲಿ ನೂರೆಂಟು ಸ್ವಭಾವದ, ಭಿನ್ನರುಚಿಗಳ, ನಾನಾ ಸಂಸ್ಕೃತಿಯ ಜನರಿರುತ್ತಾರೆ. ಆದರೆ ನಾಟಕದಲ್ಲಿಯ ತನ್ಮಯತೆಯ ಮೂಲಕವಾಗಿ ಎಲ್ಲರಲ್ಲಿಯೂ ಒಂದು ಸಮಾನತೆ ಮೂಡಿರುತ್ತದೆ. ಇಂಥ ಹೊತ್ತಿನಲ್ಲಿ ನಮ್ಮ ಹತ್ತಿರ ನಮ್ಮ ಶತ್ರುವೇ ಬಂದು ಕುಳಿತಿದ್ದರೂ ನಾವು ಸಹಜವಾಗಿ ಅವನ ಹೆಗಲ ಮೇಲೆ ಕೈಹಾಕಬಹುದು. ಇದು ಒಂದು ಗುಂಗು, ಮಾಯೆ ಅಥವಾ ಹುಚ್ಚು ಎನ್ನಬಹುದು. ಆದರೆ ಇಂಥಲ್ಲಿಯೇ ಮಾನವತೆಯ ದರ್ಶನವಾಗಿದೆ ನನಗೆ. ಎಲ್ಲರಲ್ಲಿಯೂ ಮಿಡಿಯುತ್ತಿರುವ ಸಹಾನುಭೂತಿಗೆ ಬೆಲೆ ಹೆಚ್ಚು. ಎಂಥ ಅಪರಿಚಿತನಲ್ಲಿಯೂ ಪರಿಚಯದ ಒಂದು ಎಳೆ ನಮಗೆ ಸಿಗುತ್ತದೆ. ನಾಟಕ ಹಾಗೂ ಪ್ರೇಕ್ಷಕ ಇವರ ಸಂಬಂಧವನ್ನು ನೆನಸಿಕೊಂಡಾಗ, ನನ್ನ ಕಣ್ಣೆದುರು ದೀಪಕ್ಕೆ ಮುತ್ತಿಗೆ ಹಾಕಿದ ದೀಪದ ಹುಳಗಳ ನೆನಪಾಗುತ್ತದೆ.

# ರಾಜಾ ಕುಂವರ ಸಿಂಹನ ಅಮರ ಸಾಹಸ

ರಾಜಾ ಕುಂವರ ಸಿಂಹನು ತನ್ನ ಸೇನೆಯೊಂದಿಗೆ ಬಾಲಿಯಾದ ಬಳಿ ಆನೆಗಳನ್ನೇರಿ ಗಂಗಾನದಿಯನ್ನು ದಾಟಿ ಪಾರಾಗಿ ಹೋಗುವನೆಂಬ ವದಂತಿ ಹಬ್ಬಿತ್ತು. ಇಂಗ್ಲಿಷ್ ಸೇನಾಪತಿ ಡಗ್ಲಸನು ಕುಂವರ ಸಿಂಹನ ಈ ಹಂಚಿಕೆಯನ್ನು ವಿಫಲಗೊಳಿಸಲೆಂದು ಬಲಿಯಾದ ಬಳಿ ತನ್ನ ಸೈನ್ಯವನ್ನು ಸಂಗ್ರಹಿಸಿಟ್ಟಿದ್ದನು. ಆದರೆ ಧೂರ್ತನಾದ ರಾಜಾ ಕುಂವರ ಸಿಂಹನು ಮಾಡಿದ್ದ ಯೋಜನೆ ಜೇರೆಯೆ ಆಗಿತ್ತು. ಡಗ್ಲಸನು ಬಾಲಿಯಾದಲ್ಲಿ ಕಾಯುತ್ತಿದ್ದಾಗ ಕುಂವರ ಸಿಂಹನು ಕೆಳಗಡೆ ಏಳು ಮೈಲು ದೂರದಲ್ಲಿದ್ದ ಶಿವಪುರ ಘಾಟದಲ್ಲಿ ದೋಣಿಗಳನ್ನೇರಿ ಪಾರಾಗುತ್ತಿದ್ದನು.

ಸೈನ್ಯವೆಲ್ಲ ನದಿಯನ್ನು ದಾಟಿತ್ತು. ಅನಂತರ ಕುಂವರ ಸಿಂಹನು ಒಂದು ದೋಣಿಯಲ್ಲಿ ಕುಳಿತು ಎದುರು ತೀರವನ್ನು ಇನ್ನೇನು ಮುಟ್ಟುವದರಲ್ಲಿದ್ದನು. ಆಗ ಅವನ ಹಂಚಿಕೆಯ ಸುಳಿವು ಹತ್ತಿದ ಡಗ್ಲಸನ ಸೇನೆ ಅಲ್ಲಿಗೆ ಧಾವಿಸಿ ಬಂತು. ದಡದಿಂದ ಗುಂಡುಗಳು ಹಾರಲಾರಂಭಿಸಿದವು. ಒಂದು ಗುಂಡು ಬಂದು ಕುಂವರ ಸಿಂಹನ ಬಲ ಮುಂಗೈಗೆ ಬಡಿಯಿತು. ೮೧ ವಯಸ್ಸಿನ ವೃದ್ಧ ಕುಂವರ ಸಿಂಹ ನೋಡಿದನು; ಹಾಗೇ ಬಿಟ್ಟರೆ ಗುಂಡಿನ ವಿಷ ದೇಹದಲ್ಲೆಲ್ಲ ವ್ಯಾಪಿಸೀತು ಎಂದು ಅವನಿಗೆ ತೋರಿತು. ಅದನ್ನು ತಪ್ಪಿಸಲು ಅವನು ತನ್ನ ಎಡಗೈಯಲ್ಲಿ ಖಡ್ಗ ಹಿಡಿದು ಬಲ ಮುಂಗೈಯನ್ನು ಕಡಿದು ಗಂಗೆಯಲ್ಲಿ ಚಲ್ಲಿಕೊಟ್ಟು ಗಾಯದ ಮೇಲೆ ಬಟ್ಟೆ ಸುತ್ತಿ ಗಂಗಾನದಿಯನ್ನು ದಾಟಿ ಪಾರಾಗಿ ಹೋದನು.

ರಾಜಾ ಕುಂವರ ಸಿಂಹನ ಸಾಹಸಪೂರ್ಣ, ಅಪ್ರತಿಮ ಧೈರ್ಯ-ಶೌರ್ಯಗಳ ಜೀವನದಲ್ಲಿ ಇದೊಂದು ಅಪೂರ್ವ ಘಟನೆ.

ಬಿಹಾರದ ಶಾಹಬಾದ ಜಿಲ್ಹೆಯಲ್ಲಿ ಜಗದೀಶಪುರವು ಒಂದು ಚಿಕ್ಕ ಹಳೆಯ ರಜಪೂತ ರಾಜ್ಯವಾಗಿತ್ತು. ಮೊಗಲ ಚಕ್ರವರ್ತಿ ಶಾಹಜಹಾನನ ಕಾಲದಲ್ಲಿ ಜಗದೀಶಪುರದ ಶಾಸಕನಿಗೆ 'ರಾಜಾ' ಪದವಿ ದೊರೆತಿತ್ತು. ಡಾಲಹೌಸಿಯ ಗೃಧ್ರ ದೃಷ್ಟಿ ಈ ರಾಜ್ಯದ ಮೇಲೆಯೂ ಬಿದ್ದು ಅವನು ಅದನ್ನು ನುಂಗುವ ಹಂಚಿಕೆ ಹಾಕಿದನು. ಬಿಹಾರದಲ್ಲಿ ೧೮೫೭ ರ 'ಬಂಡಾಯದ ಬಗ್ಗೆ ವ್ಯಾಪಕವಾದ, ಸುಯೋಜಿತವಾದ ಸಿದ್ಧತೆಯೇನೂ ನಡೆದಿರಲಿಲ್ಲ. ಆದರೂ ಪಾಟಣಾ ನಗರವು ಈ ಈ ಬಂಡಾಯದ ದೊಡ್ಡ ಕೇಂದ್ರವಾಗಿತ್ತು. ಬಿಹಾರದ ಇತರ ಕೆಲವೆಡೆಗಳಲ್ಲೂ ಸ್ವಾತಂತ್ರ್ಯ ಸಂಗ್ರಾಮದ ಪ್ರಯತ್ನ ನಡೆದಿತ್ತು. ಇಂಗ್ಲೀಷರು ಈ ಅಂದಾಜಿನಿಂದಲೇ ಮುಂಜಾಗ್ರತೆ ಎಂದು ಅಲ್ಲಲ್ಲಿ ಶೀಖ ಸೈನ್ಯವನ್ನು ಸಂಗ್ರಹಿಸಿಟ್ಟಿದ್ದರು. ಪಾಟಣಾ, ಗಯಾ ಮೊದಲಾದೆಡೆಗಳಲ್ಲಿ ಶೀಖ ಸೈನಿಕರು ಕ್ರಾಂತಿಕಾರರನ್ನು ಚನ್ನಾಗಿ ಹಣಿದರು. ಮುಂದೆ ರಾಜಾ ಕುಂವರ ಸಿಂಹನ ರಾಜಧಾನಿ ಜಗದೀಶಪುರವು ಕ್ರಾಂತಿಕಾರರ ಪ್ರಧಾನ ಕೇಂದ್ರವಾಯಿತು.

ಜಗದೀಶಪುರದ ಸುತ್ತುಮುತ್ತಲಿನ ಪ್ರದೇಶ

ದಲ್ಲಿ ರಾಜಾ ಕುಂವರಸಿಂಹ ಅತ್ಯಂತ ಜನಪ್ರಿಯನಾಗಿದ್ದನು. ೧೮೫೭ ರ ಘಟನೆಗಳಲ್ಲಿ ಆತ ಪ್ರಧಾನ ಪಾತ್ರ ವಹಿಸಿ ತನ್ನ ಅಪೂರ್ವ ದೇಶಭಕ್ತಿಯನ್ನೂ ಸ್ವಾತಂತ್ರ್ಯಪ್ರಿಯತೆಯನ್ನೂ ವ್ಯಕ್ತಪಡಿಸಿದ್ದನು. ದಾನಾಪುರದ ಸೈನ್ಯ ಜಗದೀಶಪುರಕ್ಕೆ ಬಂದಾಗ ತುಸುವೂ ಸಂಕೋಚಪಡದೆ ೮೦-೮೧ ವರ್ಷದ ವೃದ್ಧ ರಾಜಾ ಕುಂವರ ರನ್ನೂ ತೆಗೆದುಕೊಂಡು ಬಂದನು. ರಾಜಾ ಕುಂವರ ಸಿಂಹನು ಗಿಡಗಳನ್ನೇರಿ ಕುಳಿತು ಗುಂಡು ಹಾರಿಸಲು ತನ್ನ ಸೈನಿಕರಿಗೆ ಆಜ್ಞಾಪಿಸಿದನು. ಪಾರುಪತ್ಯಕ್ಕಾಗಿ ಬಂದಿದ್ದ ೪೧೫ ಜನರಲ್ಲಿ ಕೇವಲ ೫೦ ಜನ ಮಾತ್ರ ಬದುಕಿ ಉಳಿದರು. ಸೇನಾಪತಿ ಡನಬರನೂ ಸತ್ತನು. ಬದುಕಿದ್ದ ಜನರು ದಾನಾಪುರಕ್ಕೆ ಓಡಿಹೋದರು.



ಸಿಂಹನು ಅದರ ನೇತೃತ್ವವನ್ನು ವಹಿಸಿದ್ದನು.

ಕುಂವರ ಸಿಂಹನು ಮೊದಲು ಆರಾವನ್ನು ಮುತ್ತಿ ಇಂಗ್ಲೀಷರಿಂದ ಅದನ್ನು ಕೈವಶಮಾಡಿಕೊಂಡು ಅಲ್ಲಿಯ ಖಜಾನೆಯನ್ನು ಸುಲಿದು ಸರಕಾರಿ ಕಾಗದಪತ್ರಗಳನ್ನೆಲ್ಲ ನಾಶ ಮಾಡಿದನು. ರಾಜಾ ಕುಂವರ ಸಿಂಹನ ಸೈನ್ಯದ ಪಾರುಪತ್ಯಕ್ಕಾಗಿ ದಾನಾಪುರದಿಂದ ಸೇನಾಪತಿ ಡನಬರನು ೩೦೦ ಇಂಗ್ಲಿಷ ಸೈನಿಕರನ್ನೂ ೧೦೦ ಶೀಖ ಸೈನಿಕ

ಅನಂತರ ಇಂಗ್ಲಿಷರು ಮೇಜರ ಆಯರನನ್ನು ದೊಡ್ಡ ತೋಫಖಾನೆ ಮತ್ತು ಸೇನೆಯೊಂದಿಗೆ ರಾಜಾ ಕುಂವರ ಸಿಂಹನ ಪಾರುಪತ್ಯಕ್ಕಾಗಿ ಕಳಿಸಿದರು. ಆರಾ ಕೋಟೆ ಮತ್ತು ನಗರ ಪುನಃ ಇಂಗ್ಲೀಷರ ಕೈಸೇರಿತು. ರಾಜಾ ಕುಂವರ ಸಿಂಹನು ಜಗದೀಶಪುರಕ್ಕೆ ಹಿಂತಿರುಗಿದನು. ಆಗಸ್ಟ ೧೪ರಂದು ಆತ ತನ್ನ ರಾಜ್ಯವನ್ನು ಬಿಟ್ಟು ಹೋಗಬೇಕಾಗಿ ಬಂತು. ಬೇರೆ ಸ್ಥಳದಿಂದ

ಯುದ್ಧ ಸಾಗಿಸುವ ನಿಶ್ಚಯವನ್ನು ಆತ ಮಾಡಿದನು. ಆತನಲ್ಲಿ ಆಗ ೧,೨೦೦ ಸೈನಿಕರಿದ್ದರು.

ಆಗ ಅವಧದಲ್ಲೂ ಕ್ರಾಂತಿಯ ಬೇಗೆ ಹಬ್ಬಿತ್ತು. ಅಜಮಗಡದಿಂದ ಗುರ್ಖಾ ಸೈನ್ಯವೊಂದನ್ನು ಅವಧಕ್ಕೆ ಕಳಿಸುವ ಯತ್ನದಲ್ಲಿ ಇಂಗ್ಲಿಷರಿದ್ದರು. ರಸ್ತೆಯಲ್ಲಿಯೆ ಈ ಸೈನ್ಯವನ್ನು ತಡೆಯಲು ರಾಜಾ ಕುಂವರ ಸಿಂಹನು ನಿರ್ಧರಿಸಿ ಅತರೋಲಿಯದಲ್ಲಿ ಠಾಣೆಹೂಡಿದನು. ರಾಜಾ ಕುಂವರಸಿಂಹನನ್ನೆದುರಿಸಲು ಮಿಲಮನ್ನನ ನೇತೃತ್ವದಲ್ಲಿ ಇಂಗ್ಲಿಷರು ಸೇನೆಯನ್ನೂ ತೋಫಖಾನೆಯನ್ನೂ ಕಳಿಸಿದರು. ಪುಮಾಸಾನ ಕಾಳಗದ ನಂತರ ರಾಜಾ ಕುಂವರ ಸಿಂಹನು ಹಿಂದೆ ಸರಿದು ಪ್ರತಿದಾಳಿಯ ಸಿದ್ಧತೆ ನಡೆಸಿದನು. ಕ್ರಾಂತಿಕಾರರನ್ನು ಮಣಿಸಿದೆ ಎಂದು ಭಾವಿಸಿ ಮಿಲಮನ್ನನು ಒಂದು ತೋಟದಲ್ಲಿ ಊಟ ತೀರಿಸಿ ವಿಶ್ರಾಂತಿ ಪಡೆಯುತ್ತಿದ್ದಾಗ ರಾಜಾ ಕುಂವರ ಸಿಂಹನು ಮಿಂಚಿನಂತೆ ಅವನ ಮೇಲೆ ಎರಗಿದನು. ಮಿಲಮನ್ನನು ಜೀವವುಳಿದರೆ ಸಾಕೆಂದು ಅಜಮಗಡಕ್ಕೆ ಪಲಾಯನ ಹೇಳಿದನು. ಅವನ ಸೈನ್ಯ ಚಲ್ಲಾಪಿಲ್ಲಿಯಾಗಿ ಹೋಯಿತು. ವಿಜಯದ ಜೊತೆಗೆ ಬಹಳಷ್ಟು ಯುದ್ಧ ಸಾಮಗ್ರಿಯೂ ರಾಜಾ ಕುಂವರ ಸಿಂಹನಿಗೆ ಸಿಕ್ಕಿತು.

ಇಂಗ್ಲಿಷರು ಕರ್ನಲ್ ಡೇಮ್ಸನ ಸೇನಾಪತಿತ್ವದಲ್ಲಿ ಬಹಳಷ್ಟು ಸೈನ್ಯವನ್ನು ಅಜಮಗಡಕ್ಕೆ ಕಳಿಸಿದರು. ಅಜಮಗಡದ ಸಮೀಪದಲ್ಲಿಯೆ ಕುಂವರ ಸಿಂಹನು ಈ ಸೈನ್ಯವನ್ನೆದುರಿಸಿದನು. ವಿಜಯಶ್ರೀ ಈ ಸಲವೂ ಅವನ ಕೊರಳಿಗೆ ಮಾಲೆ ಹಾಕಿದಳು. ಅಜಮಗಡದಲ್ಲಿದ್ದ ಇಂಗ್ಲಿಷ ಸೈನ್ಯ ಕೋಟೆಯಲ್ಲಿ ಆಶ್ರಯ ಪಡೆಯಿತು.

ಕೋಟೆಗೆ ಮುತ್ತಿಗೆ ಹಾಕಲು ಕೆಲ ಸೈನ್ಯವನ್ನಿಟ್ಟು ಕುಂವರಸಿಂಹನು ಬನಾರಸದತ್ತ ಹೊರಟನು. ಅವನ ಈ ಸಾಹಸವನ್ನು ಕಂಡು ಅಲಹಾಬಾದದಲ್ಲಿದ್ದ ಲಾರ್ಡ ಕ್ಯಾನಿಂಗ ಗಾಬರಿಯಾದನು. ಬನಾರಸದ ರಕ್ಷಣೆಗಾಗಿ ಸೇನಾಪತಿ ಮಾರ್ಕಕರನನ್ನು ದೊಡ್ಡದೊಂದು ಸೈನ್ಯದೊಂದಿಗೆ ಕಳಿಸಲಾಯಿತು. ಎಪ್ರಿಲ್ ೭ರಂದು ಕ್ರಾಂತಿಕಾರರ ಮತ್ತು ಇಂಗ್ಲಿಷರ ನಡುವೆ ಕಾಳಗವಾಯಿತು.

ವೃದ್ಧ ಕುಂವರ ಸಿಂಹನು ಬಿಳಿ ಕುದುರೆಯ ಮೇಲೆ ಕುಳಿತು ಸಮರಾಂಗಣದಲ್ಲಿ ತನ್ನ ಸೈನಿಕರನ್ನು ಹುರಿದುಂಬಿಸುತ್ತಿದ್ದನು. ಲಾರ್ಡ ಮಾರ್ಕಕರ ಕೂಡ ಸೋತು ಜೀವವುಳಿಸಿಕೊಳ್ಳಲು ಅಜಮುಗಡಕ್ಕೆ ಓಡಿಹೋದನು. ಕುಂವರ ಸಿಂಹನು ಬನಾರಸದತ್ತ ಹೋಗುವದನ್ನು ಬಿಟ್ಟುಕೊಟ್ಟು ಅಜಮಗಡಕ್ಕೆ ಹೋಗಿ ಮುತ್ತಿಗೆ ಹಾಕಿದನು. ಕುಂವರ ಸಿಂಹನು ಹೀಗೆ ಮಾಡಿದ್ದೇ ಬಹು ದೊಡ್ಡ ಪ್ರಮಾದವಾಯಿತು ಎಂದು ಕೆಲ ಇತಿಹಾಸಕಾರರ ಅಭಿಪ್ರಾಯವಿದೆ. ಬನಾರಸವನ್ನುಳಿಸಲು ಮಾರ್ಕಕರನು ಈ ಗತ್ತು ಹೂಡಿದನು; ಕುಂವರಸಿಂಹನು ಮೋಸಹೋದನು ಎಂದೂ ಕೆಲವರು ಹೇಳುತ್ತಾರೆ.

ಇಂಗ್ಲಿಷ ಸೇನಾಪತಿ ಲೆಗಾರ್ಡನು ಹೊಸ ಸೈನ್ಯವೊಂದರೊಂದಿಗೆ ಅಜಮಗಡವನ್ನು ತಲುಪಲು ನಿಶ್ಚಯಿಸಿದನು. ಕುಂವರ ಸಿಂಹನಿಗೆ ಈ ಸಮಾಚಾರ ತಿಳಿದುಬರಲು ಲೆಗಾರ್ಡನ ಸೈನ್ಯವನ್ನು ಗಾಜೀಪುರದ ಸಮೀಪದ ನದಿಯ ಸೇತುವೆಯ ಮೇಲೆ ಅಡ್ಡಗಟ್ಟಲು ಆತನು ನಿಶ್ಚಯಿಸಿದನು. ಲೆಗಾರ್ಡನ ಸೈನ್ಯವು ಕುಂವರ ಸಿಂಹನ ಸೈನ್ಯವನ್ನು ಹಿಮ್ಮೆಟ್ಟಿಸಿ ೧೨ ಮೈಲುಗಳ ವರೆಗೆ ಬೆನ್ನಟ್ಟಿತು. ಆದರೂ ಅವರಿಗೆ ಕುಂವರ ಸಿಂಹನ ಸುಳಿವು ಹತ್ತಲಿಲ್ಲ. ಹಠಾತ್ತಾಗಿ ಕುಂವರ ಸಿಂಹನು ಲೆಗಾರ್ಡನ ಸೇನೆಯ ಮೇಲೆ ಏರಿಹೋಗಿ ಅದನ್ನು ಸೋಲಿಸಿದನು. ಆ ಸೈನ್ಯ ಚಲ್ಲಾಪಿಲ್ಲಿಯಾಗಿ ಹೋಯಿತು.

ಆಗ ಸೇನಾಪತಿ ಡಗಲಸನ ನೇತೃತ್ವದಲ್ಲಿ ಕುಂವರಸಿಂಹನ ಸಮಾಚಾರ ತೆಗೆದುಕೊಳ್ಳಲು ಇನ್ನೊಂದು ಸೈನ್ಯವನ್ನು ಇಂಗ್ಲಿಷರು ಕಳಿಸಿದರು. ಕುಂವರಸಿಂಹನು ತನ್ನ ಸೈನ್ಯದಲ್ಲಿ ಮೂರು ಭಾಗಗಳನ್ನು ಮಾಡಿ ಡಗಲಸನ ಮೇಲೆ ಆಕ್ರಮಣ ಮಾಡಿದನು. ಡಗಲಸನು ಸೋತು ಹಿಂದೆ ಸರಿಯುವಂತಾಯಿತು. ಕುಂವರ ಸಿಂಹನ ವಿಜಯೀ ಸೇನೆ ಗಂಗಾನದಿಯತ್ತ ನಡೆಯಿತು. ಸಿಕಂದರ

ಪುರವನ್ನು ತಲುಪಿ ಘಾಘರಾ ನದಿಯನ್ನು ದಾಟಿ ಮನೋಹರ ಗ್ರಾಮದಲ್ಲಿ ವಿಶ್ರಾಂತಿಗಾಗಿ ತಂಗಿತು. ಅಲ್ಲಿ ಡಗಲಸನು ಅದರ ಮೇಲೆ ದಾಳಿ ಮಾಡಿದನು. ಈ ಯುದ್ಧದಲ್ಲಿ ಕುಂವರ ಸಿಂಹನಿಗೆ ತುಸು ಹಾನಿಯಾಯಿತು. ಅವನ ಯುದ್ಧಸಾಮಗ್ರಿಗಳಲ್ಲಿ ಕೆಲವು ಡಗಲಸನ ಕೈವಶವಾದವು. ಆದರೆ ರಾಜಾ ಕುಂವರ ಸಿಂಹನು ಇದರಿಂದ ನಿರಾಶನಾಗದೆ ಹೊಸ ವ್ಯೂಹವೊಂದನ್ನು ರಚಿಸಿದನು. ತನ್ನ ಸೈನ್ಯವನ್ನು ಹಲವು ಗುಂಪುಗಳನ್ನಾಗಿ ಮಾಡಿ ಬೇರೆ ಬೇರೆ ಹಾದಿಗಳಿಂದ ಒಂದು ನಿರ್ದಿಷ್ಟ ಸ್ಥಳಕ್ಕೆ ಬಂದು ತಲಪುವಂತೆ ಅವುಗಳಿಗೆ ಆದೇಶವಿತ್ತನು. ಯಾವ ಗುಂಪನ್ನು ಎದುರಿಸಬೇಕೆಂಬುದೇ ಡಗಲಸನಿಗೆ ತಿಳಿಯದಂತಾಯಿತು. ಈ ಸಂದರ್ಭದಲ್ಲಿಯೆ ಈ ಲೇಖದ ಪ್ರಾರಂಭದಲ್ಲಿ ಹೇಳಿರುವ ಶಿವಪುರ ಘಟನೆ ಜರುಗಿದ್ದು.

ಹೆಚ್ಚು ಕಡಿಮೆ ಎಂಟು ತಿಂಗಳಗಳ ವರೆಗೆ ೮ ಜನ ಆರಿಸಿದ ಬ್ರಿಟಿಶ ಸೇನಾಪತಿಗಳೊಂದಿಗೆ ಕುಂವರ ಸಿಂಹನು ಕಾದಿದನು. ತನ್ನ ರಾಜಧಾನಿಯಾದ ಜಗದೀಶಪುರವನ್ನು ಮತ್ತೊಮ್ಮೆ ಗೆದ್ದುಕೊಳ್ಳಬೇಕು ಎಂಬುದೇ ಅವನ ಉದ್ದೇಶವಾಗಿತ್ತು. ಶಿವಪುರದಲ್ಲಿ ಗಂಗಾ ನದಿಯನ್ನು ದಾಟುವಾಗ ಗುಂಡು ಬಡಿದ ಕೈಯನ್ನು ಕತ್ತರಿಸಿ ಚಲ್ಲಿದ ಬಳಿಕ ೨೨-೪-೧೮೫೮ರಂದು ಜಗದೀಶಪುರವನ್ನು ಆತ ವಶಪಡಿಸಿಕೊಂಡನು. ಈ ಸುದ್ದಿ ಕೇಳಿ ಇಂಗ್ಲಿಷರು ನಡುಗಿದರು.

ಎಪ್ರಿಲ್ ೨೩ರಂದು ಸೇನಾಪತಿ ಲೀಗ್ರೇಂಡನ ಆಧಿಪತ್ಯದಲ್ಲಿ ಹೊಸ ಸೈನ್ಯವೊಂದು ಜಗದೀಶಪುರವನ್ನಾಕ್ರಮಿಸಲು ಆರಾದಿಂದ ಹೊರಟಿತು. ಈ ಸೈನ್ಯದ ಹತ್ತರ ದೊಡ್ಡ ತೋಫುಖಾನೆಯೂ ಇತ್ತು. ಅತ್ಯಂತ ದಣಿದಿದ್ದರೂ ಕೇವಲ ಒಂದೇ ಸಾವಿರ ಸೈನಿಕರು ಬಳಿಯಲ್ಲಿದ್ದರೂ ಕುಂವರ ಸಿಂಹನು ಧೈರ್ಯದಿಂದ ೧॥ ಮೈಲು ಮುಂದೆ ಬಂದು ಲೀಗ್ರೇಂಡನ ಸೈನ್ಯವನ್ನೆದುರಿಸಿದನು. ಜಯಶ್ರೀ. ಅವನ ಕೈಬಿಡಲಿಲ್ಲ. ಲೀಗ್ರೇಂಡನ ಸೈನ್ಯ ಬಲವಾದ ಪೆಟ್ಟು ತಿಂದು ಅವಿತುಕೊಂಡು ಅಡವಿ ದಾರಿಯಿಂದ ಹಿಂದೆ ಸರಿಯಿತು. ಕುಂವರ ಸಿಂಹನ ಸೇನೆ ಅದನ್ನು ಬೆನ್ನಟ್ಟಿ ಪೆಟ್ಟುಹಾಕುತ್ತಲೇ ಹೋಯಿತು. ಲೀಗ್ರೇಂಡನಿಗೂ ಗುಂಡಿನೇಟು ತಗಲಿ ಅವನು ಸತ್ತನು. ಈ ಯುದ್ಧದಲ್ಲಿ ಕೇವಲ ೮೦ ಇಂಗ್ಲಿಷ ಸೈನಿಕರು ಮಾತ್ರ ಸುದ್ದಿ ಹೇಳಲು ಬದುಕಿದರು.

ಆದರೆ ಈ ಮಹಾ ವಿಜಯದ ನಂತರ ರಾಜಾ ಕುಂವರ ಸಿಂಹನು ಬಹುದಿನ ಬದುಕಲಿಲ್ಲ. ಆತನ ಬಲಗೈಯ ಗಾಯವು ಅವನಿಗೆ ಘಾತಕವಾಯಿತು. ೨೬-೪-೫೮ರಂದು ಅವನು ತನ್ನ ಮಹಲಿನಲ್ಲಿ ಪ್ರಾಣಬಿಟ್ಟನು. ಈ ವೀರ ರಜಪೂತನು ತನ್ನ ಸ್ವತಂತ್ರ ಮಹಲಿನಲ್ಲಿ ಪೂರ್ಣ ಸ್ವತಂತ್ರ ಸ್ಥಿತಿಯಲ್ಲಿಯೆ ತನ್ನ ವೀರ ಜೀವನವನ್ನು ಕೊನೆಗಾಣಿಸಿದನು. ಆತನ ಸ್ವತಂತ್ರ ಧ್ವಜವು ಆತನ ಮಹಲಿನ ಮೇಲೆ ಆತನ ಶೌರ್ಯ, ದೇಶಪ್ರೇಮಗಳ ದ್ಯೋತಕವಾಗಿ ಹಾರಾಡುತ್ತಿತ್ತು.

ರಾಜಾ ಕುಂವರಸಿಂಹನ ವೈಯಕ್ತಿಕ ಜೀವನವು ಅತ್ಯಂತ ನಿಷ್ಕಲಂಕವಾಗಿತ್ತು. ಆತನಿಗೆ ಗೊತ್ತಾದೀತೆಂಬ ಭಯದಿಂದ ಆತನ ರಾಜ್ಯದಲ್ಲಿ ಯಾರೂ ತಂಬಾಕು ಕೂಡ ಸೇದುತ್ತಿರಲಿಲ್ಲ. ಅವನ ಪ್ರಜೆಗಳೆಲ್ಲ ಅವನನ್ನು ಪ್ರೇಮ - ಗೌರವಗಳಿಂದ ಕಾಣುತ್ತಿದ್ದರು. ರಾಜಾ ಕುಂವರ ಸಿಂಹನ ರಣಕೌಶಲ್ಯ ಅದ್ವಿತೀಯವಾಗಿತ್ತು ಎಂಬುದನ್ನು ಇಂಗ್ಲಿಷರೇ ಒಪ್ಪಿಕೊಂಡಿದ್ದಾರೆ.

೧೮೫೭ರ ಕ್ರಾಂತಿಯ ಇತಿಹಾಸದ ಈ ಅಧ್ಯಾಯವು ರಾಜಾ ಕುಂವರಸಿಂಹನ ಬಂಧು ವೀರ ರಾಜಾ ಅಮರಸಿಂಹನ ವೃತ್ತಾಂತವಿಲ್ಲದೆ ಪೂರ್ತಿಯಾಗುವುದಿಲ್ಲ. ಜಗದೀಶಪುರದ ಸಿಂಹಾಸನವನ್ನು ಪಡೆದ ನಾಲ್ಕೇ ದಿನಗಳಲ್ಲಿ ಈತನು ಸೈನ್ಯವನ್ನೆಲ್ಲ ಒಟ್ಟುಗೂಡಿಸಿ ಆರಾದ ಮೇಲೆ ದಾಳಿ ಮಾಡಿದನು. ಜನರಲ್ ಡಗಲಸ ಮತ್ತು ಲೆಗಾರ್ಡರ ಸಂಯುಕ್ತ ಸೈನ್ಯದೊಂದಿಗೆ ಅನೇಕ ಸ್ಥಳಗಳಲ್ಲಿ ಇವನು ಹೋರಾಡಿದನು.

ರಾಜಾ ಅಮರಸಿಂಹನು ಕೂಡ ಇಂಗ್ಲಿಷರನ್ನು ಅನೇಕ ಸಾರಿ ಹಣಿದನು. ಜೂನ ೧೫ರಂದು ನಿರಾಶನಾಗಿ ಮತ್ತು ಹೆಸರು ಕೆಡಿಸಿಕೊಂಡು

ಲೆಗಾರ್ಡನು ರಾಜೀನಾಮೆಯನ್ನೀಯಬೇಕಾಯಿತು. ಇಂಗ್ಲಿಷ ಸೈನ್ಯದ ಸಂಚಾಲನದ ಹೊಣೆಯೆಲ್ಲ ಡಗಲಸನ ಮೇಲೆ ಬಿತ್ತು. ರಾಜಾ ಅಮರಸಿಂಹನ ಶಿರಸ್ಸನ್ನು ತಂದೊಪ್ಪಿಸುವವರಿಗೆ ಬಹು ದೊಡ್ಡ ಇನಾಮು ಕೊಡುವದಾಗಿ ಡಗಲಸನು ಸಾರಿದನು. ಆದರೆ ಅದರಿಂದೇನೂ ಪ್ರಯೋಜನವಾಗಲಿಲ್ಲ.

ನಾಲ್ಕೈದು ತಿಂಗಳುಗಳು ಕಳೆದವು. ಈ ಅವಧಿಯಲ್ಲಿ ಅಮರಸಿಂಹನು ಆರಾವನ್ನು ಕೈವಶಮಾಡಿಕೊಂಡನು. ಅಕ್ಟೋಬರ ೧೭ರಂದು ಇಂಗ್ಲಿಷರ ದೊಡ್ಡ ಸೈನ್ಯವೊಂದು ಏಳು ದಿಕ್ಕುಗಳಿಂದ ಜಗದೀಶಪುರವನ್ನು ಮುತ್ತಿತು. ಈ ಸೈನ್ಯದೊಂದಿಗೆ ಕಾದುವದು ಸಾಧ್ಯವಿಲ್ಲವೆಂದು ತಿಳಿದು ಅಮರಸಿಂಹನು ಕುದುರೆಯನ್ನೇರಿ ಇಂಗ್ಲಿಷರ ಸೈನ್ಯವನ್ನು ಭೇದಿಸಿಕೊಂಡು ಪಾರಾಗಿ ಹೋದನು. ಅವನನ್ನು ಬೆನ್ನಟ್ಟಿದ ಇಂಗ್ಲಿಷ ಸೈನ್ಯವು ನೈನಂದಿ ಊರಿನಲ್ಲಿ ಅವನನ್ನು ಸುತ್ತುಗಟ್ಟಿತು. ಅಮರಸಿಂಹನ ಬಳಿ ಆಗ ಕೇವಲ ४೦೦ ಜನ ಸೈನಿಕರಿದ್ದರು. ಅವರೆಲ್ಲ ಕೇಸರಿ ಉಡುಪು ಧರಿಸಿ ಇಂಗ್ಲಿಷರ ಮೇಲೇರಿ ಹೋದರು. ಅವರಲ್ಲಿ ೩೦೦ ಜನ ಧಾರಾತೀರ್ಥದಲ್ಲಿ ಮಡಿದರು. ಅಷ್ಟರಲ್ಲಿ ಇನ್ನಷ್ಟು ಇಂಗ್ಲಿಷರ ಸೈನ್ಯ ಅಲ್ಲಿಗೆ ಬಂದಿತು. ತನ್ನ ಕೇವಲ ನೂರು ಸೈನಿಕರೊಂದಿಗೆ ಅವರನ್ನು ಅಮರಸಿಂಹನು ಎದುರಿಸಿದ್ದಲ್ಲದೆ ಇಬ್ಬರು ಸಹಾಯಕರೊಂದಿಗೆ ಅಲ್ಲಿಂದಲೂ ಪಾರಾಗಿ ಹೋದನು. ಈ ಯುದ್ಧದಲ್ಲಿ ಇಂಗ್ಲಿಷ ಸೈನ್ಯಕ್ಕೂ ತುಂಬಾ ಹಾನಿಯಾಯಿತು.

ಇಂಗ್ಲಿಷ್ ಸೈನಿಕರು ಅಮರಸಿಂಹನ ಬೆನ್ನು ಬಿಡಲಿಲ್ಲ. ಆನೆಯನ್ನೇರಿ ಹೋಗುತ್ತಿದ್ದ ಅವನನ್ನು ಕೆಲ ಸೈನಿಕರು ಸುತ್ತುಗಟ್ಟಿದಾಗ ಅಮರಸಿಂಹನು ಆನೆಯಿಂದ ಜಗಿದು ಕೈಮೂರ ಅಡವಿಯಲ್ಲಿ ಕಣ್ಮರೆಯಾದನು. ಇಂಗ್ಲಿಷ್ ಸೈನ್ಯ ಕೈತಿಕ್ಕುತ್ತ ಕೂಡ್ರಬೇಕಾಯಿತು. ಜಗದೀಶಪುರದ ವೀರ ರಜಪೂತ ಮಹಿಳೆಯರು ಕೂಡ ತೋಫಿನೆದುರು ನಿಂತು ಆತ್ಮ ಬಲಿಯನ್ನರ್ಪಿಸಿದರೇ ವಿನಾ ಶತ್ರುಗಳ ಕೈಗೆ ಸಿಗಲಿಲ್ಲ.

ಭಾರತದ ಪ್ರಥಮ ಸ್ವಾತಂತ್ರ್ಯ ಸಂಗ್ರಾಮದಲ್ಲಿ ಇಂಥ ಅಪ್ರತಿಮ ದೇಶಭಕ್ತರ, ವೀರರ ಕಥೆಗಳೆಷ್ಟೋ ಇವೆ. ಇತಿಹಾಸಕಾರರು ಅವರ ಚರಿತ್ರೆಯ ಮೇಲೆ ಮುಸುಕನ್ನೆಳೆದಿದ್ದಾರೆ. ಈಗ ಭಾರತ ಸ್ವತಂತ್ರವಾಗಿದ್ದು ಇಂಥ ವೀರರ ಚರಿತ್ರೆ ಬೆಳಕಿಗೆ ಬರುವಂತಾಗಿದೆ. ಬಿಹಾರ ಸರಕಾರವು ರಾಜಾ ಕುಂವರ ಸಿಂಹ ಮತ್ತು ಅಮರ ಸಿಂಹರ ವೀರ ಚರಿತ್ರೆಯನ್ನು ಬರೆಯಲು ಒಂದು ಸಂಸ್ಥೆಗೆ ೧೨,೭೫೦ ರೂಪಾಯಿಗಳ ಸಹಾಯ ಧನವನ್ನಿತ್ತಿದೆ.



## ವಿಮರ್ಶ ವಿಚಕ್ಷಣ

ತರುಣ ನಾಟಕಕಾರನೊಬ್ಬನು ಪ್ರಸಿದ್ಧ ನಟ ವಾಲ್ಟರ ಸ್ಲೆಜಾಕನನ್ನು ತನ್ನ ಹೊಸ ನಾಟಕದ ಪ್ರಥಮ ಪ್ರಯೋಗಕ್ಕೆ ಆಮಂತ್ರಿಸಿದ್ದನು. ಸ್ಲೆಜಾಕನು ನಾಟಕದ ಬಹು ಭಾಗವನ್ನು ನಿದ್ರೆಯಲ್ಲೇ ಕಳೆದನು.

ನಾಟಕ ಮುಗಿದೊಡನೆ ನಾಟಕಕಾರ ಕೆರಳಿ ಕೂಗಿದನು : " ನಿದ್ದೆ ಮಾಡಲು ಇಲ್ಲಿ ಬಂದಿದ್ದಿರಾ? ನೀವು? ನಿಮ್ಮ ಅಭಿಪ್ರಾಯ ಕೇಳಲು ಕರೆದಿದ್ದೆನೆಂದು ನಿಮಗೆ ಗೊತ್ತಿಲ್ಲವೆ ? ''

ಸ್ಲೆಜಾಕ ನಿರ್ವಿಕಾರವಾಗಿ ಉತ್ತರವಿತ್ತ : " ಹುಡುಗಾ, ನಿದ್ರೆಯೂ ಒಂದು ಅಭಿಪ್ರಾಯ ತಾನೆ ? ''

**ಕಾಯ್ದ ತಲೆ ತಂಪು ಮಾಡಿಕೊಳ್ಳಲು ಒಂದು ವಿಚಿತ್ರ ಮನೋರಂಜನೆಯನ್ನು ಲೇಖಕರು ಕಂಡುಹಿಡಿದಿದ್ದರು. ಆದರೆ ಅವರನ್ನು ಆಶ್ಚರ್ಯಗೊಳಿಸಿದ್ದೆಂದರೆ—**

# ತಿ ರು ಗು ಪ್ಪು

ಎಂ. ಕೃಷ್ಣನ್

ತಿಂಗಳು ಮುಗಿಯಿತು ಎಂದರೆ ನನ್ನ ಕುತ್ತಿಗೆಗೆ ಬರುತ್ತದೆ. ಹಾಲಿನವ, ಅಗಸ, ಕಿರಾಣಿ ಅಂಗಡಿಯವ, ಕಾಳಿನವ, ಕಟ್ಟಿಗೆಯವ— ಒಬ್ಬರದೇ ಇಬ್ಬರದೇ! ಹಲವಾರು ಜನರು ತಮ್ಮ ತಮ್ಮ ಬಾಕಿ ಪಟ್ಟಿಯನ್ನು ತಂದು ಗೋಳು ಹೊಯ್ದುಕೊಳ್ಳುತ್ತಾರೆ. ನನ್ನ ತಲೆ ಕಾಯ್ದು ಹೋಗುತ್ತದೆ. ಈ ಕಾಯ್ದ ತಲೆಯನ್ನು ತಣ್ಣಗೆ ಮಾಡದಿದ್ದರೆ ಹುಚ್ಚು ಹಿಡಿದುಹೋದೀತು.

ಹಾಗಾಗಬಾರದು ಎಂದು ನಾನು ಒಂದು ಉಪಾಯವನ್ನು ಹುಡುಕಿಕೊಂಡಿದ್ದೇನೆ. ನನ್ನ ಮಟ್ಟಿಗಂತೂ ಇದು 'ರಾಮಬಾಣ' ವೇ ಆಗಿದೆ. ನನ್ನ ಉಪಾಯ ಬಹು ಸರಳವಾದುದು, ವೆಚ್ಚವಿಲ್ಲದ್ದು; ಆದರೂ ನನ್ನ ಕಾಯ್ದ ತಲೆಯನ್ನು

ಮದ್ರಾಸಿನ 'ಹಿಂದು' ಪತ್ರಿಕೆಯಿಂದ



ಶಾಂತಗೊಳಿಸಿ ಖಿನ್ನವಾದ ಮನಸ್ಸನ್ನು ಉಲ್ಲಸಿತಗೊಳಿಸಿ ಹುರುಪನ್ನೀಯಲು ಸಹಸಾ ಅದು ತಪ್ಪುವದಿಲ್ಲ.

ನಿತ್ಯ ಜೀವನದ ಪರಿಸ್ಥಿತಿ ಬಹುಶಃ ನಿರಾಶಾದಾಯಕವಿರುವದಾದರೂ ನನ್ನಂಥ ಮಧ್ಯಮ ವರ್ಗದ ಜನರನ್ನು ಪೀಡಿಸುವದು ಅದಲ್ಲ. ಜೀವನವನ್ನು ಬಹು ಗಂಭೀರ ದೃಷ್ಟಿಯಿಂದ, ಉತ್ಪ್ರೇಕ್ಷೆಯಿಂದ ನೋಡುವ ಅವರ ದೃಷ್ಟಿಕೋನವೇ ಅವರನ್ನು ಪೀಡಿಸುತ್ತದೆ ಎಂದು ನನ್ನ ಅಭಿಪ್ರಾಯವಿದೆ. ಸಾಮಾನ್ಯವಾದ ಕಟುಸಂದರ್ಭಗಳಲ್ಲಿ ನಾನು 'ಗುರುತ್ವಾಕರ್ಷಣವನ್ನು ಹೋಗಲಾಡಿಸುವ'ಂಥ ಸರಸ ಸಾಹಿತ್ಯವನ್ನು ಓದುತ್ತೇನೆ. ಆದರೆ ಪರಿಸ್ಥಿತಿ ತೀರ ಕಂಗಾಲಾದಾಗ, ಹದ್ದು ಮೀರಿದಾಗ, 'ದೇವರೇ ಗತಿ' ಎನ್ನುವ ಪ್ರಸಂಗ ಬಂದಾಗ ನಾನು ನನ್ನ 'ರಾಮಬಾಣ'ಕ್ಕೆ ಶರಣುಹೋಗುತ್ತೇನೆ. ನನ್ನಲ್ಲಿರುವ ಅದಾವುದೋ ಉತ್ಸಾಹದ ಬುಗ್ಗೆ ಚಿಮ್ಮುವಂತೆ ಮಾಡುವ ಶಕ್ತಿ ಅದರಲ್ಲಿರುವದರಿಂದ ಅದೆಂದೂ ನನಗೆ ಕೈಕೊಡುವದಿಲ್ಲ.

ಇದೆಂಥ ಉಪಾಯವಿರಬಹುದು ಎಂದು ನೀವು ಸೋಜಿಗಗೊಂಡಿರಿ ತಾನೇ ! ಹೇಳುತ್ತೇನೆ ಕೇಳಿ :

ನಾನು ನೇರವಾಗಿ ಬಸ್ ನಿಲ್ದಾಣಕ್ಕೆ ಹೋಗಿ ಸಮೀಪದಲ್ಲಿರುವ ಯಾವುದಾದರೊಂದು ಗಿಡದ ನೆರಳಿನಲ್ಲಿ ಕೂಡ್ರುತ್ತೇನೆ. ಅದು ಎಷ್ಟೊತ್ತು ಎಂದಿರಿ? ಮಧ್ಯಮ ವಯಸ್ಸಿನ ಸುಖಿಪುರುಷನಂತೆ ಕಾಣುವ ಯಾವನಾದರೂ ಗೃಹಸ್ಥ ಬರುವದು ಕಾಣುವ ವರೆಗೆ ಮಾತ್ರ. ಆತ ನಾನಿದ್ದ ಸ್ಥಳವನ್ನು ದಾಟಿ ನಾಲ್ಕು ಹೆಜ್ಜೆ ಇಟ್ಟೊಡನೆ ನಾನವನ ಹಿಂದೆ ಹೋಗಿ ''ವ್ಹಾ !'' ಎಂದು ಅವನ ಬೆನ್ನು ಚಪ್ಪರಿಸಿ ''ಏನಾಶ್ಚರ್ಯ ! ಅಂ! ಇಲ್ಲಿ ನಿನ್ನ ಭೆಟ್ಟಿಯಾದೀತೆಂದು ಕನಸಿನಸಲ್ಲಿಯೂ ಎಣಿಸಿರಲಿಲ್ಲ. ಪ್ರಪಂಚವೂ ಒಂದು ಅಣು ಎನ್ನುವ ಮಾತು ಸುಳ್ಳಲ್ಲ'' ಎನ್ನುತ್ತೇನೆ.

ಆ ಗೃಹಸ್ಥ ಸರಕ್ಕನೆ ಹಿಂತಿರುಗಿ ನಿಂತು ನನ್ನನ್ನು ಕೆಕ್ಕರಿಸಿ ನೋಡುತ್ತಾನೆ. ಆತನ ಆ ನೋಟದಲ್ಲಿ ಏನೋ ಗೊಂದಲ ಕಾಣಿಸುತ್ತದೆ. ಈ ಪ್ರತಿಕ್ರಿಯೆಗಳು ನನ್ನ ಗಮನಕ್ಕೆ ಬಂದೇ ಇಲ್ಲವೆನ್ನುವಂತೆ ನಾನು ನಟಿಸುತ್ತೇನೆ.

''ಬಹಳ, ಬಹಳವೆಂದರೆ ನೆನಪಿಡಲಾರದಷ್ಟು ವರ್ಷಗಳಾಗಿ ಹೋಯಿತು. ಆದರೂ ನಿಜ ಹೇಳಬೇಕೆಂದರೆ ನೀನೇನೂ ಬಹಳ ಬದಲಾಯಿಸಿಲ್ಲ ನೋಡು. ಏನೋ ಸ್ವಲ್ಪ ಹೊಟ್ಟೆ ಬಂದಂತೆ ಕಂಡರೂ ಪರಿಚಯ ಹತ್ತದಷ್ಟು ಬದಲಾಯಿಸಿಲ್ಲ. ಕಂಡಕೂಡಲೆ ನನಗೆ ಗುರುತು ಹತ್ತಿಬಿಟ್ಟಿತು. ಮತ್ತೆ . . . .''

ನನ್ನ ವಾಕ್‌ಪ್ರವಾಹಕ್ಕೆ ಆತ ಸರಕ್ಕನೆ ಒಡ್ಡು ಕಟ್ಟುತ್ತಾನೆ. ಮೊದಲಿನ ಆಶ್ಚರ್ಯಾಘಾತದಿಂದ ಆತ ಇಷ್ಟರಲ್ಲಿ ಚೇತರಿಸಿಕೊಂಡಿರುತ್ತಾನೆ. ಮತ್ತೆ ಸಿಡುಕಿನಿಂದ "ನಿಮ್ಮದು ತಪ್ಪುಗ್ರಹಿಕೆಯಾಗಿದೆ" ಎಂದು ಹೇಳುತ್ತಾನೆ. "ಅಲ್ಲ, ನಿಮ್ಮೊಂದಿಗೆ ಕಾಲೇಜಿನ ಇಂಟರ ತರಗತಿಯಲ್ಲಿ ಓದುತ್ತಿದ್ದ ಸದಾಶಿವನು ನಾನಲ್ಲವೇ ಅಲ್ಲ" ಎಂದು ಖಂಡಿತವಾದ ಸ್ವರದಲ್ಲಿ ಹೇಳುತ್ತಾನೆ. ಕೂಡಲೆ ನಾನು ಅವನ ಕ್ಷಮೆಯನ್ನು ಕೇಳಿ ಬೇಸ್ತುಬಿದ್ದವನಂತೆ ನಟಿಸುತ್ತೇನೆ. ಇದನ್ನೆಲ್ಲ ನೋಡುತ್ತ ನಿಂತಿರುವ ಒಬ್ಬಿಬ್ಬರು ನನ್ನನ್ನೂ ನನ್ನ ಬೇಸ್ತುಬಿದ್ದ ಮುಖವನ್ನೂ—ಮತ್ತು ಬಹುಶಃ ಸಿಟ್ಟಿನಿಂದ ಕೆಂಪಾದ ಆ ಗೃಹಸ್ಥನ ಮುಖವನ್ನೂ ಕಂಡು 'ಹ್ಹಿಹ್ಹಿ' ಎಂದು ನಗುತ್ತಾರೆ. ನಾನು ಆಗ ಅಲ್ಲಿಂದ ಹೊರಟು ನಿರ್ಧಾರದಿಂದ ಮತ್ತೊಂದು ಬಸ್ ನಿಲ್ದಾಣಕ್ಕೆ ಪ್ರಯಾಣ ಬೆಳೆಸುತ್ತೇನೆ.

ನನ್ನ ಹಳೆಯ ಗೆಳೆಯ ಸದಾಶಿವನನ್ನು ಹುಡುಕುವ ಈ ರೀತಿಯ ಎರಡು ಮೂರು ಪ್ರಯತ್ನಗಳನ್ನು ಮಾಡಿದ ನಂತರ ನಾನು ಸಿಟಿಬಸ್ ಹತ್ತಿ ಮನೆಗೆ ಹೋಗುತ್ತೇನೆ. ಮನೆಯಿಂದ ಹೊರಡುವಾಗ ನನ್ನನ್ನಾವರಿಸಿದ್ದ ನನ್ನ ಖಿನ್ನ ಮನಃಸ್ಥಿತಿಯನ್ನು ಬಸ್ ನಿಲ್ದಾಣಗಳಲ್ಲಿ ಬಿಟ್ಟು ಉಲ್ಲಸಿತನಾಗಿ ಮನೆಮುಟ್ಟುತ್ತೇನೆ.

ಇದು ಹುಡುಗಾಟಿಕೆ ಎನ್ನುತ್ತೀರಿ ನೀವು.

ಒಪ್ಪುತ್ತೇನೆ. ಸುಶಿಕ್ಷಿತನು ಎಂದೆಂದಿಗೂ ಮಾಡಬಾರದಂಥ ಕೆಲಸ ಎಂದಿರಾ? ಸರಿ. ಆದರೆ ನಾನು ಸುಶಿಕ್ಷಿತ, ಸುಸಂಸ್ಕೃತ ಎಂದು ಹೇಳುವ ಮಗನಾರು?

.

ಆದರೆ ಇತ್ತೀಚೆಗೆ ನನ್ನ ಈ ಹುಡುಗಾಟಿಕೆಯ ಸಂತೋಷಕ್ಕೂ ಕಲ್ಲು ಬಿದ್ದಿದೆ.

ಸ್ವಲ್ಪ ಹೆಚ್ಚಾಗಿಯೆ ಹಣವನ್ನು ಪುಡಿಮಾಡಿದ ಒಂದು ಸುಖಪ್ರವಾಸದಿಂದ ನಾನು ಮನೆಗೆ ಮರಳಿ ಬಂದಾಗ 'ಬಾಕಿಪಟ್ಟಿ'ಗಳ ರಾಶಿ ಎದುರಿಗೆ ಬಂತು. ಸಾಲದ್ದಕ್ಕೆ ಅಂದೇ ಸಂಜೆ ಸಂಪಾದಕರೊಬ್ಬರು ನಾನು ಕಳಿಸಿದ್ದ ಕಥೆಯನ್ನು ಹಿಂತಿರುಗಿ ಕಳಿಸಿದರು. ಜೊತೆಗೆ ಇಂಥದೇ ಕಥೆ ಒಂದು ಈ ಮೊದಲೇ ಪ್ರಕಟವಾಗಿರುವ (ಯಾವನೋ ಬರಹಗಳ್ಳನ ಕುತಂತ್ರವಲ್ಲದೆ ಮತ್ತೇನು?) ವಿಚಾರವನ್ನು ಅವರು ತಿಳಿಸಿದ್ದರು. ಹೇಳಿ, ನನ್ನ ತಲೆಕಾಯ್ದು ಹಂಚಾದರೆ ಆಶ್ಚರ್ಯವೇನು? ನಾನು ತಡಮಾಡಲಿಲ್ಲ. ಬಸ್ ನಿಲ್ದಾಣಕ್ಕೆ ಹೊರಟೆ.

ಆದರೆ ಅದೃಷ್ಟ ಚೆನ್ನಾಗಿರಲಿಲ್ಲ. ಬಸ್ ನಿಲ್ದಾಣದಲ್ಲಿ ಖಿ—ಖಿ ಎಂದು ನಗುವ ಮೂವರು ತರುಣಿಯರು, ಓರ್ವ ಪ್ರೌಢ ಮುಸ್ಲಿಂ ಗೃಹಸ್ಥ ಮತ್ತೆ ಯಾರ ಭುಜ ಚಪ್ಪರಿಸಿ 'ವ್ಹಾ' ಎನ್ನುವದು ಜಾಣತನದ ಕೃತಿ ಎಂದೆನಿಸಲಿಕ್ಕಿಲ್ಲವೊ ಅಂಥ ಬಡಕಲ ದೇಹದ ಮನುಷ್ಯನೊಬ್ಬ ಮಾತ್ರ ಇದ್ದರು. ನಿರಾಶೆಗೊಂಡು ನಾನು ಹಾದಿ ಕಾಯುತ್ತ ನಿಂತೆ. ಬಸ್ಸುಗಳು ಬಂದವು, ಹೋದವು. ಇನ್ನೂ ಕೆಲವು 'ಖಿ—ಖಿ' ತರುಣಿಯರು, ಇನ್ನೂ ಗಟ್ಟಿಮುಟ್ಟಾದ ಜನರು ಬಂದರು. ಆದರೆ ನನ್ನ 'ಸದಾಶಿವ' ನಾಗಬಹುದಾದ ಪ್ರಾಣಿಯೊಂದೂ ಕಾಣಿಸಿಕೊಳ್ಳಲಿಲ್ಲ. ಏನು ಗ್ರಹಚಾರ ಎಂದು ನಾನು ಅಂದುಕೊಂಡೆನೋ ಇಲ್ಲವೋ, ದಷ್ಟಪುಷ್ಟನಾದ, ಅಷ್ಟಕ್ಕಷ್ಟೇ ಬುದ್ಧಿಯ ಪೋಲೀಸನೊಬ್ಬ ನನ್ನನ್ನು ಮಾತಾಡಿಸಿದ. ವಿನಯದ, ಆದರೆ ಎಲ್ಲರಲ್ಲಿಯೂ ಎಲ್ಲದರಲ್ಲಿಯೂ ಸಂಶಯ ತಾಳುವ, ಪೋಲೀಸನ ದನಿಯಲ್ಲಿ ಆತ, "ಯಾವ ಬಸ್ಸಿಗಾಗಿ ಕಾಯುತ್ತಿದ್ದಿರಿ?" ಎಂದು ನನ್ನನ್ನು ಕೇಳಿದ.

ನನ್ನ ಬುದ್ಧಿಯನ್ನು ಮಿಂಚಿನಂತೆ ಓಡಿಸಿದೆ. ಸಾಧ್ಯವಾದಮಟ್ಟಿಗೂ ತೀರ ಸ್ವಾಭಾವಿಕವಾದ ಸ್ವರದಲ್ಲಿ "ಮಾಂಬಳಂ ಬಸ್ಸು" ಎಂದೆ. "ಹಾಗಾದರೆ ಈಗಾಗಲೇ ಮಾಂಬಳಕ್ಕೆ ಹೋದ ಮೂರು ಬಸ್ಸುಗಳನ್ನು ಏಕೆ ಹತ್ತಲಿಲ್ಲ?" ಎಂದು ಪ್ರಶ್ನೆ ಹಾಕಿದ.

ನನಗಿರುವ ಕಾಯದೆಯ ಜ್ಞಾನ ಅಷ್ಟಕ್ಕಷ್ಟೇ ಎನ್ನಿ. ಆದರೂ ನಮ್ಮ ಸಂವಿಧಾನದಂತೆ ಪ್ರತಿಯೊಬ್ಬ ನಾಗರಿಕನಿಗೂ ಮಾಂಬಳಕ್ಕೆ ಹೋಗುವ ಯಾವ ಬಸ್ಸು ಹತ್ತಬೇಕು, ಯಾವದನ್ನು ಬಿಡಬೇಕು ಎಂದು ಆಯ್ದುಕೊಳ್ಳುವ ಹಕ್ಕಿದೆ ಎಂಬುದನ್ನು ನಾನು ಖಂಡಿತವಾಗಿ ಬಲ್ಲೆ. ನನ್ನ ಈ ಕಾಯದೆಯ ಜ್ಞಾನದ ಲಾಭವನ್ನು ಆತನಿಗೆ ಮಾಡಿಕೊಡೋಣ ಎಂದು ಯೋಚಿಸಿದ ನನಗೆ ಆತ ಅಕ್ಷಮ್ಯ—ಹಾಂ! ಅಕ್ಷಮ್ಯವಾದ—ಆ ಪ್ರಶ್ನೆಯನ್ನು ಕೇಳಿದ: **'ನೀವು ಯಾರು?'**

ನನ್ನಂಥವನಿಗೆ ಯಾರು ಬೇಕಾದರೂ ಕೇಳಬಹುದಾದ ಪ್ರಶ್ನೆಗಳಲ್ಲಿ "ನೀವು ಯಾರು?" ಎಂಬುದು ಅತ್ಯಂತ ಅಪ್ರಬುದ್ಧ, ನೀರಸ ಮತ್ತು ಕ್ಷೋಭಜನಕ ಪ್ರಶ್ನೆ ಎಂದು ನನ್ನ ಖಂಡಿತವಾದ ಅಭಿಪ್ರಾಯ. ನೋಡಿ, ಎದೆಯುಬ್ಬಿಸಿ ಸೆಟೆದು ನಿಂತು ಆಢ್ಯತೆಯಿಂದ "ನಾನಾರು ಗೊತ್ತಿಲ್ಲವೆ? ನಾನು ಮಹಾಮಂತ್ರಿ" ಎಂದು ಹೇಳಿಕೊಳ್ಳಲು ಬರುವಂಥ ಲಕ್ಷಣವಾವುದೂ ನನ್ನಲ್ಲಿಲ್ಲ. ಆಗೊಮ್ಮೆ ಈಗೊಮ್ಮೆ ನಾನೂ ಒಬ್ಬ ಸಾಹಿತಿ ಎಂದು ಹೇಳಿಕೊಳ್ಳಬಹುದು ಎಂದು ಅನಿಸುವ ವ್ಯಕ್ತಿ ನಾನು. ಮತ್ತೆ ಕೆಲವು ಸಲ ನಾನೊಬ್ಬ ನಿಸರ್ಗಪ್ರಿಯ, ಚಿತ್ರಕಾರ ಅಥವಾ ಹೋಗಲಿ ಬಿಡಿ, ನಾನು ಯಾರು ಎಂದು ತಿಳಿಸಿ ಹೇಳುವದನ್ನು ತಾಳ್ಮೆಯಿಂದ, ಸಹಾನುಭೂತಿಯಿಂದ ಕೇಳಿಕೊಳ್ಳುವವರಿರಬೇಕಾಗುತ್ತದೆ. ನನ್ನನ್ನು ಮಾತಾಡಿಸಿದ ಅಥವಾ ಪ್ರಶ್ನಿಸಿದ ಎನ್ನಿರಿ ಬೇಕಾದರೆ, ಈ ಪೋಲೀಸನಲ್ಲಿ ತಾಳ್ಮೆ ಅಥವಾ ಸಹಾನುಭೂತಿಯ ಕುರುಹು ನನಗಂತೂ

ಕಂಡುಬರಲಿಲ್ಲ. ನಿಜವಾಗಿ ಹೇಳುವದಾದರೆ 'ಖ್ಬಿ ಖ್ಬಿ' ಹುಡುಗಿಯರ ಬೆನ್ನು ಹತ್ತಿ ಬಂದ ಪ್ರಾಣಿ ನಾನು ಎಂದು ಆತ ಸಂದೇಹಗೊಂಡಿದ್ದ ಎಂಬ ಸಂದೇಹ ನನಗುಂಟಾಯಿತು.

ನನ್ನ ಸುದೈವ ಸಕಾಲಕ್ಕೆ ನನಗೆ ಸಹಾಯ ಮಾಡಿತು. ನಾನು ಉಳಿದುಕೊಂಡೆ. ಭಾರಿ ಕಿಮ್ಮತ್ತಿನ ಮೋಟಾರಕಾರೊಂದು ಭರ್ರನೆ ಬಂದು ನನ್ನ ಸಮೀಪದಲ್ಲೇ ನಿಂತಿತು. ಅದರಿಂದ ಓರ್ವ ಲಕ್ಷ ಶ್ರೀಮಂತ ಕೆಳಗಿಳಿದು ನೇರವಾಗಿ ನನ್ನೆಡೆಗೆ ನಡೆದುಬಂದ. ಹಲ್ಲು ಕಿರಿದು ನನ್ನ ಬೆನ್ನಿನಮೇಲೆ 'ಧಪ್' ಎಂದು ಚಪ್ಪರಿಸಿದ. ನಾನು 'ಹಾ!' ಎಂದೆ. ಆಶ್ಚರ್ಯ, ನೋವು ಎರಡೂ ಆಗಿತ್ತು. "ವ್ಹಾ! ವ್ಹಾ! ವ್ಹಾ! ಅರ್ಧ ತಲೆ ಬೋಳಾಗಿದ್ದರೂ ನೀನು ಅವನೇ ಸರಿ. ಸಂಶಯವೇ ಇಲ್ಲ" ಎಂದ ಆ ಶ್ರೀಮಂತ.

ನನ್ನ ಮುಖದಲ್ಲಿ ಆಶ್ಚರ್ಯವನ್ನು ಕಂಡು ಆತ ಆತುರದಿಂದ "ನನ್ನ ನೆನಪಿಲ್ಲವೆ?" ಎಂದು ಕೇಳಿದ. "ಓಹೊ! ನೆನಪಿರದೆ ಉಂಟೇ?" ಎಂದೆ ನಾನು. ತನ್ನ ಕಾರಿನ ಬಾಗಿಲು ತೆರೆದು "ನಡಿ. ಕೂಡ್ರು" ಎಂದು ಆತ ನನ್ನನ್ನು ಕಾರಿನೊಳಗೆ ದಬ್ಬಿದ. "ನಡಿ. ಎಲ್ಲಿ ಇಳಿಯುತ್ತೀ ಹೇಳು. ನಿನ್ನನ್ನಿಳಿಸಿ ಹೋಗುತ್ತೇನೆ," ಎಂದು ಕಾರನ್ನು ನಡೆಸಿದ.

ತುಸು ಮುಂದೆ ಹೋಗಿ "ಎಲ್ಲಿ ಇಳಿಯುತ್ತೀರಿ?" ಎಂದು ಕೇಳಿದ. ಈತನನ್ನು ಇದುವರೆಗೆ ನಾನು ಖಂಡಿತವಾಗಿಯೂ ಕಂಡಿಲ್ಲ ಎಂಬುದು ನನಗೆ ಪ್ರತಿ ನಿಮಿಷಕ್ಕೂ ಮನವರಿಕೆಯಾಗುತ್ತಿತ್ತು. ಆ ಪೋಲೀಸನ ಎದುರಿನಲ್ಲಿ ಈತನಿಗೆ ತನ್ನ ತಪ್ಪು ತಿಳಿಯಬಾರದು ಎಂದು ನನಗೆ ಅನಿಸುವದು ಆಗಿನ ಸಂದರ್ಭದಲ್ಲಿ ಸ್ವಾಭಾವಿಕವಾಗಿತ್ತು. ಆದರೆ ಈತನೂ ನಾನು ಹೋಗುವಲ್ಲಿಗೇ ಅಕಸ್ಮಾತ್ತಾಗಿ ಹೋಗುತ್ತಿರಬಾರದಲ್ಲ! ಅದಕ್ಕಾಗಿಯೇ ಮುಂಜಾಗ್ರತೆ ವಹಿಸಿ "ನೀವೆಲ್ಲಿಗೆ ಹೋಗುವವರು?" ಎಂದು ಕೇಳಿದೆ.

"ನಾನೇ? ಬೇಸರ ಕಳೆಯಲೆಂದು ಇಲ್ಲಿಗ ಬಂದಿದ್ದೇನೆ. ನಾನಿರುವದು . . . ಊರಿನಲ್ಲಿ. ಎಲ್ಲಿಗೂ ಹೋಗುವ ಅವಸರ ನನಗಿಲ್ಲ. ನೀವೆಲ್ಲಿ ಇಳಿಯುತ್ತೀರಿ ಹೇಳಿ?" ಎಂದನಾತ. "ಮಾಂಬಳದಲ್ಲಿ ಇಳಿಸಿ" ಎಂದೆ.

"ಮಾಂಬಳಂ ಪೇಟೆಯ ಹತ್ತರ ಇಳಿಸಿದರೆ ಸಾಕು. ಮನೆಗೆ ಹೋಗುವ ಮೊದಲು ಕೆಲ ಸಾಮಾನು ಕೊಳ್ಳಬೇಕಾಗಿದೆ. ಮತ್ತೆ ಅಲ್ಲೊಬ್ಬ ಸ್ನೇಹಿತನನ್ನೂ ಕಾಣಬೇಕಾಗಿದೆ," ಎಂದೆ. ಇಳಿದ ಬಳಿಕ "ಓಹೋ! ಖಂಡಿತವಾಗಿಯೂ ನಾಳೆ ನಿಮ್ಮ ಹೋಟಲಿಗೆ ಬಂದು ನಿಮ್ಮನ್ನು ಕಾಣುತ್ತೇನೆ," ಎಂದು ವಚನವಿತ್ತು ಹೊರಟೆ.

ಕಿಸೆಗೆ ಕೈ ಹಾಕಿದಾಗ ಮನೆಗೆ ಇನ್ನೂ ಹತ್ತಿರವಾದ ಸ್ಥಳದಲ್ಲಿ ಇಳಿಸು ಎಂದಿದ್ದರೆ ಚನ್ನಾಗಿತ್ತು ಎನಿಸಿತು. ಕಿಸೆಯಲ್ಲಿ ಒಂದು ಕಾಲಾಣೆ ಕೂಡ ಇರಲಿಲ್ಲ. ಮನೆ ಇನ್ನೂ ಮೈಲು ದೂರವಿತ್ತು. ನಡೆಯುತ್ತಿದ್ದಾಗ ಹಿಂದಿನದೆಲ್ಲವನ್ನೂ ಜ್ಞಾಪಿಸಿಕೊಂಡೆ. ಈ ಕಾರಿನ ಮನುಷ್ಯನನ್ನು ನಾನು ನೋಡಿದ್ದು ಇದೇ ಮೊದಲು ಎಂಬುದರಲ್ಲಿ ನನಗೆ ಸಂದೇಹವೇ ಉಳಿಯಲಿಲ್ಲ.

ಆಗ ನನಗೆ ಒಂದು ವಿಚಾರ ಹೊಳೆದು ಎದೆ ಧಸ್ಸೆಂದಿತು. ಇರಬಹುದೇನು? ಕಾರು, ಹಣ ಎಲ್ಲವೂ ಲಭ್ಯವಿದ್ದು ನನಗಿಂತಲೂ ಅದೃಷ್ಟಶಾಲಿಯಾಗಿದ್ದ ಈ ಮನುಷ್ಯ ನನ್ನ 'ರಾಮಬಾಣ'ವನ್ನೇ ತುಸು ಬದಲಿಸಿಕೊಂಡು ನನ್ನಂತೆಯೆ ಕಾಯ್ದು ತಲೆಯನ್ನು ತಣ್ಣಗೆ ಮಾಡಿಕೊಳ್ಳಲು ಅದನ್ನೇ ಪ್ರಯೋಗಿಸುತ್ತಿರಬಹುದೇನು! ಎಲಾ!



**ತ್ಯಾವೊಲೆರಾತ್ಯೆಂಗ್ ತೋಂಗ್ ಅಂದರೇನು ?**

# ಇಂಥ ಭಾಷೆಗಳೂ ಇವೆ!

ಮನುಷ್ಯನೆಂದರೆ "ಬಡಬಡಿಸುವ ಪ್ರಾಣಿ" ಎಂದು ಒಂದು ಹೇಳಿಕೆಯಿದೆ. ಈ ವ್ಯಾಖ್ಯೆ ತೀರ ಸಮರ್ಪಕವಾಗಿದೆಯೆಂದು ಹೇಳಲು ಯಾವ ಆತಂಕವೂ ಕಾಣುವದಿಲ್ಲ. ಮನುಷ್ಯ ಜನ್ಮಿಸಿದೊಡನೆ ಅಳುವದರಿಂದ ಪ್ರಾರಂಭಿಸಿದ ಈ ಬಡಬಡಿಕೆಯು ಆತ ಸಾಯುವಾಗ "ರಾಮ ರಾಮ" ಎನ್ನುವ ವರೆಗೂ ವಿಶ್ರಾಂತಿಯಿಲ್ಲದೆ ನಡೆದೇ ಇರುತ್ತದೆ.

ಆದರೆ ಈ ಬಡಬಡಿಕೆಯ ರೂಪ ದೇಶ-ಕಾಲ ಪರಿಸ್ಥಿತಿಗನುಗುಣವಾಗಿ ವಿವಿಧ ಪ್ರಕಾರವಾಗಿರುತ್ತದೆ. ಈ ಪ್ರಕಾರಗಳಿಗೇ ಭಾಷೆ ಎಂಬ ಹೆಸರಿದೆ. ಪ್ರಾಚೀನ ಮಾನವನು ನಾನಾ ಶಬ್ದಗಳ ಮೂಲಕ ತನ್ನ ಭಾವನೆಯನ್ನು ವ್ಯಕ್ತಪಡಿಸ ತೊಡಗಿದನು. ಅದೇ ಮುಂದೆ ಭಾಷೆಯಾಗಿ ಬೆಳೆಯಿತು.

ಈ ರೀತಿಯಾಗಿ ಪ್ರತಿಯೊಂದು ಭಾಷೆಯ ಹಿಂದೆ ಸಹಸ್ರಾರು ವರ್ಷಗಳ ಇತಿಹಾಸವಿದೆಯೆನ್ನಬಹುದಾಗಿದೆ.

ಹನ್ನೆರಡು ಹರದಾರಿಯ ಮೇಲೆ ಭಾಷೆ ಬದಲಾಗುತ್ತದೆ ಎಂದೊಂದು ಉಕ್ತಿಯಿದೆ. ಅದರ ಪ್ರತ್ಯಯವು ಸಹಜವಾಗಿ ಎಲ್ಲೆಡೆಗಳಲ್ಲಿ ಕಂಡು ಬರುವದಾಗಿದೆ. ಕರ್ನಾಟಕದ ವಿಷಯವನ್ನೇ ನೋಡಿದಾಗ ಒಂದೊಂದು ಜಿಲ್ಹೆಯವರ ಮಾತಿನಲ್ಲಿ ಶಬ್ದ ಒಂದೇ ಇರುವಾಗ ಕೂಡ ಉಚ್ಚಾರದ ವ್ಯತ್ಯಾಸ ಕಂಡುಬರುವದು. ಎಷ್ಟೋ ಶಬ್ದಗಳು ಭಿನ್ನವಾಗಿಯೂ ಇವೆ. ಈ ಬದಿಯ ಮನುಷ್ಯನಿಗೆ ಆ ಬದಿಯವನ ಮಾತು, ಅವನು ಕನ್ನಡದಲ್ಲೇ ಮಾತನಾಡಿದರೂ, ಹಲವಾರು ಸಲ ಸರಿಯಾಗಿ ಅರ್ಥವಾಗುವದಿಲ್ಲ.

ಜಗತ್ತಿನಲ್ಲಿ ವಿವಿಧ ಭಾಷೆಗಳಿವೆ ಅವುಗಳ ವಿಚಾರವು ಮನೋರಂಜಕವೂ ಕುತೂಹಲಕಾರಿಯೂ ಆಗಿದೆ. ಅರಬ್ಬಿ ಭಾಷೆ ಸಾಧ್ಯವಾದ ಮಟ್ಟಿಗೂ ಕಾಲಾಂತರದಲ್ಲಿ ಕೂಡ ಬದಲಾವಣೆಗೆ ಒಪ್ಪದಂಥ ಭಾಷೆಯಾಗಿದೆ. ನ್ಯೂಗಿನಿಯಲ್ಲಿ ಭಾಷೆ ಪ್ರತಿ ವರ್ಷವೂ ತುಸು ಬದಲಾಗುತ್ತಲೇ ಇರುತ್ತದೆ. ಏಕೆಂದರೆ ಅಲ್ಲಿ ಶಬ್ದದ ಉತ್ಪಾದಕನು ಸತ್ತ ಬಳಿಕ ಅವನು ತಯಾರಿಸಿದ ಶಬ್ದಗಳು ನಿಷಿದ್ಧವಾಗುತ್ತವೆ! ಅವುಗಳ ಬದಲು ಹೊಸ ಶಬ್ದಗಳನ್ನು ಹುಟ್ಟಿಸಬೇಕಾಗುತ್ತದೆ.

ವ್ಯಾಕರಣವು ಸುಲಭವಾಗಿರುವ ಭಾಷೆಗೆ ಸರಳ ಭಾಷೆಯೆನ್ನುತ್ತಾರೆ. ಪುರಾತನ ಸ್ವರೂಪದಲ್ಲಿರುವ, ಅಂದರೆ ಅಭಿವೃದ್ಧಿ ಹೊಂದದಿರುವ ಭಾಷೆಗಳು ಸುಲಭವಾಗಿರುತ್ತವೆ ಎಂದೇನೂ

**'ಹೌ ಪೀಪಲ್ ಟಾಕ್' ಪುಸ್ತಕದಿಂದ**

ಇಲ್ಲ. ಚೀನಿ ಮತ್ತು ಇಂಗ್ಲಿಷ ಭಾಷೆಗಳ ವ್ಯಾಕರಣ ಸುಲಭವಿದೆ. ಆದರೆ ಅವೇನೂ ಬೆಳೆಯದ ಭಾಷೆಗಳಲ್ಲ. ಇಂದಿಗೂ ಕಾಡುಸ್ಥಿತಿಯಲ್ಲಿರುವ ಕೆಲ ಜನಾಂಗಗಳ ಭಾಷೆ ತೀರ ಗಡಚಾಗಿದೆ.

ಆಸ್ಟ್ರೇಲಿಯದ ಒಳಭಾಗದಲ್ಲಿಯ ಅರಾಂಟಾ ಸಮಾಜದ ಭಾಷೆ ಎಲ್ಲಕ್ಕೂ ಸುಲಭವೂ ಸರಳವೂ ಆದ ಭಾಷೆಯೆನ್ನಬಹುದು. ಈ ಭಾಷೆಯ ಶಬ್ದ ಭಾಂಡಾರ ೪೦೦ ರಿಂದ ೫೦೦ ಶಬ್ದಗಳದ್ದಿದೆ. ಹೀಗಿದ್ದರೂ ಈ ಸಮಾಜದ ಮಕ್ಕಳು ಇತರ ಭಾಷೆಗಳನ್ನು ಕಲಿಯುವದರಲ್ಲಿ ಅಮೇರಿಕನ್ ಮತ್ತು ಜಪಾನಿ ಮಕ್ಕಳಿಗೆ ಏನೇನೂ ಕಡಿಮೆಯವರಲ್ಲ

ಆಸ್ಟ್ರೇಲಿಯದ ಇತರ ಭಾಷೆಗಳೂ ಮನೋ-ರಂಜಕವಾಗಿವೆ. ಒಂದು ವಿಶಿಷ್ಟ ಪದಾರ್ಥಕ್ಕಾಗಿ ಅನೇಕ ಶಬ್ದಗಳು ಅವುಗಳಲ್ಲಿದ್ದರೂ ಸರ್ವಸಾಧಾರಣ ವಿಚಾರವನ್ನು ವ್ಯಕ್ತಮಾಡುವ ಒಂದು ಶಬ್ದವೂ ಸಿಗಲಾರದು. ಕಾಮಿಲ್‌ರೋಯಿಯಲ್ಲಿ ವಿವಿಧ ಪ್ರಕಾರದ ಸರ್ಪಗಳಿಗಾಗಿ ಹತ್ತು ಹನ್ನೆರಡು ಶಬ್ದಗಳಿದ್ದರೂ "ಸರ್ಪ" ಎಂಬ ಅರ್ಥಕೊಡುವ ಒಂದು ಶಬ್ದವೂ ಇಲ್ಲ. "ಸರ್ಪವನ್ನು ನೋಡಿದ್ದೀಯಾ?'' ಎಂದು ಅಲ್ಲಿಯ ನಿವಾಸಿಯನ್ನು ಕೇಳಿದರೆ ಅವನಿಗೇನೂ ಅರ್ಥವಾಗುವದಿಲ್ಲ. ಆದರೆ ನ್ಯೂರಾಯಿ (ಕರೀ ಸರ್ಪ) ವನ್ನು ನೋಡಿದ್ದೀಯಾ ಎಂದು ಕೇಳಿದರೆ ಅವನು ಕೂಡಲೆ ಉತ್ತರ ಕೊಡುವನು. ತೆಂಗಿನಕಾಯಿಗೆ ಅದು ಪಕ್ವವಾಗುವ ಅವಸ್ಥೆಗೆ ತಲು-ಪುವ ವರೆಗೆ ಒಂಬತ್ತು ಶಬ್ದಗಳಿವೆ. ಆದರೆ ತೆಂಗಿನಕಾಯಿ ಎಂಬ ಸಾಮಾನ್ಯ ಅರ್ಥದ ಶಬ್ದವೇ ಇಲ್ಲ.

ಅಂದಮಾನ ನಡುಗಡ್ಡೆಯ ಜನರಲ್ಲಿ ಸುಮಾರು ೧೨ ಭಾಷೆಗಳಿದ್ದು ಅವೂ ಇದೇ ಬಗೆಯಾಗಿವೆ. ಶರೀರದಲ್ಲಿ ಏಳು ವಿಭಾಗಗಳನ್ನು ಮಾಡಿ ಅವುಗಳಲ್ಲಿ ಯಾವುದಾದರೊಂದು ವಿಭಾಗಕ್ಕೆ ಪ್ರತ್ಯೇಕ ಹೆಸರು ಕೊಡಲಾಗಿದೆ.

"ಒಟ್-ಕೋ" ಅಂದರೆ ತಲೆ

"ಟ್-ಒಟ್-ಕೋ" ಅಂದರೆ ನನ್ನ ತಲೆ.

"ಇರಾ" ಇದು ಟೊಂಕದ ಕೆಳಗಿನ ಶರೀರದ ಹೆಸರಾಗಿದೆ. ಟೊಂಕದ ಕೆಳಗಿನ ಯಾವ ಅವಯವದ ನಿರ್ದೇಶ ಮಾಡುವದಾದರೂ ಇರಾ ಬಂದೇಬರುತ್ತದೆ.

ಫಿಜಿ ನಡುಗಡ್ಡೆಯ ಜನರ ಭಾಷೆ ಚಮತ್ಕಾರವಾಗಿದೆ. ಫಿಜಿ ಮನುಷ್ಯನು ಮಾತನಾಡುವಾಗ ತನ್ನ ಮಾತು ಶ್ರವಣೀಯವಾಗಲೆಂದು ಮುಖ್ಯ ವಾಕ್ಯದೊಂದಿಗೆ ಇತರ ಅರ್ಥಶೂನ್ಯ ವಾಕ್ಯಗಳ ಇಲ್ಲವೆ ಶಬ್ದಗಳ ಸರಪಳಿ ಜೋಡಿಸುವನು. ಮತ್ತು ಈ ಭಾಷೆಯಲ್ಲಿ ಪ್ರತ್ಯೇಕ ಸಂಖ್ಯಾವಾಚಕ ಶಬ್ದಗಳಿಲ್ಲ. ಸಂಖ್ಯಾವಾಚಕ ಶಬ್ದಗಳು ಒಂದರಲ್ಲೊಂದು ಅಡಕವಾಗಿರುತ್ತವೆ.

"ಬುರು" ಅಂದರೆ ಹತ್ತು ಟೆಂಗಿನಕಾಯಿಗಳು.

"ಸೆಲಾವೊ" ಅಂದರೆ ನೂರು ಟೆಂಗಿನಕಾಯಿಗಳು

ಈ ಭಾಷೆಗೆ ಹೋಲಿಸಿದಾಗ ಮಲಯಿ ಭಾಷೆ ಸರಳವೆನ್ನಬಹುದು. ಅದರಲ್ಲಿ ವ್ಯಾಕರಣ ಬಹು ಸ್ವಲ್ಪ ಇದ್ದು ವಾಕ್ಯರಚನೆಯಲ್ಲಿ ಬಹುಶಃ ಕರ್ತೃ, ಕರ್ಮ, ಕ್ರಿಯಾಪದ ಇಷ್ಟೇ ಇರುತ್ತವೆ. ಸುಲಭ ಭಾಷೆಗಳಲ್ಲಿರುವಂತೆ ಇದರಲ್ಲೂ ಕೆಲವು ವಿಶಿಷ್ಟ ಶಬ್ದಗಳಿವೆ. ಎತ್ತಿಕೊಂಡು ಒಯ್ಯುವದು, ಬುಟ್ಟಿಯಲ್ಲಿ ಒಯ್ಯುವದು ಮತ್ತಿನ್ನಿತರ ಇದೇ ಅರ್ಥ ಸೂಚಿಸಲು ಒಟ್ಟು ೧೮ ಶಬ್ದಗಳಿವೆ. ಬಾರಿಸು, ಅಪ್ಪಳಿಸು ಎಂಬರ್ಥ ಕೊಡುವ ೧೫ ಶಬ್ದಗಳಿದ್ದು ಚಿಪ್ಪಾಳೆಯಿಂದ ಹಿಡಿದು ಡೋಲು ಬಾರಿಸುವವರೆಗಿನ ವಿವಿಧ ಶಬ್ದಗಳು ಈ ೧೫ ಶಬ್ದಗಳಲ್ಲಿ ಸಮಾವಿಷ್ಟವಾಗಿವೆ.

"ಸಹಾಯಾ"—ಗುಲಾಮ, "ತುವಾನ್"—ಒಡೆಯ ಎಂಬ ಮಲಯಿ ಭಾಷೆಯ ಶಬ್ದಗಳ ಮೂಲ ಅರ್ಥ ಈಗ ನಷ್ಟವಾಗಿದ್ದು ಅವನ್ನು ನಾನು ಮತ್ತು ನೀವು ಎಂಬ ಸರ್ವನಾಮಗಳಾಗಿ ಉಪಯೋಗಿಸಲಾಗಿಸುತ್ತಿದೆ. ಮಲಯಿ ಜನರ ಸಂಭಾಷಣೆಯು ಸುತ್ತು ಹಾಕಿ ಮಾತಾಡುವ ಮಾದರಿಯಲ್ಲಿರುತ್ತದೆ. ''ನನ್ನ ಎಮ್ಮೆಯ ಕಾಳಜಿ

ಯನ್ನು ಸರಿಯಾಗಿ ತೆಗೆದುಕೊಳ್ಳದಿದ್ದರೆ ನಿನ್ನನ್ನು ಬಡಿದೇನು," ಎಂದು ಮಲಯಿ ಮನುಷ್ಯ ನೇರವಾಗಿ ತನ್ನ ಆಳಿಗೆ ಹೇಳುವದಿಲ್ಲ. ಅದರ ಬದಲು ಆಳಿಗೆ ಕೇಳಿಸುವ ರೀತಿಯಲ್ಲಿ ತನ್ನಷ್ಟಕ್ಕೆ "ಇಂಥವನು ಎಮ್ಮೆಯ ಕಾಳಜಿ ತೆಗೆದುಕೊಳ್ಳದಿದ್ದರೆ ಯಾರಾದರೂ ಅವನನ್ನು ಹೊಡೆಯುವದು ಯೋಗ್ಯವಾದೀತು," ಎನ್ನುತ್ತಾನೆ

ನಾವು 'ಚ್ಚುಚ್ಚು' ಎಂದೋ ಇನ್ನಿತರ ನಾನಾ ಶಬ್ದಗಳನ್ನು ಮಾಡಿಯೋ ನಮ್ಮ ಭಾವನೆಗಳನ್ನು ವ್ಯಕ್ತಪಡಿಸುತ್ತೇವೆ. ಆಫ್ರಿಕೆಯ ಒಂದು ಪಂಗಡದವರಲ್ಲಿ ಇನ್ನೂ ಕೇವಲ ಅನುಕರಣಶಬ್ದಗಳ ಮೂಲಕ ವಿಚಾರಗಳನ್ನು ವ್ಯಕ್ತಪಡಿಸುವ ಭಾಷೆ ಇದೆ. ಇವರು ನಾಲಿಗೆಯ ಸಹಾಯದಿಂದ ಗಾಳಿಯನ್ನು ಒಳಗೆಳೆದುಕೊಂಡು ವಿವಿಧ ಪ್ರಕಾರದ ಸದ್ದುಗಳನ್ನು ಹೊರಡಿಸಿ ಆ ಮೂಲಕ ತಮ್ಮ ವಿಚಾರಗಳನ್ನು ಪ್ರಕಟಿಸುತ್ತಾರೆ.

ಆಫ್ರಿಕೆಯ 'ಫಲ' ಭಾಷೆ ಸ್ವಾರಸ್ಯದ್ದಾಗಿದೆ. ಇತರ ಅನೇಕ ಭಾಷೆಗಳಲ್ಲಿರುವದನ್ನೆಲ್ಲ ಈ ಭಾಷೆಯಲ್ಲಿ ಕಾಣಬಹುದು. ನಾಮಗಳ, ವಿಶೇಷಣಗಳ ಉಚ್ಚಾರದ ೨೦ ಬಗೆಗಳು, ೧೨ ವಿಭಕ್ತಿಗಳು, ೪ ಬಹುವಚನಗಳು ಈ ಭಾಷೆಯಲ್ಲಿವೆ. ಈ ಭಾಷೆಯಲ್ಲಿ "ನಾನು ನಿನ್ನನ್ನು ಕೊಲ್ಲುವೆನು" ಎಂದು ಏರುದನಿಯಲ್ಲಿ ಹೇಳಿದರೆ "ನಾನು ನಿನ್ನನ್ನು ಕೊಲ್ಲುವದಿಲ್ಲ" ಎಂದು ಅರ್ಥವಾಗುವದು!

ಎಸ್ಕಿಮೊ ಜನರು ಒಂದೇ ಶಬ್ದದಲ್ಲಿ ಇಡೀ ವಾಕ್ಯದ ಸಂದರ್ಭವನ್ನು ತರಬಲ್ಲರು. ವಾಕ್ಯಪೂರ್ತಿಗಾಗಿ ಬೇಕಾಗುವ ಕ್ರಿಯಾಪದ ಅವರ ಭಾಷೆಯಲ್ಲಿ ಇಲ್ಲ. ಇತರರಿಗೆ ಈ ಭಾಷೆಯನ್ನರಿಯುವದು ಬಹು ಕಠಿಣವಾಗುವದು. ಶಬ್ದಕ್ಕೆ ಶಬ್ದ ಜೋಡಿಸಿ ಇವರ ಭಾಷೆ ಒಂದು ರೇಲ್ವೆ ಗಾಡಿಯನ್ನೆ ತಯಾರಿಸುತ್ತದೆ. **Tkaolerataingtog** ಎಂಬ ಶಬ್ದದ ಅರ್ಥ "ಬಹಳ ಹೊತ್ತು ಹುಡುಕಿದ ನಂತರ ಅವನಿಗೆ ಅದು ಸಿಕ್ಕಿತು" ಎಂದಾಗುತ್ತದೆ. ಇವರ ಭಾಷೆ ಕಲಿಯಲು ಇಡೀ ಆಯುಷ್ಯವನ್ನೆ ಮೀಸಲಾಗಿಡಬೇಕಾದೀತು.

---

## ನಿಮ್ಮ ಕನ್ನಡ ಭಾಷೆಯ ಬಗ್ಗೆ ನಿಮಗೆಷ್ಟು ಗೊತ್ತಿದೆ ?

ಅಚ್ಚಗನ್ನಡ ಶಬ್ದಗಳೆಂದು ನಾವು ಅನೇಕ ಶಬ್ದಗಳನ್ನು ನಿತ್ಯವ್ಯವಹಾರದಲ್ಲಿ ಉಪಯೋಗಿಸುತ್ತೇವೆ. ಆದರೆ ಆ ಶಬ್ದಗಳು (ಕೆಲವು) ಅಚ್ಚಗನ್ನಡವಾಗಿರದೆ ಬೇರೆ ಬೇರೆ ಭಾಷೆಗಳ ಶಬ್ದಗಳಾಗಿವೆ. ಕೆಳಗೆ ಕೊಟ್ಟ ಈ ಶಬ್ದಗಳು ಅಚ್ಚಗನ್ನಡವಾಗಿರದೇ ಉರ್ದು ಶಬ್ದಗಳಾಗಿವೆ. ಅವುಗಳ ಮುಂದೆ ಅವುಗಳ ಮೂಲರೂಪಗಳನ್ನು ಕೊಟ್ಟಿದೆ :

| | | | | | |
|---|---|---|---|---|---|
| ಸಲಹೆ | .. | ಸಲಾಹ್ | ಆಸಾಮಿ | .. | ಆಸಾಮೀ |
| ರೈತ | .. | ರಇಯತ್ | ಖರ್ಚು | .. | ಖರ್ಚ |
| ಸುಮಾರು | .. | ಷುಮಾರ್ | ಹಾಸಲು | .. | ಹಾಸಲ್ |
| ಶಹರ | .. | ಷಹರ್ | ಮೇಜವಾನೀ | .. | ಮೇಜಬಾನೀ |
| ಪರಿವೆ | .. | ಪರವಾಹ್ | | | ಇತ್ಯಾದಿಗಳು. |

ಇದರಂತೆ ನಾವು ಉಪಯೋಗಿಸುವ ಪಗಾರ, ಚಾವಿ, ಅನಾನಸ, ಲಿಲಾವ, ಬಟಾಟೆ ಇತ್ಯಾದಿ ಶಬ್ದಗಳು ಕನ್ನಡದವು ಆಗಿರದೇ ಪೋರ್ತುಗೀಝು ಭಾಷೆಯಿಂದ ಕನ್ನಡಕ್ಕೆ ಬಂದಿವೆ.

ಹಾಗೂ ಕಂಟ್ರಾಟ, ಬಾಟಲಿ, ಮಾಸ್ತರ, ಲಾಂದ್ರ ಇತ್ಯಾದಿ ಅನೇಕ ಶಬ್ದಗಳು ಕನ್ನಡದವು ಆಗಿರದೇ ಇಂಗ್ಲೀಷದವು ಆಗಿವೆ.

( ಶಂ. ಬಾ. ಜೋಶಿಯವರ "ಕನ್ನಡ ನುಡಿಯ ಹುಟ್ಟು" ನಿಂದ )

ಕಳಿಸಿದವರು : ಕೇಯಾರೆಸ್, ಹುಬ್ಬಳ್ಳಿ

# ಇದು ನಮ್ಮ ಭಾರತ

ಸತ್ತವರು ತಿರುಗಿ ಬರುತ್ತಾರೆಯೆ ? ಎಂಬ ಪ್ರಶ್ನೆಯನ್ನು ಮೈಸೂರು ವಿದ್ಯಾಖಾತೆಯು ಈಗ ಉತ್ತರಿಸಬೇಕಾಗಿದೆ. ಯಾಕಂದರೆ ಸತ್ತ ಮನುಷ್ಯನನ್ನು ಅದು ಬಾಗೇಪಲ್ಲಿ ರೇಂಜ್ ಶಾಲಾ ಇನಸ್ಪೆಕ್ಟರ ಪದವಿಗೆ ವರ್ಗಾಯಿಸಿದೆ ಯೆಂಬ ಸಂಗತಿ ಬೆಳಕಿಗೆ ಬಂದಿದೆ.

ಶ್ರೀನಿವಾಸಪುರ ಮಿಡಲ್ ಸ್ಕೂಲಿನ ಹೆಡ್ಮಾಸ್ತರರಾಗಿದ್ದ ಎಚ್. ಎಸ್. ಸುಬ್ಬರಾಯರೆಂಬವರೇ ಈ ಮರಣೋತ್ತರ ಬಡತಿಗೆ ಪಾತ್ರರಾದವರು. ಅವರು ಕಳೆದ ಜನೆವರಿಯಲ್ಲೇ ೩೪ ನೇ ವಯಸ್ಸಿನಲ್ಲಿ ಕ್ಷಯರೋಗದಿಂದ ಮರಣಹೊಂದಿದ್ದರು. ಆದರೆ ಸದ್ಯದ ಬಾಗೇಪಲ್ಲಿ ಇನಸ್ಪೆಕ್ಟರರಾದ ಶ್ರೀ ದಾಮೋದರನ್ನರನ್ನು ಕೋಲಾರ ಗಣಿ ಪ್ರದೇಶಕ್ಕೆ ವರ್ಗಾಯಿಸಿ ಆ ಸುಬ್ಬರಾಯರನ್ನು ಅವರ ಸ್ಥಳಕ್ಕೆ ವರ್ಗಾಯಿಸುವ ಆಜ್ಞೆ ಇದೀಗ ಹೊರಟಿದೆ.

—ದಖ್ಖನ ಹೆರಾಲ್ಡ

ಪರೀಕ್ಷೆಗಳಲ್ಲಿ ಅನುತ್ತೀರ್ಣರಾಗುವುದೆಂದರೆ ನೀತಿಭ್ರಷ್ಟತೆಯಲ್ಲೆಂದು ವಿದ್ಯಾರ್ಥಿಗಳಿಗೆ ನೆನಪು ಮಾಡಿಕೊಡಬೇಕಾಗಿದೆ. ಈ ಭ್ರಾಮಕ ಕಲ್ಪನೆಯ ವೇದಿಕೆಯ ಮೇಲೆ ಪ್ರತಿ ವರ್ಷ ಅನೇಕ ಅಮೂಲ್ಯ ಜೀವಗಳು ಬಲಿಯಾಗುತ್ತಿವೆ. ಉತ್ತೀರ್ಣರ ಯಾದಿಯಲ್ಲಿ ತನ್ನ ಹೆಸರು ಕಾಣಿಸಲಿಲ್ಲೆಂದು ದೆಹರಾದೂನದಲ್ಲಿ ಒಬ್ಬ ವಿದ್ಯಾರ್ಥಿ ಓಡುತ್ತಿರುವ ರೇಲುಗಾಡಿಯ ಮುಂದೆ ಹಾರಿಕೊಂಡನು. ಇದಾದ ಮೂರನೇ ದಿನ ಪರಿಶಿಷ್ಟ ಯಾದಿಯಲ್ಲಿ ಅವನ ಹೆಸರು ಮೊದಲನೇ ವರ್ಗದಲ್ಲಿ ಪಾಸಾದನೆಂದು ಪ್ರಕಟವಾಯಿತು. ಕಳೆದ ವರ್ಷ ನಪಾಸಾದ ವಿದ್ಯಾರ್ಥಿಯೊಬ್ಬನನ್ನು ತಂದೆಯು ಕ್ರೂರವಾಗಿ ನಡೆಸಿಕೊಂಡದ್ದರಿಂದ ಅವನು ತಂದೆಗೆ ಗುಂಡು ಹಾಕಿದನು. ನಪಾಸಾಗುವದೊಂದು ಪಾಪವೆಂದು ನಾವು ಯಾಕೆ ಭಾವಿಸಬೇಕು ?

" ಹಿಂದುಸ್ತಾನ ಟೈಮ್ಸ್"ನಲ್ಲಿ ಒಂದು ಪತ್ರ.

ಬಿಹಾರದ ಮೈಥಿಲೀ ಬ್ರಾಹ್ಮಣರಲ್ಲಿ ವಿವಾಹಗಳನ್ನು ಹೊಂದಿಸಿ ಜರಗಿಸುವ ಅವಸರದ ಉಪಾಯವೊಂದಿದೆ. ಮಾವಿನ ತೋಪೊಂದರಲ್ಲಿ ಈ ವರ್ಷ ಮೇ ತಿಂಗಳಲ್ಲಿ ಒಂದೇ ಒಂದು ವಾರದಲ್ಲಿ ಹೀಗೆ ೩,೦೦೦ ವಿವಾಹಗಳು ಹೊಂದಿಸಲ್ಪಟ್ಟು ಕೂಡಲೇ ಜರಗಿದವು.

ದರಭಂಗಾ ಜಿಲ್ಲೆಯ ಮಧುಬನಿಯಿಂದ ೪॥ ಮೈಲು ದೂರದಲ್ಲಿ ಸೌರಠ ಎಂಬ ಊರಿದೆ. ಅಲ್ಲಿನ ಒಂದು ದೊಡ್ಡ ಸರೋವರದ ತೀರದ ಮಾವಿನ ತೋಪಿನಲ್ಲಿ ಸೌರಠ ಸಭಾ ಎಂಬ ವಿವಾಹ ಜಾತ್ರೆ ಪ್ರತಿವರ್ಷ ಕೂಡುತ್ತದೆ.

ಈ ಸಭೆಯಲ್ಲಿ ಪಂಜೀಕಾರರೆಂಬ ಆ ಸಭೆಯ ಜೋಯಿಸರು ಸಾಮೂಹಿಕ ಪ್ರಮಾಣದಲ್ಲಿ ಮದುವೆಗಳನ್ನು ಹೊಂದಿಸುವರು. ಭಾವೀ ವಧೂವರರು ಸಗೋತ್ರದವರಾಗಲಿ ನಿಷಿದ್ಧ ರಕ್ತಸಂಬಂಧಿಕರಾಗಲಿ ಅಲ್ಲವೆಂದಷ್ಟು ಖಾತ್ರಿ ಮಾಡಿಕೊಂಡು ಅವರು ವಿವಾಹಗಳಿಗೆ ಅನುಜ್ಞೆ ಕೊಟ್ಟುಬಿಡುತ್ತಾರೆ. ಅನುಜ್ಞೆ ದೊರೆತಾಕ್ಷಣ ವರನನ್ನು ವಧುವಿನ ಕಡೆಯವರು ತಮ್ಮ ಮನೆಗೆ ಕರೆದೊಯ್ದು ಅಂದೇ ರಾತ್ರಿ ವಿವಾಹ ನೆರವೇರಿಸಿಬಿಡುತ್ತಾರೆ.

—ಯು. ಪ್ರೆ ಸುದ್ದಿ.

# ದೊಡ್ಡವರ ಬಗ್ಗೆ ಸಣ್ಣ ಕತೆಗಳು

## ಏನೂ ತಿಳಿಯದ ಗಾಂಧಿ

ಒಮ್ಮೆ ಚಿಕ್ಕ ಬಾಲಕನೊಬ್ಬ ಗಾಂಧೀಜಿಯವರ ಕೈಹಿಡಿದುಕೊಂಡು ನಡೆದಿದ್ದ. ಹಾದಿಯಲ್ಲಿ ಒಂದು ಹೂವನ್ನು ಕಂಡು ಹುಡುಗ ಹಿಗ್ಗಿ "ಬಾಪೂಜಿ! ನೋಡಿದಿರಾ, ಎಷ್ಟು ಚಂದ ಹೂವು" ಎಂದ.

ಬಾಪೂಜಿ ಮುಗುಳ್ನಗು ನಗುತ್ತ "ಹೌದು. ಬಹಳ ಚಂದವಿದೆ ಹೂವು" ಎಂದರು.

ಅಷ್ಟರಲ್ಲಿ ಎದುರಿಗೆ ಒಂದು ನಾಯಿ ಓಡಿ ಹೋಯಿತು. ಹುಡುಗ ಅದರ ಬಾಲವನ್ನು ಬೊಟ್ಟು ಮಾಡಿ ತೋರಿಸುತ್ತ "ಬಾಪೂಜಿ, ನಾಯಿಗೆ ಬಾಲವಿದೆ" ಎಂದ.

ಬಾಪೂಜಿ ಮಕ್ಕಳಂತೆ ನಿಷ್ಕಲಂಕ ಭಾವದಲ್ಲಿ "ಹಂ! ನಾಯಿಗೆ ಬಾಲವೇ?" ಎಂದರು.

ಹುಡುಗ ಆಶ್ಚರ್ಯದಿಂದ ಅವರ ಮುಖ ಪಿಳಿಪಿಳಿ ನೋಡತೊಡಗಿದ.

ಗಾಂಧೀಜಿ ಮತ್ತೆ "ಮತ್ತೆ ನಿನಗೂ ಬಾಲವಿದೆಯೇನು?" ಎಂದು ಕೇಳಿದರು.

ಹುಡುಗ ಗಹಗಹಿಸಿ ನಗುತ್ತ ಹೇಳಿದ, "ಬಾಪೂಜಿ, ಇಷ್ಟು ದೊಡ್ಡ ಮನುಷ್ಯರಾಗಿದ್ದರೂ ನಿಮಗೆ ಮನುಷ್ಯರಿಗೆ ಬಾಲವಿರುವದಿಲ್ಲ ಎಂಬುದು ಗೊತ್ತಿಲ್ಲವೆ? ಥತ್! ನಿಮಗೆ ಏನೇನೂ ಬರುವದಿಲ್ಲ."

## ಬಾಯಿ ಮತ್ತು ಕಾಲಿನ ರೋಗ

ಅಮೇರಿಕೆಯ ತರುಣಿಯೋರ್ವಳು ಒಮ್ಮೆ ನೆಹರೂರೊಡನೆ ಮಾತಾಡುತ್ತ "ನಿಮ್ಮ ದೊಡ್ಡಸ್ತಿಕೆಯ ಚರ್ಚೆ ಜಗತ್ತಿನ ನಾಲ್ಕೂ ಮೂಲೆಗಳಲ್ಲಿ ಆಗುತ್ತಿದೆ" ಎಂದಳು.

"ಆಂ! ಬಹಳ ಭಯಂಕರ ವಾರ್ತೆಯಿದು" ಎಂದರು ನೆಹರು.

ತರುಣಿ ಸುಮ್ಮನಾದಳು ಮತ್ತೆ ಅದು ಇದು ಮಾತನಾಡುತ್ತ "ರೇಡಿಯೋ, ಟೆಲಿವಿಜನ್ ಮೊದಲಾದವುಗಳಲ್ಲಿ ನಿಮ್ಮನ್ನು ಇನ್ನೂ ಅನೇಕ ಸಲ ನೋಡಬೇಕು, ನಿಮ್ಮ ಮಾತು ಕೇಳಬೇಕು ಎಂದು ಬಯಸುತ್ತೇನೆ" ಎಂದಳು.

ನೆಹರೂ ಮಂದಹಾಸ ಬೀರುತ್ತ ಹೇಳಿದರು, "ನಿಮಗೆ ಗೊತ್ತಿರಲಿಕ್ಕಿಲ್ಲ, ನನ್ನೊಬ್ಬ ಮಿತ್ರರು ನನಗೆ ಬಾಯಿ ಮತ್ತು ಕಾಲಿನ ರೋಗವಿದೆಯೆಂದಿದ್ದಾರೆ. ಹಗಲೆಲ್ಲ ಪಿರಿಪಿರಿ ತಿರುಗುವದು, ಬಾಯಿತುಂಬ ಮಾತಾಡುವದು ಮಾಡುತ್ತಿರುತ್ತೇನೆ."

ಮತ್ತೆ ಕೃತ್ರಿಮ ಗಂಭೀರತೆಯನ್ನು ಮುಖದಲ್ಲಿ ತಂದುಕೊಂಡು "ನನ್ನ ಈ ರೋಗ ಇನ್ನೂ ಹೆಚ್ಚದಿರಲಿ ಎಂದು ನೀವು ದೇವರಲ್ಲಿ ಬೇಡಿಕೊಳ್ಳಬೇಕು ಎಂದು ನಾನು ಬಯಸುತ್ತೇನೆ' ಎಂದರು.

## ಶತ್ರುನಾಶ!

ಶತ್ರುಗಳ ಮೇಲೆ ಅಬ್ರಹಾಂ ಲಿಂಕನ್ನನು ತೋರುವ ಔದಾರ್ಯ ಮನಸ್ಸಿಗೆ ಬಾರದೆ ಒಬ್ಬ ಮಿತ್ರ ಅವನಿಗೆ ಕೇಳಿದನು: "ಅವರ ಗೆಳೆತನಕ್ಕಾಗಿ ನೀನು ಯಾಕಿಷ್ಟು ಚಡಪಡಿಸುತ್ತಿ? ಅವರನ್ನು ನಿರ್ನಾಮ ಮಾಡಿಬಿಡಬೇಕು."

ಲಿಂಕನ್ನನ ಮಾರುತ್ತರ ಮಾರ್ಮಿಕವಾಗಿತ್ತು. "ಅವರನ್ನು ಮಿತ್ರರಾಗಿ ಮಾಡಿಕೊಂಡರೆ ಶತ್ರುಗಳನ್ನು ನಿರ್ನಾಮ ಮಾಡಿದಂತೆಯೇ ಆಗಲಿಲ್ಲವೆ?"

## ಲಿಪ್ಟನ್ ಮತ್ತು ಪೋಲೀಸ

" ಲಿಪ್ಟನ್ ಚಹಾ '' ಕೇಳಿದ್ದೀರಲ್ಲ.

ಚಹದ ಮೂಲಕ ಜಗತ್ಪ್ರಸಿದ್ಧಿ ಪಡೆದ ಲಿಪ್ಟನ್ ಒಮ್ಮೆ ಗ್ಲಾಸಗೋ ಶಹರದಲ್ಲಿದ್ದಾಗ ಒಂದು ದಿನ ರಾತ್ರಿ ಶಹರದಲ್ಲಿ ಅಡ್ಡಾಡಿ ಬರಲು ಹೊರಟರು. ಒಂದು ಅಡ್ಡ ರಸ್ತೆಯಲ್ಲಿ ಕಳ್ಳನೊಬ್ಬ ಅಂಗಡಿಯ ಬಾಗಿಲಿನ ಬೀಗ ಒಡೆಯುತ್ತಿರುವದು ಅವರ ಕಣ್ಣಿಗೆ ಬಿತ್ತು. ಲಿಪ್ಟನ್ ತಡಮಾಡಲಿಲ್ಲ. ಕಳ್ಳನೆದುರು ಹೋಗಿ ನಿಂತು ಪಿಸ್ತೂಲು ತೋರಿಸಿ, '' ಏಳಿಲ್ಲಿಂದ. ಇಲ್ಲವಾದರೆ ಗುಂಡಿಕ್ಕಿಕೊಂದೇನು, '' ಎಂದು ಗದರಿಸಿದರು.

ಕಳ್ಳ ಗಾಬರಿಯಾಗಿ ನ್ಯೆಬೆವತ. ಲಿಪ್ಟನ್ನರು ಅವನನ್ನು ಠಾಣೆಗೆ ಕರೆದೊಯ್ದು ಪೋಲೀಸರ ಸ್ವಾಧೀನಕ್ಕೆ ಕೊಟ್ಟರು. ಪೋಲೀಸ ಅಧಿಕಾರಿ ಎಲ್ಲವನ್ನೂ ಕೇಳಿಕೊಂಡು " ರಾಯರೆ, ನಿಮ್ಮ ಹತ್ತಿರ ಪಿಸ್ತೂಲು ಇಟ್ಟುಕೊಳ್ಳುವ ಲಾಯಸನ್ಸ ಇದೆಯೆ ? '' ಎಂದು ಕೇಳಿದ.

" ಇಲ್ಲ. ''

" ಹಾಗಾದರೆ ನಿಮ್ಮ ಪಿಸ್ತೂಲನ್ನು ಇಲ್ಲಿ ಕೊಡಿ. "

ಲಿಪ್ಟನ್ ಸಾಹೇಬರು ತಮ್ಮ ಕಿಸೆಯೊಳಗಿಂದ ತಂಬಾಕು ಸೇದುವ ಪಾಯಿಪನ್ನು ತೆಗೆದು ಪೋಲೀಸನ ಕೈಗಿತ್ತರು.



## ರಾಮದಾಸರು ಕಲಿಸಿದ ಪಾಠ

ಕೊಲ್ಹಾಪುರ ವಿಭಾಗದಲ್ಲಿ ಶಿವಾಜಿ ಮಹಾರಾಜ ಸಮನಗಡ ಕೋಟೆ ಕಟ್ಟಿಸುತ್ತಿದ್ದಾಗಿನ ಕಥೆ. ಸಾವಿರಾರು ಜನರು ದುಡಿಯುತ್ತಿದ್ದರು. ಇವರಿಗೆಲ್ಲ ಕೆಲಸ ಒದಗಿಸುತ್ತಿರುವೆನಲ್ಲ ಎಂದು ಹೆಮ್ಮೆಯಿಂದ ನೋಡುತ್ತ ನಿಂತಿದ್ದ ಛತ್ರಪತಿ ಶಿವಾಜಿ.

ಆಗ ರಾಮದಾಸ ಸ್ವಾಮಿಗಳು ಆ ದಾರಿಯಾಗಿ ಬಂದರು. ಶಿವಾಜಿ ಅವರಿಗೆರಗಿ ಎದ್ದು ಅವರೊಡನೆ ನಡೆಯತೊಡಗಿದ. ಅಲ್ಲೇ ಒಂದು ಬಂಡೆಗಲ್ಲು ಇತ್ತು. ರಾಮದಾಸರು ಕಲ್ಲುಕುಟಿಗರನ್ನು ಕರೆದು ಅದನ್ನು ಒಡೆಯುಹೇಳಿದರು.

ಬಂಡೆಯನ್ನೊಡೆದೊಡನೆ ಅದರೊಳಗಿನ ಪೊಟರೆಯಿಂದ ಒಂದು ಕಪ್ಪೆ ಟಣ್ಣನೆ ಜಿಗಿಯಿತು. ಪೊಟರೆಯಲ್ಲಿ ನೀರು ಇತ್ತು. ರಾಮದಾಸರಂದರು : " ಛತ್ರಪತಿ, ನೀನೆಂಥ ಉದಾರ. ಕಪ್ಪೆಗೆ ಜೀವನವಾಗಬೇಕೆಂದು ಕಲ್ಲಿನೊಳಗೂ ನೀರಿಟ್ಟಿದ್ದೀಯಲ್ಲಾ. ಮಹಾತ್ಮ ನೀನು. "

ಶಿವಾಜಿಗೆ ಅರ್ಥವಾಗಲಿಲ್ಲ. " ಕಲ್ಲಿನೊಳಗೆ ನೀರಿಟ್ಟವ ನಾನಲ್ಲ'' ಎಂದನಾತ. ಆದರೆ ಸಮರ್ಥ ರಾಮದಾಸರು " ನೀನೇ ಇಟ್ಟಿರಬೇಕು '' ಎಂದು ಹಟ ತೊಟ್ಟರು. ಆಗ ಶಿವಾಜಿಗೆ ಅರ್ಥವಾಯಿತು. ತನ್ನ ದುರಹಂಕಾರಕ್ಕೆ ನಾಚಿಕೊಂಡು, ಕೋಟೆ ಕಟ್ಟುವ ಕೂಲಿಕಾರರ ಹೊಟ್ಟೆ ಹೊರೆಯುವವ ತಾನಲ್ಲ, ಪರಮಾತ್ಮ ಎಂದು ಅವನು ವಿನಯದಿಂದ ಒಪ್ಪಿಕೊಂಡ.

ಒಂದು ಚೆಕ್ ಕತೆ

# ಸೆಲ್ವಿನನ ಪ್ರಕರಣ

ಮೂಲ : ಕಾರ್ಲ್ ಕಪೇಕ




" ಹಾಂ, ನನ್ನ ಜೀವನದ ಅತ್ಯುನ್ನತ ಸಾಫಲ್ಯ, ಅರ್ಥಾತ್ ಅತ್ಯಂತ ಆನಂದ ದಾಯಕವಾದ ಸಂಗತಿಯೆಂದರೆ– "

ಕವಿ-ನಾಟಕಕಾರರಾಗಿ, ನೋಬೆಲ್ ಪಾರಿತೋಷಕ ಪಡೆದು ಜಗತ್ಪ್ರಸಿದ್ಧರೆನಿಸಿದ ವೃದ್ಧ ಸಾಹಿತಿ ಲಿಯೋನಾರ್ಡ್ ಆಂಡೇನರು ತಮ್ಮ ಗತಕಾಲದ ನೆನಪುಗಳನ್ನು ಮೆಲುಕುಹಾಕುತ್ತ ಹೇಳಿದರು. ಅವರು ಹೇಳಿದ ಕಥೆ ಇದು :

ತರುಣ ಬಂಧುಗಳೇ, ಕೀರ್ತಿಯ ಜಯಮಾಲೆ, ಜನಪ್ರಿಯತೆ, ನಾರಿಯ ಪ್ರೇಮ ಮತ್ತು ಈ ಜಗತ್ತಿನ ಇತರ ಹುಚ್ಚಾಟಗಳ ಆಕರ್ಷಣೆ ಈ ವಯಸ್ಸಿನಲ್ಲಿ ಏನೇನೂ ಉಳಿಯುವುದಿಲ್ಲ. ಇವುಗಳನ್ನು ಮನುಷ್ಯರು ಸವಿಯಬೇಕಾದ್ದು ಯೌವನದಲ್ಲಿ. ಆಗ ಭೋಗಿಸದೆ ಬಿಡುವವರು ಶುದ್ಧ ಮೂಢರು. ಆದರೆ ಯೌವನದಲ್ಲಿ ಹಲವು ವಿಷಯಗಳಲ್ಲಿ ತೊಡಗಿಕೊಂಡಿರುವುದರಿಂದ ಮನುಷ್ಯನಿಗೆ ನಿಶ್ಚಿಂತೆಯಿಂದ ಸುಖಪಡಲು ಸಮಯವೇ ಸಿಗುವುದಿಲ್ಲೆಂಬುದೀಗ ದೊಡ್ಡ ತೊಂದರೆ.

ನನ್ನ ಕೇಳಿದರೆ ಜೀವನದ ವ್ಯವಸ್ಥೆ ತಿರುವು ಮುರುವಾಗಿರಬೇಕು. ಪ್ರಾರಂಭದಲ್ಲೇ ಮನುಷ್ಯ ಮುದುಕನಾಗಬೇಕು. ಅಂದರೆ ಬೇರೆ ಭೋಗಗಳಿಗೆ ಅವನಲ್ಲಿ ಶಕ್ತಿ ಇಲ್ಲದ್ದರಿಂದ ಅವನು ಮಹತ್ವದ ಕೆಲಸಗಳನ್ನೆಲ್ಲ ಉತ್ಸಾಹದಿಂದ ಮಾಡಿ ಒಗೆದುಬಿಡಬಹುದು. ಆಮೇಲೆ ಅವನಿಗೆ ಯೌವನ ಬರಬೇಕು. ಆಗ ಅವನು ನಿಶ್ಚಿಂತತೆಯಿಂದ ವಿರಾಮವಾಗಿ ಜೀವನದ ಸುಖೋಪ

ಭೋಗಗಳ ನೆಮ್ಮದಿಯನ್ನು ಅನುಭವಿಸಲು ಅವಕಾಶವಾಗುವದು.

ಮುಪ್ಪಿನಲ್ಲಿ ಮನುಷ್ಯ ಮರುಳನಾಗಿಬಿಡುತ್ತಾನೆ; ನೋಡಿ, ಏನೇನೋ ಹೇಳಹೊರಟು ಏನೇನೋ ಗಳಹತೊಡಗಿಬಿಟ್ಟೆ. ನಿಮಗೆ ಏನು ಹೇಳಬೇಕೆಂದಿದ್ದೆ? ಹೌದು, ನನ್ನ ಜೀವನದ ಅತ್ಯಂತ ಸಾರ್ಥಕ ಸನ್ನಿವೇಶ, ಅಲ್ಲವೇ ? ಈ ಸಾರ್ಥಕತೆ ನನ್ನ ಯಾವುದೇ ಕಾವ್ಯ ಅಥವಾ ನಾಟಕದಲ್ಲಿ ಇತ್ತೆಂದು ನೀವು ಯೋಚಿಸಬೇಡಿರಿ. ನನ್ನ ಗ್ರಂಥಗಳನ್ನು ಜನರು ಒಂದು ಕಾಲದಲ್ಲಿ ಆತುರದಿಂದ ಓದುತ್ತಿದ್ದದ್ದು ನಿಜ. ಆದರೆ ನನ್ನ ಬಾಳಿನ ಸಾರ್ಥಕ ಸನ್ನಿವೇಶ ಮಾತ್ರ ಸೆಲ್-ವ್ಹಿನ್ ಪ್ರಕರಣವೇ ಆಗಿದೆ.

ಈ ಪ್ರಕರಣ ನಿಮಗೆ ಗೊತ್ತಿರಲಿಕ್ಕಿಲ್ಲ. ಅದು ನಡೆದು ಈಗ ಇಪ್ಪತ್ತಾರು ವರ್ಷಗಳು ಕಳೆದು ಹೋದವು; ಅಲ್ಲ, ಇಪ್ಪತ್ತೊಂಭತ್ತು ವರ್ಷಗಳು. ಹೌದು, ಇಪ್ಪತ್ತೊಂಬತ್ತು ವರ್ಷಗಳ ಹಿಂದೊಂದು ದಿನ ಬೆಳಿಗ್ಗೆ ಕರೇ ಉಡುಪಿನ ಒಬ್ಬ ಜರಠಾಕೃತಿಯ ಮುದುಕಿ ನನ್ನ ಮನೆಯಲ್ಲಿ ಬಂದು ಕುಳಿತಿದ್ದಳು.

ಅವಳು ಬಂದ ಕಾರ್ಯವನ್ನು ಕವಿಜನೋಚಿತ ಶಿಷ್ಟಾಚಾರದಿಂದ ವಿಚಾರಿಸುವ ಮೊದಲೇ ಅವಳು ನನ್ನನ್ನು ಚಕಿತಗೊಳಿಸಿ ನನ್ನಮುಂದೆ ಮಂಡಿಯೂರಿ ಗೋಳೋ ಎಂದು ಅಳಲಾರಂಭಿಸಿದಳು. ನನಗೆ ಏನೂ ಬಗೆಹರಿಯಲಿಲ್ಲ.

ಮುದುಕಮ್ಮನನ್ನು ಹೇಗೋ ಹೇಗೋ ಶಾಂತಗೊಳಿಸಿದ ಮೇಲೆ ಅವಳೆಂದಳು– "ತಾವು ಕವಿಗಳು. ನನ್ನ ಮಗನನ್ನು ಹೇಗಾದರೂ ಉಳಿಸಿರೆಂದು ಸೆರಗೊಡ್ಡಿ ಬೇಡುವೆ. ಮನುಷ್ಯಜಾತಿಯ ಮೇಲೆ ತಮ್ಮ ಅಕೃತ್ರಿಮ ಪ್ರೇಮ ಸಹಾನುಭೂತಿಗಳಿವೆ. ಅವು ನನ್ನ ದೈವಗೇಡಿ ಮಗನ ಕೈ ಬಿಡಲಾರವು. ವರ್ತಮಾನಪತ್ರಗಳಲ್ಲಿ ನೀವು ಫ್ರಾಂಕ್ ಸೆಲ್‌ವ್ಹಿನ್ನನ ಸಮಾಚಾರವನ್ನು ಖಂಡಿತ ಓದಿರಬೇಕು........''

ನಾನು ಹಸುಗೂಸಿನಂತೆ ಅಚ್ಚರಿಯಿಂದ ಕಣ್ಣರಳಿಸಿ ಈ ಅಪರಿಚಿತ ಮಹಿಳೆಯ ಕಡೆ ನೋಡುತ್ತಲಿದ್ದೆ. ಪತ್ರಿಕೆಗಳನ್ನು ನಿತ್ಯ ಓದುತ್ತಿದ್ದರೂ ನನಗೆ ಫ್ರಾಂಕ ಸೆಲ್‌ವ್ಹಿನನ ಸುದ್ದಿ ಕಣ್ಣಿಗೇ ಬಿದ್ದಿರಲಿಲ್ಲ. ಆದರೆ ಅಳುತ್ತ ಬಿಕ್ಕುತ್ತ ಅವಳು ಹೇಳಿದ ಮಾತುಗಳಿಂದ ಸಂಗತಿಯನ್ನು ಸುಮಾರಾಗಿ ಅಂದಾಜು ಮಾಡಿಕೊಂಡೆ. ಅವಳ ಏಕಮಾತ್ರ ಪುತ್ರ ಇಪ್ಪತ್ತೆರಡು ವರ್ಷದ ಫ್ರಾಂಕ್ ಸೆಲ್‌ವ್ಹಿನನಿಗೆ ಆಜನ್ಮ ಕರಿನೀರಿನ ಶಿಕ್ಷೆಯಾಗಿತ್ತು– ಅವನು ತನ್ನ ಚಿಕ್ಕಮ್ಮ ಸೋಫಿಯ ಕೊಲೆ ಮಾಡಿದನೆಂಬ ಆರೋಪದಿಂದ. ಪ್ರಕರಣ ಮೊದಲೇ ದುಷ್ಕರವಾಗಿತ್ತು. ಸಾಲದ್ದಕ್ಕೆ ಸೆಲ್‌ವ್ಹಿನನು ಆರೋಪವನ್ನು ನಿರಾಕರಿಸಿ ಜೂರಿಗಳ ದೃಷ್ಟಿಯಲ್ಲಿ ಪ್ರಕರಣವನ್ನು ಇನ್ನಷ್ಟು ಕೆಡಿಸಿಕೊಂಡಿದ್ದನು.

"ಆದರೆ ಅವನು ಪೂರ್ಣ ನಿರಪರಾಧಿ, ಬೇಕಾದರೆ ಆಣೆ ಮಾಡಿ ಹೇಳಬಲ್ಲೆ," ಎಂದಳಾ ಉತ್ಕಂಠಿತ ವೃದ್ಧೆ. "ಈ ಘಟನೆ ಜರಗಿದ ರಾತ್ರಿ ಅವನು 'ತಲೆ ಭಯಂಕರ ನೋಯುತ್ತಿದೆ ತಾಯಿ, ಸ್ವಲ್ಪ ಬಯಲು ಹವೆಯಲ್ಲಿ ತಿರುಗಾಡಿ ಬರುತ್ತೇನೆ' ಎಂದು ಹೇಳಿ ಹೊರಗೆ ಹೋಗಿದ್ದ. ಇದರಿಂದ ಅವನಿಗೆ ಕೊಲೆ ನಡೆದಾಗ ತಾನು ಬೇರೆ ಕಡೆ ಇದ್ದದ್ದಾಗಿ ಸಾಬೀತು ಮಾಡಲಾಗಲಿಲ್ಲ. ರಾತ್ರಿ ಒಬ್ಬ ತರುಣ ಬೀದಿಯಲ್ಲಿ ಎದುರು ಸಿಕ್ಕಿದರೆ ಸರಿಯಾಗಿ ನೋಡಿ ಗುರುತಿಟ್ಟುಕೊಳ್ಳುತ್ತಾರೆಯೆ ಯಾರಾದರೂ ? ಫ್ರಾಂಕ ತುಸು ಉಡಾಪಿ ಸ್ವಭಾವದ ಹುಡುಗ ಎಂದು ಒಪ್ಪಿಕೊಳ್ಳುತ್ತೇನೆ. ಆದರೆ ಯೌವನದಲ್ಲಿ ವಿನಯಶೀಲರಾಗಿರುವವರು ಎಷ್ಟು ಮಂದಿ ? ನೀವೂ ಒಂದು ಕಾಲದಲ್ಲಿ ತರುಣರಾಗಿದ್ದವರಲ್ಲವೆ ? ಯೌವನದ ಲೋಪದೋಷ ನಿಮಗೆ ಗೊತ್ತಿಲ್ಲದಿರಲಿಕ್ಕಿಲ್ಲ. ಇವಾದರೂ ನೋಡಿರಿ. ಫ್ರಾಂಕನಿಗೆ ಬರೇ ಇಪ್ಪತ್ತೆರಡು ವರ್ಷ. ಅವನ ಸಮಸ್ತ ಜೀವನವನ್ನೇ ಕಟುಕರ ಹಾಗೆ ಹಾಳುಗೆಡಿಸುತ್ತಿದ್ದಾರಲ್ಲ.''

ಮುದುಕಿ ಮತ್ತೂ ಏನೇನೋ ಹೇಳಿದಳು. ನಿಸ್ಸಹಾಯ ಮುದುಕಿಯೊಬ್ಬಳ ಭಗ್ನಹೃದಯದ ಅಳಲು ಕೇಳಿ ನೀವಾದರೂ ಕರಗಲಾರಿರಾ ? ನಾನು ವೃದ್ಧೆಗೆ ಮಾತುಕೊಟ್ಟೆ—ನನ್ನ

ಕೈಲಾದದ್ದನ್ನೆಲ್ಲ ಮಾಡುವೆ; ಈ ಪ್ರಕರಣದ ಎಲ್ಲ ಉಪಯುಕ್ತ ತಥ್ಯಾಂಶಗಳನ್ನು ಕಂಡುಹಿಡಿಯಲು ಶಕ್ತಿಮೀರಿ ಯತ್ನಿಸುವೆ—ಎಂದು. ಅವಳ ಮಗ ನಿರ್ದೋಷಿಯೆಂದು ನನಗೆ ಹೃತ್ಪೂರ್ವಕ ವಿಶ್ವಾಸವಿದೆಯೆಂದೂ ಆಶ್ವಾಸನವಿತ್ತೆ. ಬಳಿಕ ಆ ದುರ್ಭಾಗ್ಯ ಮಹಿಳೆ ಗದ್ಗದಕಂಠದಿಂದ ನನ್ನನ್ನು ಹರಸತೊಡಗಿದಾಗಂತೂ ನಾನು ಭಾವಾವೇಗದಿಂದ ತೀರ ಉದ್ಭ್ರಾಂತನಾಗಿ ಅವಳ ಮುಂದೆ ಮೊಣಕಾಲೂರಿ ತಲೆಬಾಗಿಸಿದೆ. ನಮ್ಮಿಂದ ಉಪಕಾರಹೊಂದಿದವರು, ನಾವೊಂದು ಮೈದೋರಿದ ಕ್ಷುದ್ರ ದೇವತೆಯೋ ಎಂಬಂತೆ, ನಮಗೆ ಕೃತಜ್ಞತೆ ನಿವೇದಿಸುವಾಗ ನಮ್ಮ ಅವಸ್ಥೆ ಅತ್ಯಂತ ವಿಚಿತ್ರವಾಗುವುದೆಂದು ಬೇರೆ ಹೇಳಬೇಕಾಗಿಲ್ಲ.

ಅಂದಿನಿಂದ ಸೆಲ್‌ವಿನನ ಪ್ರಕರಣದಲ್ಲೇ ನಾನು ಮುಳುಗೇಳತೊಡಗಿದೆ. ಮೊದಲು ಕೋರ್ಟಿನ ವರದಿಯನ್ನು ಸಾದ್ಯಂತವಾಗಿ ಓದಿದೆ. ಇಂಥ ಅನ್ಯಾಯ ಎಂದೂ ಆಗಿರಲಿಕ್ಕಿಲ್ಲೆನಿಸಿತು. ಇದು ವಿಚಾರಣೆಯಲ್ಲ, ವಿಚಾರಣೆಯ ಪ್ರಹಸನವೇ ಸೈ ಎಂದುಕೊಂಡೆ.

ವಿಷಯ ಬಲು ಸರಳವಾಗಿತ್ತು. ಫ್ರಾಂಕನ ಚಿಕ್ಕಮ್ಮ ಸೋಫಿಯ ಕೋಣೆಯಲ್ಲಿ ಒಂದು ದಿನ ರಾತ್ರಿ ಅವಳ ಸೇವಕಿ ಆ್ಯನಿಗೆ ಹೆಜ್ಜೆಯ ಸಪ್ಪಳ ಕೇಳಿಸಿದಂತಾಯಿತು. ಈ ಕೆಲಸದಾಕೆಯ ವಯಸ್ಸು ಐವತ್ತಕ್ಕೂ ಮೀರಿತ್ತು ಮತ್ತು ಅವಳ ಬುದ್ಧಿ ಅಷ್ಟು ಸರಿಯಾಗಿದ್ದಿಲ್ಲೆಂದು ಮರೆಯಬಾರದು.

ಸದ್ದು ಕೇಳಿ, ಇಷ್ಟು ರಾತ್ರಿಯಲ್ಲಿ ಕೋಣೆಯಲ್ಲಿ ಯಾರು ಓಡಾಡುತ್ತಿರಬಹುದು, ಯಜಮಾನಿ ಇನ್ನೂ ನಿದ್ದೆ ಮಾಡಿಲ್ಲವೆ? ಎಂದುಕೊಂಡು ಸೇವಕಿ ಕೋಣೆಯಲ್ಲಿ ಹಣಕಿ ನೋಡಿದಳಂತೆ. ಹಣಕುತ್ತಲೇ ಯಾರೋ ಒಬ್ಬನು ಕಿಡಿಕಿ ತೆರೆದು ಹೊರಗಿನ ತೋಟಕ್ಕೆ ಜಿಗಿದು ಓಡಿದನು. ಕ್ಷಣಮಾತ್ರ ತೆರೆದ ಕಿಡಿಕಿಯಲ್ಲಿ ಅವನ ಆಕೃತಿ ಚಾಕರಿಯವಳಿಗೆ ಕಾಣಿಸಿತು. ಕೂಡಲೇ ಅವಳು ಚೀರಿಕೊಂಡಳು. ನೆರೆಹೊರೆಯವರು ಓಡಿಬಂದರು. ದೀಪ ತಂದು ನೋಡಿದಾಗ ಮಿಸ್ ಸೋಫಿಯು ಮೇಜಿನ ಮೇಲೆ ಉಸಿರುಗಟ್ಟಿ ಸತ್ತುಬಿದ್ದಿದ್ದಾಳೆ. ಅವಳ ಕೊರಳಿಗೆ ಅವಳದೇ ಕರವಸ್ತ್ರ ಉರುಳಾಗಿತ್ತು. ಅವಳು ಹಣಕಾಸು ಇಡುತ್ತಿದ್ದ ವಸ್ತ್ರದ ಕಪಾಟು ತೆರೆದಿತ್ತು. ಅದರೊಳಗಿನ ಬಟ್ಟೆಗಳು ಚಲ್ಲಾಪಿಲ್ಲಿಯಾಗಿದ್ದವು. ಹಣಕಾಸು ಮಾತ್ರ ಇದ್ದಂತಿತ್ತು; ಬಹುಶಃ ಕೆಲಸದವಳು ಬಂದದ್ದರಿಂದ ಕೊಲೆಗಡಕನು ಹಣಬಿಟ್ಟು ಓಡಿರಬೇಕು. ಇದು ದುರ್ಘಟನೆಯ ವಿದ್ಯಮಾನದ ಸಾರಾಂಶ.

ಮರುದಿನವೇ ಫ್ರಾಂಕ್ ಸೆಲ್‌ವಿನನನ್ನು ಬಂಧಿಸಲಾಯಿತು. ಅವನು ಕಿಡಿಕಿಯಿಂದ ಜಿಗಿದು ಪಾರಾಗುತ್ತಿದ್ದಾಗ ಸೇವಕಿ ಫ್ರಾಂಕನನ್ನು ಗುರುತಿಸಿದ್ದಳಂತೆ. ಹತ್ಯಾಕಾಂಡದ ರಾತ್ರಿ ಫ್ರಾಂಕ ಮನೆಯಲ್ಲಿದ್ದಿಲ್ಲೆಂದು ತಪಾಸಣೆಯ ಕಾಲದಲ್ಲಿ ತಿಳಿದುಬಂತು. ಘಟನೆ ಜರಗಿ ಅರ್ಧತಾಸಿನ ಮೇಲೆ ಅವನು ಮನೆಗೆ ಮರಳಿ ಊಟ ಮಾಡದೇ ಮಲಗಿದ್ದನಂತೆ.

ಇದಲ್ಲದೆ ಫ್ರಾಂಕನು ಸಾಲದಲ್ಲಿ ಮುಳುಗೇಳುತ್ತಿದ್ದನೆಂದೂ ಬೆಳಕಿಗೆ ಬಂತು. ಸಾಲದ್ದಕ್ಕೆ ಒಬ್ಬಳು ಮುದುಕಿ ನ್ಯಾಯಾಲಯದಲ್ಲಿ ಕೆಲ ವಿಷಯಗಳನ್ನು ಅರುಹಿದಳು. ಫ್ರಾಂಕನು ಕೆಲ ದಿನ ಹಿಂದೆ ಚಿಕ್ಕಮ್ಮನಲ್ಲಿಗೆ ಬಂದು ಹಣ ಬೇಡಿದ್ದನಂತೆ. ಸೋಫಿ ನಿರಾಕರಿಸಿದ್ದಳಂತೆ. ಆಗ ಫ್ರಾಂಕ, "ನೋಡಿಕೋ ಕಕ್ಕೀ, ಇಷ್ಟರಲ್ಲೇ ಜನರನ್ನು ದಂಗುಬಡಿಸುವಂಥ ಒಂದು ಘಟನೆ ನಡೆಯುವದು," ಎಂದಿದ್ದನಂತೆ. ಇದೆಲ್ಲವನ್ನು ಮೃತಳು ತನಗೆ ಗುಟ್ಟಾಗಿ ತಿಳಿಸಿದ್ದಳೆಂದು ಮುದುಕಿಯ ಹೇಳಿಕೆಯಿತ್ತು.

ಇನ್ನು ವಿಚಾರಣೆಯ ಮಾತು. ವಿಚಾರಣೆಯನ್ನು ಒಂದೆರಡು ದಿನಗಳಲ್ಲೇ ಮುಗಿಸಿಬಿಡಲಾಗಿತ್ತು. ತಾನು ನಿರ್ದೋಷಿ, ಆ ದಿನ ಸಂಜೆಯ ನಂತರ ತಾನು ತಿರುಗಾಡಲು ಹೋಗಿದ್ದೆ, ತಿರುಗಿ ಬಂದವನು ತನ್ನ ಕೋಣೆಗೆ ಹೋಗಿ ಮಲಗಿಬಿಟ್ಟಿದ್ದೆ–ಎಂದಿಷ್ಟೇ ಫ್ರಾಂಕ ನ್ಯಾಯಾಲ

ಯದ ಮುಂದೆ ಹೇಳಿದ್ದ. ಸಾಕ್ಷಿಗಳ ಪಾಟಿ ಸವಾಲು ಯಾರೂ ಮಾಡಿರಲಿಲ್ಲ.

ಫ್ರಾಂಕನ ಪಕ್ಷದಲ್ಲಿ ವಾದಿಸಿದವನೊಬ್ಬ ಮುಪ್ಪಿನ, ದಡ್ಡ ವಕೀಲ. ಅವನು ಪುಕ್ಕಟೆಯಾಗಿ ವಕಾಲತ್ತು ಮಾಡಿದ್ದ. ಫ್ರಾಂಕನ ತಾಯಿಗೆ ಒಳ್ಳೇ ವಕೀಲರನ್ನು ನೇಮಿಸುವಷ್ಟು ಧನಬಲವಿರಲಿಲ್ಲ. ವಕೀಲ ಮಹಾಶಯ ನ್ಯಾಯಸ್ಥಾನದಲ್ಲಿ ನಿವೇದಿಸಿದ ಪ್ರಾರ್ಥನೆ ಒಂದೇ–ಆರೋಪಿಯ ಎಳೆ ಹರೆಯ ನೋಡಿ ಜೂರಿಗಳು ಅವನಿಗೆ ದಯೆ ತೋರಿಸಬೇಕು –ಎಂದು.

ಸರಕಾರಿ ವಕೀಲನು ಇದನ್ನು ತೀವ್ರವಾಗಿ ವಿರೋಧಿಸಿದ್ದನು. ಒಂದೆರಡು ತಿಂಗಳ ಹಿಂದೆ ಇನ್ನೊಂದು ಪ್ರಕರಣದಲ್ಲಿ ಜೂರಿಗಳು ಇಬ್ಬರು ಆರೋಪಿಗಳನ್ನು ಬಿಡುಗಡೆ ಮಾಡಿದ್ದರು. ಅದನ್ನೆತ್ತಿಕೊಂಡು ಸರಕಾರಿ ವಕೀಲನು ಜೂರಿಗಳನ್ನು ತೀಕ್ಷ್ಣವಾಗಿ ಟೀಕಿಸಿ, ಅಪರಾಧಿಗಳಿಗೆ ಹೀಗೆ ದಾಕ್ಷಿಣ್ಯ ತೋರಿಸಿದರೆ ಸಮಾಜದ ಗತಿ ಏನಾಗಬೇಕು? ಎಂದು ತುಂಬ ಉತ್ತೇಜಿತ ಧ್ವನಿಯಿಂದ ಆರ್ಭಟಿಸಿದ್ದನು. ಅನಂತರ ಜೂರಿಗಳಿಗೆ ತಾವು ನ್ಯಾಯದಾನದಲ್ಲಿ ಶೈಥಿಲ್ಯ ತೋರಿಸುವವರಲ್ಲೆಂದು ತೋರಿಸುವ ಹುಮ್ಮಸವುಂಟಾಗಿರಬೇಕು. ಹೀಗಾಗಿ ಫ್ರಾಂಕನು ದೋಷಿಯೆಂದು ತೀರ್ಪು ಹೊರಟಿತು.

ಈ ಎಲ್ಲ ತಥ್ಯಗಳನ್ನು ಸಂಗ್ರಹಿಸಿದ ನಂತರ ನನ್ನ ತಲೆ ಬಿಸಿಯೇರಿತು. ನ್ಯಾಯವ್ಯವಸಾಯ ನನ್ನದಲ್ಲವಾದರೂ ನನಗೆ ಮಿತಿಮೀರಿದ ಸಿಟ್ಟು ಬಂದಿತು. ನೋಡಿಯಾದರೂ ನೋಡಿರಿ. ಸರಕಾರ ಪಕ್ಷದ ಸಾಕ್ಷಿಯ ಬುದ್ಧಿ ನೆಟ್ಟಗಿದ್ದಿಲ್ಲ, ವಯಸ್ಸು ಐವತ್ತು ಮೀರಿತ್ತು. ಅವಳ ಮಾತಿನಲ್ಲಿ ವಿಶ್ವಾಸವಿಡಲು ಸಾಧ್ಯವಿಲ್ಲ. ಅವಳು ಕಿಡಿಕಿಯಲ್ಲಿ ಕೊಲೆಪಾತಕಿಯನ್ನು ಕಂಡದ್ದು ರಾತ್ರಿಯಲ್ಲಿ. ಆ ರಾತ್ರಿ ಸೆಕೆ ವಿಪರೀತವಾಗಿದ್ದರೂ ಕಗ್ಗತ್ತಲ ರಾತ್ರಿಯೆಂದು ನನಗೆ ತಿಳಿಯಿತು. ಸರಿಯಾಗಿರುವವರಿಗೆನೇ ಅಂದು ಯಾರನ್ನೂ ಗುರುತು ಹಿಡಿಯಲು ಶಕ್ಯವಿರಲಿಲ್ಲ. ಇವಳಂತೂ ನಿರುಪಯುಕ್ತ ಮುದುಕಿ. ಕತ್ತಲೆಯಲ್ಲಿ ಮನುಷ್ಯನ ಎತ್ತರವನ್ನು ಕೂಡ ಅಂದಾಜು ಮಾಡಲಾಗುವುದಿಲ್ಲೆಂದು ನಾನು ಸ್ವತಃ ಪರೀಕ್ಷಿಸಿ ತಿಳಿದುಕೊಂಡಿದ್ದೆ. ಇದಲ್ಲದೆ ಫ್ರಾಂಕನ ಮೇಲೆ ಪರಿಚಾರಿಕೆಗೆ ದ್ವೇಷವಿತ್ತು. ಅವನು ಅವಳಿಗೆ ಯಾವಾಗಲೂ ಚೇಷ್ಟೆ ಮಾಡುತ್ತಿದ್ದನಂತೆ. ಇದರಿಂದ ಅವಳು ಅವನ ಮೇಲೆ ಹಲ್ಲು ಮಸೆಯುತ್ತಿದ್ದಳು.

ಇನ್ನೂ ಒಂದು ಸಂಗತಿ ಗಮನಾರ್ಹವಾಗಿತ್ತು. ಕುಮಾರಿ ಸೋಫಿಗೆ ತನ್ನ ಅಕ್ಕನಾದ ಸಿಲ್ವಿನನ ತಾಯಿಯನ್ನು ಕಂಡರಾಗುತ್ತಿರಲಿಲ್ಲ. ಅವಳನ್ನು ಸಿಕ್ಕಾಬಟ್ಟೆ ಬಯ್ಯುತ್ತಿದ್ದಳು. ಆದ್ದರಿಂದ ಅಕ್ಕನ ಮಗನು ತನಗೆ ಬೆದರಿಕೆ ಹಾಕಿದ್ದನೆಂದು ಸೋಫಿ ಹೇಳಿದ್ದೇ ಸತ್ಯವಾಗಿದ್ದರೂ ಅದನ್ನು ನಂಬಲು ಸಾಧ್ಯವಿರಲಿಲ್ಲ. ಮುಪ್ಪಿನ ವರೆಗೂ ಮದುವೆಯಾಗದಿರುವ ಹೆಂಗಸರ ಸ್ವಭಾವ ತುಂಬ ಸಿಡುಕಿನದಾಗಿಬಿಡುತ್ತದೆಂದು ಯಾರಿಗೆ ಗೊತ್ತಿಲ್ಲ?

ಫ್ರಾಂಕನ ವಿಷಯದಲ್ಲಿ ನಾನು ವಿಚಾರಿಸಿ ತಿಳಿದುಕೊಂಡದ್ದರಲ್ಲಿ ಅವನು ಸಾಧಾರಣ ದಕ್ಷತೆಯುಳ್ಳ ತರುಣ. ಒಂದು ಆಫೀಸಿನಲ್ಲಿ ಕಾರಕೂನನಾಗಿದ್ದನವ. ಅವನಿಗೊಬ್ಬ ಪ್ರಣಯಿನಿಯಿದ್ದಳು. ಅವಳಿಗೆ ಅವನು ಭಾವನಾಪೂರ್ಣ ಪತ್ರಗಳನ್ನೂ ಕೀಳುದರ್ಜೆಯ ಕವಿತೆಗಳನ್ನೂ ಬರೆಯುತ್ತಿದ್ದ. ಅವನಿಗೆ ಸಾಲವಿದ್ದದ್ದು ಸುಳ್ಳಲ್ಲ. ಆದರೆ ಇದಕ್ಕಾಗಿ ಬಡಪಾಯಿಗೆ ಹೆಚ್ಚು ದೋಷ ಕೊಡುವುದು ಸರಿಯಲ್ಲೆನಿಸಿತು. ಅವನು ಚಿಕ್ಕಂದಿನಿಂದಲೇ ಮದ್ಯದ ಚಟಕ್ಕೆ ಬಿದ್ದಿದ್ದನು. ಅವನ ದುರ್ದೈವಿ ತಾಯಿ ದುಃಖ, ದಾರಿದ್ರ್ಯ, ಕ್ಯಾನ್ಸರುಗಳಿಂದ ಏಕಕಾಲದಲ್ಲಿ ಪೀಡಿತಳಾಗಿದ್ದರೂ ಶಾಂತ ಸ್ವಭಾವದ ಸಜ್ಜನಳು.

ನನ್ನ ಅಂದಿನ ರೀತಿನೀತಿ ನಿಮಗೆ ಗೊತ್ತಿರಲಿಕ್ಕಿಲ್ಲ. ಎಲ್ಲಿಡೆಗೂ ಗೌರವ ಹೊಂದಿದ್ದ ನಾನು ಆಗ ಒಮ್ಮೆ ಉತ್ತೇಜಿತನಾದೆನೆಂದರೆ ನನ್ನನ್ನು ತಡೆಯಬಲ್ಲ ಶಕ್ತಿಯೇ ಇರಲಿಲ್ಲ. ನಾನು ಪತ್ರಿಕೆಗಳಲ್ಲಿ "ಸೆಲ್ವಿನ ಪ್ರಕರಣ" ಎಂದೊಂದು ಲೇಖಮಾಲೆಯನ್ನೇ ಪ್ರಾರಂಭಿಸಿದೆನು. ಅದರಲ್ಲಿ

ನಾನು, ಸರಕಾರದ ಸಾಕ್ಷಿಗಳು ವಿಶ್ವಾಸಕ್ಕೆ ಅನರ್ಹರಾಗಿದ್ದರೆಂದು ತೋರಿಸಿಕೊಟ್ಟೆನು. ಅವರ ಹೇಳಿಕೆಗಳಲ್ಲಿ ಏನೇನು ತಪ್ಪುತಡೆಗಳಿದ್ದವು, ಕೆಲವರಂತೂ ಹೇಗೆ ದ್ವೇಷದಿಂದಲೇ ಪ್ರೇರಿತರಾಗಿದ್ದರು ಎಂದೂ ಬಿಡಿಬಿಡಿಸಿ ಹೇಳಿದೆನು. ಕಗ್ಗತ್ತಲ ರಾತ್ರಿಯಲ್ಲಿ ಮುದಿ ಸೇವಕಿ ಕೊಲೆಗಡಕನನ್ನು ಗುರುತಿಸುವದು ಸಾಧ್ಯವೇ ಇದ್ದಿಲ್ಲವೆಂದು ಯುಕ್ತಿಯುಕ್ತವಾಗಿ ಸಿದ್ಧಪಡಿಸಿದೆನು. ತಪಾಸಣೆ ನಡೆಸಿದವರು ತಮ್ಮ ಕರ್ತವ್ಯವನ್ನು ಸರಿಯಾಗಿ ಪಾಲಿಸಲಿಲ್ಲ, ಸರಕಾರಿ ವಕೀಲರು ಯುಕ್ತಿಯುಕ್ತವಾಗಿ ತಮ್ಮ ಪಕ್ಷಸಾಧಿಸುವ ಬದಲು ಉದ್ವೇಗಪ್ರಚೋದಕವಾಗಿ ಮಾತಾಡಿದರು ಎಂದೆಲ್ಲ ಹೇಳಲೂ ಮರೆಯಲಿಲ್ಲ.

ಅಷ್ಟಕ್ಕೇ ಬಿಟ್ಟೆನೆಂದು ತಿಳಿಯಬೇಡಿರಿ. ತಪಾಸಣೆಯ ವ್ಯವಸ್ಥೆಯ ಮೇಲೆಯೇ ನಾನು ತೀವ್ರ ಟೀಕೆ ಮಾಡಿದೆ. ಪೀನಲ್ ಕೋಡು, ಜೂರಿ ಪದ್ಧತಿ, ಸಮಾಜದ ಆಲಸ್ಯ ಮತ್ತು ಸ್ವಾರ್ಥಸಾಧಕಬುದ್ಧಿ ಎಲ್ಲವೂ ನನ್ನ ವಾಗ್ಬಾಣಗಳಿಗೆ ಗುರಿಯಾದವು.

ನನ್ನ ಈ ಲೇಖಮಾಲೆಯ ಪ್ರಕಟನೆಯಿಂದ ದೊಡ್ಡ ಆಂದೋಲನವೇ ಉಂಟಾಗಿಬಿಟ್ಟಿತು. ಕವಿಯೆಂದು ಆಗಲೇ ನಾನು ಸಾಕಷ್ಟು ಪ್ರಸಿದ್ಧನಾಗಿದ್ದೆ. ತರುಣ ಜನಾಂಗ ನನ್ನ ಬೆಂಬಲಕ್ಕೆ ನಿಂತಿತು. ಒಂದು ದಿನ ಸಂಜೆ ನ್ಯಾಯಾಲಯದ ಮುಂದೆ ಪ್ರಕ್ಷುಬ್ಧ ಮತ ಪ್ರದರ್ಶನ ಜರಗಿತು. ಫ್ರಾಂಕನ ವಕೀಲ ಎದ್ದು ನಮ್ಮ ಕಡೆ ಬಂದನು. ನಾನು ಮಾಡಿದ ಗಂಭೀರ ಪ್ರಮಾದದಿಂದ ಅವನಿಗೆ ತುಂಬ ಚಿಂತೆಯಾಗಿತ್ತು. ಕೆಳಕೋರ್ಟಿನ ತೀರ್ಪಿನ ವಿರುದ್ಧ ಅಪೀಲು ಮಾಡಲಾಗಿತ್ತು. ಅದರಲ್ಲಿ ಶಿಕ್ಷೆ ಕಡಿಮೆಯಾಗುವ ಆಸೆಯುಂಟಾಗಿತ್ತು. ಆದರೆ ಅಪೀಲ ನ್ಯಾಯಾಲಯದ ಮುಂದೆ ಜನಜಂಗುಳಿ ಹದಗೆಟ್ಟು ವರ್ತಿಸಿದ್ದರಿಂದ ನ್ಯಾಯಾಲಯವು ಅದಕ್ಕೆ ತಲೆಬಾಗಲಾರದು. ಅದು ಅಪೀಲನ್ನು ತಿರಸ್ಕರಿಸುವುದು ಖಂಡಿತ. ಮಾನ್ಯ ವಕೀಲರ ಈ ಮಾತಿಗೆ ನಾನು "ನನ್ನ ಹೋರಾಟ ಕೇವಲ ಸೆಲವ್ವಿನನ ಪರವಾಗಿ ಇಲ್ಲ. ಸತ್ಯ ಮತ್ತು ನ್ಯಾಯಕ್ಕಾಗಿ ನಾನು ಹೋರಾಡುತ್ತಿದ್ದೇನೆ," ಎಂದು ಉತ್ತರವಿತ್ತೆ.

ವಕೀಲರು ಊಹಿಸಿದಂತೆ ಅಪೀಲು ತಿರಸ್ಕರಿಸಲ್ಪಟ್ಟಿತು. ಆಗ ಪ್ರಕರಣವನ್ನು ತಪಾಸು ಮಾಡಿದ ಅಧಿಕಾರಿ ರಜೆಯನ್ನೇ ತೆಗೆದುಕೊಳ್ಳುವಂತಾಯಿತು. ಅಷ್ಟು ಉಗ್ರವಾಗಿತ್ತು ನನ್ನ ಆಂದೋಲನ. ನಿಜವಾಗಿ ನನ್ನ ಆ ಹೋರಾಟವನ್ನು ಧರ್ಮಯುದ್ಧವೆಂದೇ ಕರೆಯಬೇಕು. ಈ ಚಳವಳಿಯ ಫಲವಾಗಿ ತಪಾಸಣೆಯ ಪದ್ಧತಿಯಲ್ಲಿ ಅನೇಕ ಸುಧಾರಣೆಗಳಾದವು. ಸ್ವಲ್ಪಮಟ್ಟಿಗಾದರೂ ಇದರ ಯಶ ನಮ್ಮ ಯತ್ನಗಳಿಗೇ ಸಲ್ಲಬೇಕೆಂದು ಒಪ್ಪದೆ ವಿಧಿಯಿಲ್ಲ. ಸೆಲವ್ವಿನ ಪ್ರಕರಣ ಇಡೀ ಪ್ರಪಂಚದ ಪತ್ರಿಕೆಗಳಲ್ಲಿ ಪ್ರಕಟವಾಯಿತು. ಅನೇಕ ಕೂಲಿಕಾರ ಸಂಸ್ಥೆಗಳಲ್ಲಿಯೂ ಅನೇಕ ಅಂತಾರಾಷ್ಟ್ರೀಯ ಪರಿಷತ್ತುಗಳಲ್ಲಿಯೂ ನಾನು ಈ ವಿಚಾರದಲ್ಲಿ ಭಾಷಣವಿತ್ತೆ.

"ಸೆಲವ್ವಿನ ಪ್ರಕರಣದ ಪುನರ್ವಿಚಾರಣೆಯಾಗಲಿ" ಎಂಬುದು ಅಂದಿನ ಒಂದು ಜನಪ್ರಿಯ ಅಂತಾರಾಷ್ಟ್ರೀಯ ಘೋಷಣೆಯಾಗಿತ್ತು. ಸೆಲ್‌ವ್ವಿನನ ತಾಯಿ ಸತ್ತಾಗ ಹದಿನೇಳು ಸಾವಿರ ಜನರು ಈ ದಾರಿದ್ರ್ಯಪೀಡಿತ ಮಹಿಳೆಯ ಅಂತ್ಯಯಾತ್ರೆಯಲ್ಲಿ ಭಾಗವಹಿಸಿದರು. ನಾನು ಅವಳ ಗೋರಿಯ ಮುಂದೆ ಒಂದು ಭಾಷಣವನ್ನು ಮಾಡಿದೆ. ಅಂಥ ಮರ್ಮಸ್ಪರ್ಶಿ ಭಾಷಣವನ್ನು ನಾನೆಂದೂ ಮಾಡಿರಲಿಲ್ಲ. ಸ್ಫೂರ್ತಿಯೆಂಬುದೊಂದು ಅದ್ಭುತ ಪದಾರ್ಥ.

ಏಳು ವರ್ಷ ನಿರಂತರವಾಗಿ ನಾನೀ ಹೋರಾಟ ಸಾಗಿಸಿದೆ. ಈ ಹೋರಾಟವೇ ನನ್ನನ್ನು ಪ್ರಸಿದ್ಧನಾಗಿಮಾಡಿ ಗೌರವಸಿಂಹಾಸನದ ಮೇಲೆ ಕೂಡ್ರಿಸಿತು. ನನ್ನ ಅಂತಾರಾಷ್ಟ್ರೀಯ ಕೀರ್ತಿಯ ಮೂಲ ಈ ಸೆಲ್‌ವ್ವಿನ ಪ್ರಕರಣವೇ ಹೊರತು ನನ್ನ ಗ್ರಂಥಗಳಲ್ಲ. 'ವಿವೇಕ ವಾಣಿ', 'ಸತ್ಯಾಶ್ರಯ ವೀರ' ಮುಂತಾದ ಎಷ್ಟೋ ಬಿರುದುಗಳನ್ನು ಜನರು ನನಗಿತ್ತರು. ಇವುಗಳಲ್ಲಿ ಕೆಲವು

ನನ್ನ ಗೋರಿಯ ಮೇಲಿನ ಶಾಸನದಲ್ಲಿಯೂ ಸ್ಥಾನ ಪಡೆಯಬಹುದೆಂದು ನಾನು ಬಲ್ಲೆ.

ಇದಾಗಿ ಎರಡು ವರ್ಷಗಳ ನಂತರ ಸರಕಾರದ ಮುಖ್ಯ ಸಾಕ್ಷಿಯಾಗಿದ್ದ ಆ್ಯನಿ ಸೋಲರಳು ಸತ್ತಳು. ಸಾಯುವ ಮೊದಲು ಅವಳು ಕಣ್ಣಲ್ಲಿ ನೀರು ತಂದುಕೊಂಡು, ಪಾದ್ರಿಯ ಮುಂದೆ, ತಾನು ಸೆಲವ್ಹಿನ ಪ್ರಕರಣದಲ್ಲಿ ಕೊಟ್ಟ ಸಾಕ್ಷ್ಯ ಸುಳ್ಳು, ಕಿಡಿಕಿಯಲ್ಲಿ ಕಂಡ ಮನುಷ್ಯ ಸೆಲವ್ಹಿನ ಎಂದು ತಾನು ಧೈರ್ಯವಾಗಿ ಹೇಳಲಾರೆ, ಎಂದು ಹೇಳಿಕೆ ಕೊಟ್ಟಳು.

ಪಾದ್ರಿ ಒಳ್ಳೇ ಮನುಷ್ಯ. ಅವನು ಈ ಸಂಗತಿಯನ್ನು ನನಗೆ ತಿಳಿಸಿದ. ಲೋಕ ವ್ಯವಹಾರದ ಪರಿಜ್ಞಾನ ನನಗೆ ಅಷ್ಟರಲ್ಲಿ ಸಾಕಷ್ಟಾಗಿತ್ತು. ನಾನು ಪತ್ರಿಕೆಗಳಲ್ಲಿ ಈ ಸುದ್ದಿ ಪ್ರಕಟಿಸಲು ಧಾವಿಸದೆ ಪಾದ್ರಿಯನ್ನು ಸರಕಾರದ ನ್ಯಾಯ ಶಾಖೆಯ ಕಚೇರಿಗೆ ಕಳಿಸಿದೆ. ಒಂದೇ ವಾರದೊಳಗೆ ಫ್ರಾಂಕನ ಪುನರ್ವಿಚಾರಣೆಯಾಗಬೇಕೆಂದು ಆಜ್ಞೆ ಹೊರಟಿತು. ವಿಚಾರಣೆಯಲ್ಲಿ ಸರಕಾರಿ ವಕೀಲನೇ ಆರೋಪಿಯ ಬಿಡುಗಡೆಯಾಗಬೇಕೆಂದು ಪ್ರಾರ್ಥಿಸಿದನು. ಜೂರಿಗಳೂ ಫ್ರಾಂಕನನ್ನು ನಿರ್ದೋಷಿಯೆಂದು ಸಾರಿದರು.

ಹೌದು, ಈ ಸೆಲವ್ಹಿನ್ ಪ್ರಕರಣವೇ ನನ್ನ ಜೀವನದ ಪರಮ ಯಶಸ್ಸು. ಇತರ ಸಾರ್ಥಕತೆಗಳು ನನಗೆ ಎಂದೂ ಇಂಥ ಆನಂದವನ್ನುಂಟು ಮಾಡಿಲ್ಲ. ಆದರೂ ಈ ಆನಂದದ ಸಂಗಡ ನನಗೆ ಒಂದು ವಿಷಾದದ ಅನುಭವವೂ ಬಂತು.

ವಿಚಾರಣೆ ಮುಗಿದ ಮರುದಿನ ನನ್ನ ನೌಕರ, ಹೊರಗೆ ಯಾರೋ ಒಬ್ಬರು ಭೆಟ್ಟಿಗಾಗಿ ಬಂದಿದ್ದಾರೆಂದು ಅರುಹಿದನು.

"ನನ್ನ ಹೆಸರು ಫ್ರಾಂಕ ಸೆಲವ್ಹಿನ್" ಎನ್ನುತ್ತ ಆಗಂತುಕನು ಮೆಲ್ಲಮೆಲ್ಲಗೆ ಬಂದು ಬಾಗಿಲ ಮುಂದೆ ನಿಂತನು. ಅವನ ಮುಖನೋಡಿ ನಾನು ಅಪ್ರತಿಭನಾದೆ. ಆಗಿನ ನನ್ನ ಮನಸಿನ ಅವಸ್ಥೆಯನ್ನು ಶಬ್ದಗಳಲ್ಲಿ ಬಣ್ಣಿಸುವದು ಅಸಾಧ್ಯ. ನಾನು ಯಾರ ಪಕ್ಷ ಹಿಡಿದು ಇಂದಿನ ವರೆಗೆ ಇಷ್ಟು ದೊಡ್ಡ ಚಳವಳಿ ನಡೆಸಿದ್ದೆನೋ ಯಾರನ್ನು ದಲಿತ ಮಾನವ ವರ್ಗದ ಪ್ರತೀಕವೆಂದು ಲೋಕದ ಮುಂದೆ ಚಿತ್ರಿಸಿದ್ದೆನೋ ಆ ಫ್ರಾಂಕ ಸೆಲಿವ್ಹಿನ ಇವನೇ ಏನು? ಕುದುರೆ ಶರ್ಯತ್ತಿನ ದಲಾಲನನ್ನು ಹೋಲುವ ದಷ್ಟಪುಷ್ಟ ಶರೀರ, ದುಂಡಾಗಿ ತುಂಬಿದ ಮುಖ, ಖಲ್ವಾಟ ನೆತ್ತಿ, ಮೆಹರಬಾನಿಗೆ ಮಾಡುವವರಂಥ ಚರ್ಯೆ. ಮೇಲೆ ಬಾಯಲ್ಲಿ ಮದ್ಯದ ನಾತ.

"ಮಹಾ ಪ್ರತಿಭಾನ್ವಿತ ಕಲಾವಿದರೇ" ಎಂದು ಅವನು ನನ್ನನ್ನು ಸಂಬೋಧಿಸಿದನು. ಅವನು ಹೀಗೆ ಹೇಳುತ್ತಿರುವಾಗ ಅವನ ರೀತಿಯನ್ನು ಕಂಡು ಅವನನ್ನು ಒದ್ದು ಹೊರಗೆ ಹಾಕಿಬಿಡಲೇ ಅನಿಸಿತು. "ನೀವು ನನಗೆ ಮಾಡಿದ ಅನಂತ ಉಪಕಾರಕ್ಕಾಗಿ ಕೃತಜ್ಞತೆಯನ್ನು ಅರ್ಪಿಸಲು ಬಂದಿದ್ದೇನೆ." ಇಡೀ ಭಾಷಣವನ್ನು ಬಾಯಿಪಾಠ ಮಾಡಿಕೊಂಡು ಬಂದಿದ್ದಾನೆ ಎಂದು ನನಗೆ ತೋರಿತು.

ಪುನಃ ನಾಟಕದಲ್ಲಿ ಮಾತಾಡುವವರಂತೆ, "ನನ್ನ ಬಾಳುವೆಯೇ ತಮ್ಮ ಭಿಕ್ಷೆಯಾಗಿದೆ. ಕೃತಜ್ಞತೆ ವ್ಯಕ್ತಪಡಿಸಲು ನನಗೆ ಮಾತುಗಳೇ ಸಿಗದಂತಾಗಿವೆ" ಎಂದನಾತ.

ನಾನು ವ್ಯಸ್ತನಾಗಿ ಹೇಳಿದೆ, "ಇಲ್ಲ, ಇದಕ್ಕಾಗಿ ಕೃತಜ್ಞತೆಯ ಅರಿಕೆ ಮಾಡಬೇಕಾಗಿಲ್ಲ. ನಾನು ಕರ್ತವ್ಯವೆಂದೇ ಇದಕ್ಕಾಗಿ ದುಡಿದೆ. ನಿನಗೆ ಅನ್ಯಾಯವಾಗಿ ಶಿಕ್ಷೆಯಾಗಿದೆಯೆಂದು ತಿಳಿದ ಮೇಲೆ . . . "

ಫ್ರಾಂಕ ಸೆಲವ್ಹಿನ ತಲೆ ಅಲ್ಲಾಡಿಸಿದ. ವಿಷಣ್ಣ ಭಾವದಿಂದ, "ಇಲ್ಲ ಸ್ವಾಮೀ, ಉಪಕಾರ ಮಾಡಿದವರ ಮುಂದೆ ಸುಳ್ಳು ಹೇಳಲಾರೆ. ನಾನೇ ಆ ದುರ್ದೈವಿ ಮುದುಕಿಯ ಕೊಲೆ ಮಾಡಿದವನು."

"ಹಾಗಾದರೆ ಕೋರ್ಟಿನಲ್ಲಿ ಯಾಕೆ ಹೇಳಲಿಲ್ಲ?" ನಾನು ವಿಸ್ಮಿತನಾಗಿ ಪ್ರಶ್ನಿಸಿದೆ.

ಫ್ರಾಂಕ ನನ್ನ ಕಡೆ ವಿರಕ್ತಿಯಿಂದ ನೋಡಿದ. "ನನ್ನ ಹಕ್ಕನ್ನು ನಾನೇಕೆ ಬಿಟ್ಟುಕೊಡಲಿ?

ಆರೋಪಿಗೆ ತಾನು ನಿರ್ದೋಷಿಯೆಂದು ಹೇಳುವ ಹಕ್ಕುಂಟೆಂದು ತಮಗೆ ಗೊತ್ತಿದೆಯಲ್ಲ."

ಉಪಾಯವಿಲ್ಲದೆ ನಾನು ಸುಮ್ಮನಾಗಬೇಕಾಯಿತು.

"ಹಾಗಾದರೆ ನನ್ನ ಕಡೆ ಯಾಕೆ ಬಂದಿ?" ಎಂದು ನಾನು ತುಸು ಒಗರಿನಿಂದಲೇ ಕೇಳಿದೆ.

"ನಾನು ಕೇವಲ ತಮ್ಮ ಉದಾತ್ತ ಅಂತಃಕರಣಕ್ಕಾಗಿ ಧನ್ಯವಾದವೀಯಲು ಬಂದಿದ್ದೇನೆ. ನನ್ನ ಅದೃಷ್ಟಹೀನ ತಾಯಿಗೆ ತಾವು ಸಹಾಯ ಮಾಡಿದ್ದೀರಿ. ಮಹಾನುಭಾವ ಕವಿಯೇ, ದೇವರು ತಮಗೆ ಕಲ್ಯಾಣ ಮಾಡಲಿ." ಫ್ರಾಂಕನು ನೊಂದವನಂತೆ ನುಡಿದನು.

"ಇಲ್ಲಿಂದ ಹೊರಟು ಹೋಗು," ನಾನು ಗರ್ಜಿಸಿದೆ. ನನಗೆ ತಾಳಲಾರದ ಸಿಟ್ಟು ಬಂದಿತ್ತು. ಮನುಷ್ಯ ಹೆದರಿ ಕಾಲಿಗೆ ಬುದ್ಧಿ ಹೇಳಿದ.

ಮೂರು ವಾರ ಕಳೆಯಿತು. ಒಂದು ದಿನ ಅವನು ರಸ್ತೆಯಲ್ಲಿ ನನ್ನನ್ನು ಅಡ್ಡಗಟ್ಟಿದನು. ಅವನಿಂದ ತಪ್ಪಿಸಿಕೊಳ್ಳಲು ಶಕ್ಯವೇ ಆಗಲಿಲ್ಲ. ಕುಡಿದು ಅವನಿಗೆ ಅಮಲೇರಿತ್ತು. ಸ್ವಲ್ಪ ಹೊತ್ತು ಅವನಿಗೇನು ಬೇಕೆಂದೇ ನನಗೆ ತಿಳಿಯಲಿಲ್ಲ. ನನ್ನ ಕೋಟಿನ ಬಿರಡಿಯನ್ನು ಹಿಡಿದು ನಿಲ್ಲಿಸಿಕೊಂಡು ಅವನು ತನ್ನ ವರದಿ ಊದಿದನು. "ನೀನು ನನ್ನ ಪ್ರಕರಣವನ್ನು ಹಾಳು ಮಾಡಿದ್ದಿ. ನೀನು ನನ್ನ ಪ್ರಕರಣ ತೆಗೆದುಕೊಂಡು ಚಳವಳಿ ಹೂಡಿರದೇ ಇದ್ದರೆ ಅಪೀಲು ಕೊರ್ಟು ನನ್ನ ವಕೀಲರ ವಿನಂತಿಗೆ ಕಿವಿಗೊಡುತ್ತಿತ್ತು. ನಿನ್ನ ಉಪದ್ವ್ಯಾಪವಿಲ್ಲದಿದ್ದರೆ ಏಳು ವರ್ಷ ನಿರರ್ಥಕವಾಗಿ ಜೇಲಿನಲ್ಲಿ ಕೊಳೆಯುವ ಪ್ರಸಂಗ ನನಗೆ ಬರುತ್ತಿರಲಿಲ್ಲ. ನನ್ನ ಇಂದಿನ ದಾರಿದ್ರ್ಯಾವಸ್ಥೆಗೆ ನೀನೇ ಜವಾಬದಾರನಿದ್ದೀ. ಆದ್ದರಿಂದ ನನಗೆ ಸಹಾಯ ಮಾಡುವುದು ನಿನ್ನ ಕರ್ತವ್ಯ."

ಸಂಕ್ಷೇಪವಾಗಿ ಹೇಳುವುದಾದರೆ ನಾನು ಬಾಯಿ ಮುಚ್ಚಿಕೊಂಡು ಅವನ ಕೈಯಲ್ಲಿ ಕೆಲ ರೂಪಾಯಿಗಳನ್ನು ಹಾಕಿ ಪ್ರಸಂಗದಿಂದ ಪಾರಾದೆ. "ದೇವರು ನಿಮಗೆ ಒಳ್ಳೇದು ಮಾಡಲಿ" ಎಂದು ಫ್ರಾಂಕ ಸೆಲವ್ವಿನನು ಕಣ್ಣೀರು ತಂದುಕೊಂಡು ಹೇಳಿ ನನ್ನನ್ನು ಬೀಳ್ಕೊಟ್ಟನು.

ಎರಡನೇ ಬಾರಿ ಅವನು ನನ್ನನ್ನು ಭೆಟ್ಟಿಯಾದಾಗ ಅವನ ರಾಗ ಬೇರೆಯೇ ಆಗಿತ್ತು. ಅವನು ನನ್ನನ್ನು ಹೆದರಿಸಲು ಬಂದಿದ್ದನೆನಿಸಿತು. "ನನ್ನ ಪ್ರಕರಣದಿಂದಲೇ ನಿಮಗೆ ಇಷ್ಟೆಲ್ಲ ಕೀರ್ತಿ ಬಂದಿದೆ. ನನ್ನ ದೆಸೆಯಿಂದಲೇ ನೀವು ಇಷ್ಟು ಹಣ ಸಂಪಾದಿಸಿರಿ. ಈ ಸಂಪತ್ತಿನ ಕೆಲ ಅಂಶ ನನಗೆ ಸಿಗಬಾರದೇಕೆ?" ನಾನು ಅವನಿಗೆ ತಿಳಿ ಹೇಳಲು ಎಷ್ಟೋ ಯತ್ನಿಸಿದೆ. ಅವನ ಈ ಗ್ರಹಿಕೆ ನ್ಯಾಯವಾದುದಲ್ಲ, ಎಂದು. ಆದರೆ ಅವನ ಮುಂದೆ ಯಾವ ಯುಕ್ತಿಯೂ ಸಾಗಲಿಲ್ಲ. ಕಡೆಗೆ ಅವನಿಗೆ ಸ್ವಲ್ಪ ಹಣ ಕೊಟ್ಟು ಕಳಿಸಲೇ ಬೇಕಾಯಿತು.

ಆನಂತರ ಅವನು ನನ್ನ ಮನೆಯಲ್ಲಿ ಮೇಲಿಂದ ಮೇಲೆ ಕಾಣಿಸಿಕೊಳ್ಳಲಾರಂಭಿಸಿದನು. ಮೊದ ಮೊದಲು ಎರಡು ಮೂರು ತಿಂಗಳ ಅಂತರದಲ್ಲಿ, ಆಮೇಲೆ ಮೇಲಿಂದ ಮೇಲೆ ಅವನ ಆಗಮನವಾಗತೊಡಗಿತು.

ಸೋಫಾದ ಮೇಲೆ ಕುಕ್ಕರಿಸಿ ನಿಟ್ಟುಸಿರು ಬಿಟ್ಟು ಒಮ್ಮೆ ಹೇಳಿದ: "ಚಿಕ್ಕಮ್ಮನ ಕೊಲೆ ಮಾಡಿದ ಪಶ್ಚಾತ್ತಾಪದಿಂದ ನಾನು ಸಾಯುತ್ತಿದ್ದೇನೆ. ಇಲ್ಲ, ಇನ್ನು ಸಹಿಸಲು ನನ್ನಿಂದ ಸಾಧ್ಯವೇ ಇಲ್ಲ. ಇದ್ದದ್ದನ್ನೆಲ್ಲ ನಿರ್ವಂಚನೆಯಿಂದ ಬಹಿರಂಗಪಡಿಸಿಬಿಡುತ್ತೇನೆ. ಇದು ನನಗೆ ಘಾತಕವಾಗುವುದೆಂದು ಬಲ್ಲೆ. ಆದರೆ ಏನು ಮಾಡಲಿ? ನನ್ನ ಮನಸಿಗೆ ಶಾಂತಿ ಕೊಡಲು ಬೇರೆ ಉಪಾಯವೇ ಇಲ್ಲ."

ಅವನ ಈ ಪಶ್ಚಾತ್ತಾಪಪ್ರದರ್ಶನದ ಪರಿಣಾಮ ನನಗೆ ಎಷ್ಟು ಭಯಂಕರವಾಗಿ ತೋರಿತೆಂದು ನೀವೇ ಊಹಿಸಿರಿ. ಪ್ರತಿಸಲವೂ ಅವನಿಗೆ ಅಷ್ಟಿಷ್ಟು ಹಣ ಕೊಟ್ಟು, ಅವನ ಈ ಪಶ್ಚಾತ್ತಾಪದ ಜ್ವಾಲೆಯನ್ನು ಶಾಂತಗೊಳಿಸಬೇಕಾಗುತ್ತಿತ್ತು.

ಕಟ್ಟಕಡೆಗೆ ನಾನು ಅವನಿಗೆ ಅಮೇರಿಕಕ್ಕೆ ಹೋಗಲು ಒಂದು ತಿಕೀಟು ಕೊಡಿಸಿದೆ. ಈಗಾದರೂ ಅವನಿಗೆ ಶಾಂತಿ ಸಿಕ್ಕಿದೆಯೋ ಇಲ್ಲವೋ ನಾನರಿಯೆ.

ನೋಡಿರಿ, ಈ ಸೆಲಬ್ರಿನ ಪ್ರಕರಣವೇ ನನ್ನ ಬಾಳಿನ ಶ್ರೇಷ್ಠ ಪ್ರಸಂಗ. ತರುಣರೇ, ನೀವು ಲಿಯನಾರ್ಡ ಆಂಡೇನನ ಮರಣ ವಾರ್ತೆಯನ್ನು ಘೋಷಿಸುವಾಗ ಈ ಕಥೆಯನ್ನೂ ಪ್ರಕಟಿಸಿರಿ.



# ಪ್ರೇಮ-ಸಮಾಧಿ!

## ( ಚೀನ ದೇಶದ ಒಂದು ಕಥೆ )

ಚಾಂಗ ಮತ್ತು ಪೋ ದಂಪತಿಗಳ ಪ್ರೇಮಮಯ ಜೀವನ ಅಖಂಡ ಚೀನದೇಶದಲ್ಲಿ ಆದರ್ಶನಾಗಿತ್ತು. ಪೋಳನ್ನು ರೂಪದಲ್ಲಿ ಸೋಲಿಸುವ ತರುಣಿ ವಿಶ್ವದಲ್ಲಿ ಬೇರೊಬ್ಬಳಿಲ್ಲವೆಂದು ಪಂಡಿತರು ಸಾರುತ್ತಿದ್ದರು.

ಆದರೆ ವಿಧಿಲಿಖಿತವನ್ನು ಯಾರೂ ಅರಿಯರು. ಜ್ವರದಿಂದ ಚಾಂಗನು ಮೃತಪಟ್ಟನು; ನಾಡಿಗೆ ನಾಡೇ ಪೋಳನ್ನು ಸಂತೈಸಲು ಯತ್ನಿಸಿತು; ಯಾರಿಂದಲೂ ಆ ಹೆಣ್ಣುಮಗಳ ಕಣ್ಣೀರ ಕೋಡಿಯನ್ನು ತಡೆಯುವದಾಗಲಿಲ್ಲ.

ಚಾಂಗನು ಸತ್ತ ಹತ್ತನೇ ದಿನ ಮಧ್ಯರಾತ್ರಿ ಬೆಳದಿಂಗಳಲ್ಲಿ ಪೋ ಸ್ಮಶಾನದಲ್ಲಿ ಏಕಾಕಿನಿಯಾಗಿ ಚಾಂಗನ ಗೋರಿಗೆ ಬೀಸಣಿಕೆಯಿಂದ ಗಾಳಿ ಹಾಕುವ ದೃಶ್ಯವನ್ನು ಚಾಂಗನ ಮಿತ್ರನು ಕಂಡು ಕಳವಳಗೊಂಡು, " ತಾಯಿ, ಚಾಂಗನು ಸತ್ತಿರುವನು, ವ್ಯರ್ಥ ಅತನ ಗೋರಿಗೆ ಗಾಳಿ ಹಾಕಿದರೆ ಏನು ಪ್ರಯೋಜನ? ಮನೆಗೆ ನಡೆ. ಇದು ಸ್ಮಶಾನ, '' ಎಂದನು.

ತಗ್ಗಿದ ತನ್ನ ಕಮಲಮುಖವನ್ನು ಪೋ ಮೇಲಕ್ಕೆತ್ತಿ, " ಪೋ, ನಾನು ಅಕಸ್ಮಾತ್ ಸತ್ತರೆ ನೀನು ಮಾತ್ರ ನನ್ನ ಗೋರಿ ಒಣಗುವ ವರೆಗೆ ಬೇರೊಬ್ಬನನ್ನು ಲಗ್ನವಾಗಬೇಡ ಎಂದು ನನ್ನ ಯಜಮಾನ ಸಾಯುವಾಗ್ಗೆ ಅಜ್ಞೆಮಾಡಿರುವನು '' ಎಂದು ಹೇಳಿ ಬೀಸಣಿಕೆಯನ್ನು ಜೋರಿನಿಂದ ಬೀಸಹತ್ತಿದಳು.

--ರ. ರಾ. ನಾ.

*

ಎಷ್ಟೋ ರಾಜಕಾರಣಿಗಳು ಮಾಡುವ ದೊಡ್ಡ ತಪ್ಪೆಂದರೆ, ತಾವು ಜನರಿಂದ ನೇಮಕ ಹೊಂದಿದವರೆಂಬುದನ್ನು ಮರೆತು ದೇವರಿಂದ ನೇಮಕ ಹೊಂದಿದವರೆಂದು ಭಾವಿಸುವದೇ ಆಗಿದೆ.

--ಶ್ರೀಮತಿ ಕ್ಲಾಡ ಪೆಪರ

ಇನ್ನೊಬ್ಬನ ಮೇಲೆ ಅವನ ಒಪ್ಪಿಗೆಯಿಲ್ಲದೆ ಪ್ರಭುತ್ವ ನಡೆಸಲು ಎಂಥ ಶ್ರೇಷ್ಠನಿಗೂ ಅಧಿಕಾರವಿಲ್ಲ.

—ಅಬ್ರಹಾಂ ಲಿಂಕನ್

ಅವರು ಅಂಕೆಗಳ ಚೊಚ್ಚಲು ಮಕ್ಕಳು

ಪಾವೆಂ ಅವರಿಂದ



# ಪ್ರಚಂಡ ಗಣಿತ ಪರಾಕ್ರಮಿಗಳು

೩,೭೫೪ ಕ್ಕೆ ೩,೭೫೪ ರಿಂದ ಐದು ಸಲ ಗುಣಿಸಿದರೆ (೩,೭೫೪$^{೫}$) ಎಷ್ಟಾಗುತ್ತದೆ? ೨೮,೨೪,೭೫,೨೪೯ ಈ ಸಂಖ್ಯೆಯ ೧೦ ನೇ ಮೂಲ (10th root) ಎಷ್ಟು? ಕಾಗದ ಪೆನ್ಸಿಲು ಇಲ್ಲದೆ ಈ ಪ್ರಶ್ನೆಗಳಿಗೆ ಒಂದು ಸೆಕೆಂದಿನಲ್ಲಿ ನೀವು ಉತ್ತರ ಹೇಳಬಲ್ಲಿರಾ?

ಇಲ್ಲ? ಆದರೆ ೮೦ ವರ್ಷದ ವೃದ್ಧ ಸುಂದರ ರಾಜ ರಾಯರು ಹೇಳಬಲ್ಲರು. ಬೆಂಗಳೂರಿನವರಾದ ಅವರು ಈಚೆಗೆ ಹುಬ್ಬಳ್ಳಿಗೆ ಬಂದಿದ್ದಾಗ ಸುದ್ದಿಗಾರರ ಮುಂದೆಯೂ ಶಾಲೆ ಕಾಲೇಜುಗಳ ಪ್ರೊಫೆಸರ ಹಾಗು ವಿದ್ಯಾರ್ಥಿಗಳ ಮುಂದೆಯೂ ತಮ್ಮ "ಗಣಿತಪರಾಕ್ರಮ"ವನ್ನು ಪ್ರದರ್ಶಿಸಿದರು. ಯಾವುದೇ ಸಂಖ್ಯೆಯ ೧೫ ನೇ ಘಾತ (power) ವನ್ನು ಮತ್ತು ೧೫ ನೇ ಮೂಲ (root) ವನ್ನು ಕೂಡ ಕ್ಷಣಾರ್ಧದಲ್ಲಿ ಹೇಳಬಲ್ಲೆವೆಂದು ಅವರು ಸಡ್ಡು ಹೊಡೆದಿದ್ದಾರೆ. ಕ್ರಿ. ಶ. ೧೬೦೦ ರಿಂದ ೨೧೦೦ ರ ವರೆಗಿನ ಯಾವುದೇ ವರ್ಷದ ಯಾವುದೇ ತಿಂಗಳ ಯಾವುದೇ ತಾರೀಕು ಯಾವ ವಾರ ಬೀಳುತ್ತದೆಂದು ಕೂಡ ಅವರು ಅಷ್ಟೇ ಕ್ಷಿಪ್ರವಾಗಿ ಹೇಳಬಲ್ಲರು.

ಸುಂದರರಾಜ ರಾಯರಿಗೆ ಈ ಕೌಶಲ ಹೇಗೆ ಬಂತು? ಸೂರ್ಯನಾರಾಯಣ ದೇವನು ಅವರ ೨೦ ನೇ ವಯಸ್ಸಿನಲ್ಲಿ ಕನಸಿನಲ್ಲಿ ಬಂದು ಅನುಗ್ರಹಿಸಿದನಂತೆ. ತಮ್ಮದೇ ಒಂದು "ಮಾನಸಿಕ ಗಣಿತ" ಪದ್ಧತಿಯಿದೆ. ಅದನ್ನು ಯಾರಿಗೆ ಬೇಕಾದರೂ ಕಲಿಸಬಹುದು ಎಂದೂ ಅವರು ಹೇಳುತ್ತಾರೆ. ಆದರೆ ಅದಕ್ಕೆ ಅವರು ಕೇಳುವ ಪ್ರತಿಫಲದ ಮೊತ್ತ ಬಹಳ. ಆದ್ದರಿಂದ ನಿಮ್ಮ ನಮ್ಮಂಥವರಿಗೆ ಅವರ ಮಾತನ್ನು ಒರೆಗೆ ಹಚ್ಚುವುದು ಕಠಿಣವಾಗಿದೆ.

ತಾವು ತಮ್ಮೀ ಕೌಶಲ್ಯವನ್ನು ತಮ್ಮ ಮೂವರು ಮಕ್ಕಳಿಗೆ ಬಹಳ ಚಿಕ್ಕಂದಿನಲ್ಲೇ ಹೇಳಿಕೊಟ್ಟದ್ದಾಗಿ ಅವರು ಹೇಳುತ್ತಾರೆ. ಅವರು ಹೇಳಿಕೊಟ್ಟಿದ್ದರೆಂಬುದು ಇನ್ನೂ ವಾದಗ್ರಸ್ತವಾಗಿಯೇ ಇದೆ. (ಅವರ ಮಗಳು ಅದನ್ನು ನಿರಾಕರಿಸಿದ್ದಾಳೆ). ಆದರೆ ಅವರ ಮೂವರು ಮಕ್ಕಳು ನಾಲ್ಕೈದು ವರ್ಷದವರಾಗಿರುವಾಗಲೇ ವಿಶ್ವವಿದ್ಯಾಲಯದ ಪ್ರೊಫೆಸರರನ್ನು ದಂಗುಬಡಿ

ಸುವ ಗಣಿತಪರಾಕ್ರಮ ತೋರಿಸಿದ್ದರೆಂಬುದಕ್ಕೆ ಪುರಾವೆಗಳಿವೆ. ಮಕ್ಕಳಲ್ಲಿ ಇಬ್ಬರು ತೀರಿಕೊಂಡರು. ಉಳಿದವಳು ಹಿರಿಯಾಕೆ ಶಕುಂತಲಾ ದೇವಿ. ೧೯೫೧ ರಿಂದ ನಾಲ್ಕೈದು ವರ್ಷ ವಿದೇಶ ಪ್ರವಾಸ ಮಾಡಿ ಗಣಿತಜ್ಞರನ್ನು ಬೆರಗುಗೊಳಿಸಿ ಇದೀಗ ಅವಳು ಭಾರತಕ್ಕೆ ಮರಳಿದ್ದಾಳೆ.

೧೯೫೧ ರಲ್ಲಿ ಲಂಡನ್ನಿನಲ್ಲಿ ಶಕುಂತಲಾದೇವಿ ( ಆಗ ೧೯ ವರ್ಷದವಳು ) ೨,೪೧,೩೭,೫೬೯ ಎಂಬ ಸಂಖ್ಯೆಯ ಘನಮೂಲವೆಷ್ಟೆಂಬುದಕ್ಕೆ ೨೮೯ ಎಂದು ಕಣ್ಮುಚ್ಚಿ ತೆರೆಯುವುದರೊಳಗೆ ಉತ್ತರವಿತ್ತಳು. ಇಂಥ ಅನೇಕ ಮೂಲಗಳನ್ನೂ ಘಾತಗಳನ್ನೂ ಅಷ್ಟೇ ಸುಲಭವಾಗಿ ಕಂಡುಹಿಡಿದಳು. ಇಟಲಿಯಲ್ಲಿ ಅವಳಿಗೂ ಒಂದು ವಿದ್ಯುತ್ ಗಣನಾಯಂತ್ರಕ್ಕೂ (ಇಲೆಕ್ಟ್ರಾನಿಕ್ ಕ್ಯಾಲ್ಕುಲೇಟರ್) ಜಿದ್ದು ಹಚ್ಚಿದಾಗ ಅವಳೇ ಗೆದ್ದಳು. ಯಂತ್ರವು ಅವಳಿಗಿಂತ ತಡವಾಗಿ ಉತ್ತರ ಹೇಳಿದ್ದಲ್ಲದೆ ತಪ್ಪು ಉತ್ತರವನ್ನು ಹೇಳಿತು.

ಶಕುಂತಲಾ ದೇವಿಯನ್ನು ಕೇಳಿದರೆ ತನಗೆ ಇದು "ಹೇಗೋ ಬರುತ್ತದೆ" ಅನ್ನುತ್ತಾಳೆ. ಅರ್ಥಾತ್ ಅವಳಿಗೆ ಗೊತ್ತಿಲ್ಲ.

ವಿಜ್ಞಾನಿಗಳು ಇಂಥ ಅನೇಕ ಪ್ರಚಂಡರನ್ನು ಪರೀಕ್ಷಿಸಿ ಈ ನಿರ್ಣಯಕ್ಕೆ ಬಂದಿದ್ದಾರೆ: ಯಾವುದೊಂದು ವಿಲಕ್ಷಣ ಕೌಶಲವನ್ನು ಪ್ರದರ್ಶಿಸುವ ಜನರು ಅದರಲ್ಲಿ ತಮ್ಮ ಇಡೀ ಮನಸ್ಸನ್ನು ತೊಡಗಿಸಿರುವರಲ್ಲದೆ, ಅದಕ್ಕಾಗಿ ಅತುಲ ಪರಿಶ್ರಮವನ್ನೂ ಮಾಡುವವರಾಗಿರುತ್ತಾರೆ. ಈ ಗಣಿತ ಪ್ರಚಂಡರಿಗೆ ಅಂಕೆಗಳೆಂದರೆ ಜೀವವಾಗಿರುತ್ತದೆ. ಒಂದು ಸುದೀರ್ಘ ಸಂಖ್ಯೆ ನಮಗೆ—ನಿಮಗೆ ಅರ್ಥರಹಿತ ಅಂಕೆಗಳ ಜಾಲವಾಗಿದ್ದರೆ ಅವರ ಪಾಲಿಗೆ ಅದು ಅರ್ಥಪೂರ್ಣವಾಗಿರುತ್ತದೆ. ಜೀವಮಾನದ ಪ್ರಾರಂಭದಲ್ಲೇ ಅವರಿಗೆ ಸಂಖ್ಯೆಗಳ ಮೋಹ ತಗಲಿ ಅವುಗಳಲ್ಲಿ ನಿರಂತರ ಪ್ರಯೋಗಗಳನ್ನು ನಡೆಸುವುದರಿಂದ ಅವರಿಗೆ ಸಂಖ್ಯೆಗಳ ರಚನೆಯಲ್ಲಿನ ವೈಶಿಷ್ಟ್ಯಗಳು ಮನಸ್ಸಿನಲ್ಲಿ ಮುದ್ರಿತವಾಗಿಬಿಡುತ್ತವೆ.

ಸುಂದರರಾಜರನ್ನು ಅವರ ಹೋಟೆಲಿನ ಕೋಣೆಯಲ್ಲಿ ಕಂಡ ಮೇಲೆ ನನಗೆ ವಿಜ್ಞಾನಿಗಳ ಈ ತರ್ಕದಲ್ಲಿ ತಥ್ಯವಿದೆಯೆನಿಸಿತು. ಅವರ ಕೋಣೆಯಲ್ಲಿ ಅವರು ಗುಣಿಸಿಟ್ಟ ಸಂಖ್ಯೆಗಳ ಕಡತ ಕಡತಗಳೇ ಇದ್ದವು. ೮೦ ನೇ ವಯಸ್ಸಿನಲ್ಲಿ ಅವರಿನ್ನೂ ಗುಣಿಸುತ್ತಲೇ ಇದ್ದಾರೆ. ಬಹುಶಃ ಒಮ್ಮೆ ಮಾಡಿದ ಲೆಕ್ಕ ಅವರ ತಲೆಯಲ್ಲಿ ಶಾಶ್ವತವಾಗಿ ಅಚ್ಚೊತ್ತಿಬಿಡುತ್ತದೆ.

ಈ ಪ್ರಚಂಡರಿಗೆ ಸಂಖ್ಯೆಗಳಲ್ಲಿ ಹೊರತು ಬೇರೆ ವಿಚಾರಗಳಲ್ಲಿ ಆಸ್ಥೆಯಾಗಲಿ ಕೌಶಲವಾಗಲಿ ಇರುವುದು ವಿರಳವೆಂದೂ ವಿಜ್ಞಾನಿಗಳ ಮತ. ಸುಂದರರಾಜರನ್ನೇ ನೋಡಿರಿ. ಅವರಿಗೆ ತಮ್ಮ ಸಂಖ್ಯಾಪ್ರಪಂಚದ ಹೊರಗೆ ಅಸಕ್ತಿ ಕಡಿಮೆಯಿದೆಯೆಂದು ಅವರೊಡನೆ ಚರ್ಚಿಸಿದಾಗ ನನಗನಿಸಿತು. ಅವರು ಶಾಲೆಗೆ ಹೋದದ್ದೇ ಇಲ್ಲೆಂದರೂ ಸಲ್ಲುವುದು. ಹೀಗೆ ಇತರ ಜ್ಞಾನಕ್ಷೇತ್ರಗಳಲ್ಲಿ ಅವರಿಗೆ ಗಮನವೇ ಇಲ್ಲವಾಗಿರುವುದರಿಂದ ಸಂಖ್ಯೆಗಳ ಮೇಲೆ ಅವರು ತಮ್ಮ ಸಂಪೂರ್ಣ ಪ್ರಜ್ಞೆಯನ್ನು ಕೇಂದ್ರೀಕರಿಸಿರಬೇಕು.

ಅವರ ಮಗಳು ಶಕುಂತಲಾದೇವಿ ಆನರ್ಸ್ ಆಗಿರುವುದು ನಿಜ. ಆದರೆ ಅವಳಿಗೂ ಸಂಖ್ಯಾಪ್ರಪಂಚದಲ್ಲಿಯೇ ಆಸಕ್ತಿ. ಅದರಲ್ಲಿಯೂ ಘಾತ ಮತ್ತು ಮೂಲಗಳೆಂದರಾಯಿತು. ಪ್ರಾರಂಭದಲ್ಲಿ ಅವಳಿಗೆ ದೊಡ್ಡ ದೊಡ್ಡ ಸಾದಾ ಗುಣಾಕಾರ ಲೆಕ್ಕಗಳಲ್ಲಿ ಪ್ರಾವೀಣ್ಯವಿತ್ತು. ಈಗ ಅವಳಿಗೆ ಅದರ ಮೇಲೆ ಆಸ್ಥೆ ಉಳಿದಿಲ್ಲವಾದ್ದರಿಂದ ಆ ಶಕ್ತಿ ಕುಂದಿದೆಯೆಂದು ಬ್ರಿಟಿಶ ಪತ್ರಿಕೆಯೊಂದು ಬರೆದಿದೆ. ಈಗ ಅವಳ ಆಸ್ಥೆ ಮೂಲಗಳಲ್ಲಿಯೂ ಘಾತಗಳಲ್ಲಿಯೂ ಕೇಂದ್ರಿತವಾಗಿದ್ದು ಅವುಗಳಲ್ಲಿ ಅನೇಕ ಆಶ್ಚರ್ಯಕರ ಉತ್ತರಗಳನ್ನೀಯುತ್ತಾಳೆ. ಅವಳ ತಂದೆಯಾದರೂ ಗುಣಾಕಾರ ಭಾಗಹಾರಗಳ ಬಗ್ಗೆ ಆಸ್ಥೆ ತೋರಿಸುವುದಿಲ್ಲ.

ಸುಂದರರಾಜ ರಾಯರ ಮತ್ತು ಅವರ ಮಗಳ ಈ ಗಣನಾಕೌಶಲ ಅಪರೂಪವೇನೋ ನಿಜ. ಆದರೆ ಇವರು ಈ ರಂಗದಲ್ಲಿ ಮೊದಲಿಗರೇನೂ

ಅಲ್ಲ. ಟಾಮ್ ಫುಲ್ಲರನೆಂಬ ಅಮೇರಿಕನ್ ನಿರಕ್ಷರಿ ನಿಗ್ರೋ ( ಇ. ೧೭೧೦-೯೦ ) ಮನುಷ್ಯನು ಒಂಭತ್ತು ಸ್ಥಾನದ ಎರಡು ಸಂಖ್ಯೆಗಳನ್ನು, ಉದಾಹರಣೆಗೆ ೭೩,೧೬,೫೮,೨೦೯ ಮತ್ತು ೫೭,೮೩,೬೯,೭೩೦ಗಳನ್ನು ಬಾಯಿಂದಲೇ ಗುಣಿಸಿ ಉತ್ತರ ಹೇಳುತ್ತಿದ್ದನು.

ಡರ್ಬಿಶಾಯರ ( ಇಂಗ್ಲಂಡ್ ) ದಲ್ಲಿ ಅದೇ ಸುಮಾರಿಗೆ ಜೆಡೆದಿಯಾ ಬಕ್ಸ್ಟನ್ನನೆಂಬ ನಿರಕ್ಷರಿ ಕೂಲಿಕಾರನಿದ್ದನು. ಅವನು ಇತರ ವಿಷಯಗಳಲ್ಲಿ ತೀರ ಹೆಡ್ಡ, ಆದರೆ ಅವನಿಗೆ ಲೆಕ್ಕದ ಹುಚ್ಚು. ಅವನು ೩೯ ಸ್ಥಾನಗಳುಳ್ಳ ಒಂದು ಸಂಖ್ಯೆಯ ವರ್ಗವನ್ನು ಹತ್ತು ವಾರಗಳಲ್ಲಿ ಮಾನಸಿಕವಾಗಿಯೇ ಗುಣಿಸಿದನು. ಇನ್ನೊಮ್ಮೆ ಲಂಡನ್ನಿನಲ್ಲಿ ಬಹಿರಂಗವಾಗಿ ಅವನ ಪರೀಕ್ಷೆ ಮಾಡಿದಾಗ, ೨೩,೧೪೫ ಯಾರ್ಡ್ ಅಗಲ, ೫೬,೪೨,೭೩೨ ಯಾರ್ಡ್ ಉದ್ದ ಮತ್ತು ೫೪,೯೬೫ ಯಾರ್ಡ್ ಎತ್ತರದ ಒಂದು ಘನದಲ್ಲಿ ಎಷ್ಟು ೧|೮ ಘನ ಇಂಚುಗಳಿವೆಯೆಂದು ಕೇಳಲಾಯಿತು. ಐದು ತಾಸುಗಳ ನಂತರ ಅವನು ಉತ್ತರವಿತ್ತನು. ಉತ್ತರ ೨೮ ಸ್ಥಾನಗಳುಳ್ಳ ಮಹಾ ಸಂಖ್ಯೆಯಾಗಿತ್ತು. ಇದರಲ್ಲಿ ಇನ್ನೂ ಆಶ್ಚರ್ಯವೆಂದರೆ ಆ ಮನುಷ್ಯ ಈ ಐದು ತಾಸುಗಳ ಉದ್ದಕ್ಕೂ ತನ್ನ ಬೇರೆ ಸಾಮಾನ್ಯ ಕೆಲಸಗಳನ್ನೂ ಸಂಭಾಷಣೆಗಳನ್ನೂ ಸಾಗಿಸುತ್ತಲೇ ಇದ್ದನು. ಆದರೆ ತಲೆಯ ಒಂದು ಮೂಲೆಯಲ್ಲಿ ಲೆಕ್ಕ ನಡೆದೇ ಇತ್ತು !

ಆರನೇ ವಯಸ್ಸಿನಲ್ಲೇ ಗಣಿತ ಪ್ರಚಂಡನಾಗಿದ್ದ ಅಮೇರಿಕದ ಜೆರಾ ಕೋಲಬರ್ನನು (೧೮೦೪-೪೦) ತನ್ನ ಹತ್ತನೇ ವಯಸ್ಸಿನಲ್ಲಿ ೪,೨೯,೪೯,೬೭,೨೯೭ ಈ ಸಂಖ್ಯೆಯ ಅವಯವಗಳನ್ನು ಮನಸಿನಲ್ಲೇ ತೆಗೆದು ೬೭,೦೦,೪೧೭ × ೬೪೧ ಎಂದು ಕ್ಷಣಾರ್ಧದಲ್ಲಿ ಉತ್ತರ ಹೇಳಿದನು. ಆದರೆ ಬಡಪಾಯಿಗೆ ಶಿಕ್ಷಣ ಕೊಟ್ಟಕೂಡಲೆ ಅವನ ಈ ಕೌಶಲ ಇಳಿಮುಖವಾಗಿ ಹೋಯಿತು.

ಆದರೆ ಗಣನಾಕೌಶಲದಲ್ಲಿ ಹ್ಯಾಂಬರ್ಗಿನ ಜೊಹಾನ ಡೇಸನನ್ನು ( ೧೮೨೪-೬೧ ) ಸರಿಗಟ್ಟುವವರು ಇಂದಿಗೂ ಹುಟ್ಟಿಲ್ಲ. ಅವನಿಗೆ ಅತಿಸರಳವಾದ ಗಣಿತ ಪ್ರಮೇಯ ಕೂಡ ಅರ್ಥವಾಗುತ್ತಿರಲಿಲ್ಲ. ಅಷ್ಟು ದಡ್ಡನಾತ. ಆದರೆ ಸಂಖ್ಯೆಗಳ ಮಟ್ಟಿಗೆ ಅವನು ರಾಜ. ೮ ಸ್ಥಾನಗಳ ಯಾವದೇ ಎರಡು ಸಂಖ್ಯೆಗಳನ್ನು ಅವನು ೫೪ ಸೆಕೆಂದುಗಳಲ್ಲಿಯೂ ೨೦ ಸ್ಥಾನಗಳುಳ್ಳ ಎರಡು ಸಂಖ್ಯೆಗಳನ್ನು ಆರು ನಿಮಿಷಗಳಲ್ಲಿಯೂ ೧೦೦ ಸ್ಥಾನಗಳುಳ್ಳ ಎರಡು ಸಂಖ್ಯೆಗಳನ್ನು ೮॥ ತಾಸುಗಳಲ್ಲಿಯೂ ಮನಸಿನಲ್ಲೇ ಗುಣಿಸುತ್ತಿದ್ದನವನು. ೬೦ ಸ್ಥಾನಗಳುಳ್ಳ ಸಂಖ್ಯೆಯ ವರ್ಗಮೂಲವನ್ನು ಸೆಕೆಂದುಗಳಲ್ಲಿ ಹೇಳುತ್ತಿದ್ದನಾತ.

ಆದರೆ ದಡ್ಡರೂ ನಿರಕ್ಷರಿಗಳೂ ಮಾತ್ರ ಈ ಗಣನಾ ಕೌಶಲದಲ್ಲಿ ಹೆಸರಾಗಿದ್ದರೆಂದು ತಿಳಿದರೆ ಅದು ತಪ್ಪು. ೧೯ನೇ ಶತಮಾನದ ಶ್ರೇಷ್ಠತಮ ಗಣಿತಶಾಸ್ತ್ರಜ್ಞನಾದ ಗಾಸನು (೧೭೭೭-೧೮೫೫) ೩ ವರ್ಷದವನಿದ್ದಾಗ ತನ್ನ ತಂದೆ ಲೆಕ್ಕದಲ್ಲಿ ತಪ್ಪಿದ್ದನ್ನು ತೋರಿಸಿಕೊಟ್ಟಿದ್ದನು. ಅವನ ಗಣಿತಕೌಶಲ ಶಿಥಿಲವಾಗದೆ ಕೊನೆವರೆಗೂ ಉಳಿಯಿತು.

ಮುಂದೆ ಅಮೇರಿಕದಲ್ಲಿ ಪ್ರಸಿದ್ಧ ಖಗೋಲಶಾಸ್ತ್ರಜ್ಞನಾದ ಟಿ. ಎ. ಸಾಫರ್ಡನು ೯ನೇ ವಯಸ್ಸಿನಲ್ಲಿ ತಾನೇ ಗುಣಿಸಿದ ಪಂಚಾಂಗವನ್ನು ಪ್ರಕಟಿಸಿದನಲ್ಲದೆ ಗ್ರಹಣಗಳನ್ನು ಗುಣಿಸಲು ಹೊಸ ಪದ್ಧತಿಯನ್ನು ಕಂಡುಹಿಡಿದನು. ೧೦ನೇ ವಯಸ್ಸಿನಲ್ಲಿ ೧೫ ಸ್ಥಾನಗಳುಳ್ಳ ಎರಡು ಸಂಖ್ಯೆಗಳನ್ನು ಗುಣಿಸಿ ಒಂದು ಮಿನಿಟಿನೊಳಗೆ ೧೩೩,೪೯೧,೮೫೧,೨೦೮,೫೬೬,೯೨೫,೦೧೬,೬೫೮,೨೯೯,೯೪೧,೫೮೩,೨೫೫ ಎಂದು ಅವನು ಉತ್ತರ ಕೊಟ್ಟನು.

ಒಂದು ಲಂಬಕವು ಒಂದು ಸೆಕೆಂದಿಗೆ ೯||| ಇಂಚು ಚಲಿಸಿದರೆ ಅದು ೭ ವರ್ಷ, ೧೪ ದಿನ, ೨ ತಾಸು, ೧ ನಿಮಿಷ, ೫೬ ಸೆಕೆಂದುಗಳಲ್ಲಿ ಎಷ್ಟು ದೂರ ಚಲಿಸುತ್ತದೆ ? ( ವರ್ಷವೆಂದರೆ ೩೬೫ ದಿನ, ೫ ತಾಸು, ೪೮ ನಿಮಿಷ, ೫೫ ಸೆಕೆಂದುಗಳು ). ಇದಕ್ಕೆ ಒಂದೇ ನಿಮಿಷದಲ್ಲಿ

೨೧೬,೫೬,೨೫,೭೪೪॥ ಇಂಚು ಎಂದು ಸರಿಯಾದ ಉತ್ತರವಿತ್ತ ಜಾರ್ಜ ಬಿಡ್ಡರನಿಗೆ ಆಗ ೧೧ ವರ್ಷ ಮಾತ್ರವಾಗಿತ್ತು. ಕಲ್ಲು ಕುಟಿಗನ ಮಗನಾಗಿದ್ದ ಅವನಿಗೆ ಶಿಕ್ಷಣ ಕೊಟ್ಟ ನಂತರ ಜಾರ್ಜ ಬಿಡ್ಡರನು (೧೮೦೬-೭೮) ಜಗತ್ತಿನ ಶ್ರೇಷ್ಠತಮ ಇಂಜನಿಯರರಲ್ಲೊಬ್ಬನಾದನು. ಅವನೇ ಇಂಗ್ಲಂಡಿನ ವಿಕ್ಟೋರಿಯಾ ಧಕ್ಕೆಕಟ್ಟಿದವನು. ಅವನ ಗಣಿತ ಶಕ್ತಿ ವಯಸ್ಸುಮೀರಿದಂತೆ ಏರಿತೇ ವಿನಾ ತಗ್ಗಲಿಲ್ಲ. ಅವನ ವಕೀಲ ಮಗನಿಗೂ ಈ ಶಕ್ತಿ ಇಳಿದುಬಂತು.

ಈ ಅಸಾಧಾರಣ ಶಕ್ತಿಯ ರಹಸ್ಯವನ್ನು ಕೆಲ "ಪ್ರಚಂಡ"ರು ಸ್ವತಃ ಸ್ವಲ್ಪ ಮಟ್ಟಿಗೆ ಹೊರಗೆಡಹಿದ್ದಾರೆ. ಅದು ಕೇವಲ ದೈವದತ್ತ ವರವಾಗಿರದೆ ಅಂಕೆಗಳನ್ನುನೆನಪಿಟ್ಟುಕೊಳ್ಳುವ ಅಪರೂಪ ಶಕ್ತಿ, ಸಂಖ್ಯೆಗಳ ರಚನಾವೈಶಿಷ್ಟ್ಯವನ್ನು ಗುರುತಿಸಿಕೊಳ್ಳುವ ಸಾಮರ್ಥ್ಯ, ಅದ್ಭುತ ಏಕಾಗ್ರತೆ ಮತ್ತು ಸಂಖ್ಯಾಪ್ರೇಮ ಇವುಗಳ ಅಪೂರ್ವ ಸಂಯೋಗದಿಂದ ಹುಟ್ಟುತ್ತದೆ. ಅವರು ಲೆಕ್ಕದಲ್ಲಿ ಕೆಲ ಒಳಹಾದಿ ಮತ್ತು ತಂತ್ರಗಳನ್ನೂ ಉಪಯೋಗಿಸುತ್ತಾರೆ.

ಪ್ರಚಂಡರಲ್ಲಿ ಹೆಸರಿಸಬಹುದಾದ ಅಮೇರಿಕದ ಲೆಸ್ಲಿ ಮಿಚೆಲ್ಲರು ಈ ತಂತ್ರಗಳ ಕೆಲ ಆಶ್ಚರ್ಯಕರ ಉದಾಹರಣೆಗಳನ್ನು ಕೊಟ್ಟಿದ್ದಾರೆ. ಒಂದು ಸಂಖ್ಯೆಯ ಕೊನೆಯ ಅಂಕೆಗಳು, ಅಂಕೆಗಳ ಸರಣಿಯ ರಚನೆಗಳು ಇವೇ ಮೊದಲಾದ ಲಕ್ಷಣಗಳಿಂದ ವರ್ಗಮೂಲ ಘನಮೂಲಗಳನ್ನು ಸುಲಭವಾಗಿ ಗೊತ್ತುಹಚ್ಚಬಹುದೆಂದು ಅವರನ್ನುತ್ತಾರೆ. ಉದಾಹರಣೆಗೆ ೯ ರಿಂದ ಅಂತ್ಯವಾಗುವ ಯಾವುದೇ ಸಂಖ್ಯೆಯ ಘಾತದ ಕೊನೆಯ ಅಂಕೆ ಯಾವಾಗಲೂ ೯ ಇಲ್ಲವೆ ೧ ಆಗಿರುತ್ತದೆ. ಅದೇ ಪ್ರಕಾರ ೬ ಮತ್ತು ೫ ರಿಂದ ಅಂತ್ಯವಾಗುವ ಸಂಖ್ಯೆಗಳ ಘಾತಗಳೆಲ್ಲ ೬ ಮತ್ತು ೫ ರಲ್ಲೇ ಕೊನೆಗೊಳ್ಳುತ್ತವೆ.

ಒಂದು ಸಂಖ್ಯೆಯು ಪರಿಪೂರ್ಣ (perfect) ವರ್ಗ ಅಥವಾ ಘನವಿದ್ದು ಅದರ ವರ್ಗಮೂಲ ಅಥವಾ ಘನಮೂಲವು ಮೂರು ಸ್ಥಾನಗಳೊಳಗಿನದಾಗಿದ್ದರೆ ನೋಡಿದ ಮಾತ್ರಕ್ಕೆ ಲಕ್ಷಣಗಳ ಮೇಲಿಂದ ಉತ್ತರ ಹೇಳಲು ಬರುತ್ತದೆ. ಇದು ಸಾಮಾನ್ಯರಿಗೆ ಸುಲಭವಲ್ಲೆನಿಸಿದರೂ ಸಂಖ್ಯೆಗಳನ್ನು ಕಂಡೊಡನೆ ಬುದ್ಧಿಯು ಭರದಿಂದ ಚಲಿಸತೊಡಗುವ ಪ್ರಚಂಡರಿಗೆ ಅದು ಕ್ಷಣಮಾತ್ರದ ಕೆಲಸವೆಂದು ಮಿಚೆಲ್ಲರ ಮತ. ಪ್ರಚಂಡರು ಕೇವಲ ಜ್ಞಾಪಿಸಿಕೊಳ್ಳುವುದಿಲ್ಲ. ಪ್ರಚಂಡ ವೇಗದಿಂದ ಗುಣಿಸುತ್ತಲೂ ಇರುತ್ತಾರೆ.

ಒಟ್ಟಿನ ಮೇಲೆ ಅಂಕೆಗಳಲ್ಲಿ ಅಪಾರ ಪ್ರೀತಿಯಿರುವುದೇ ಈ ಗಣಿತಪ್ರಚಂಡರ ಗುಟ್ಟು.

## ಗಣಿತದ ಈ ಚಮತ್ಕಾರ ನಿಮಗೆ ಗೊತ್ತಿದೆಯೆ ?

೧ × ೯ + ೨ = ೧೧
೧೨ × ೯ + ೩ = ೧೧೧
೧೨೩ × ೯ + ೪ = ೧೧೧೧
೧೨೩೪ × ೯ + ೫ = ೧೧೧೧೧
೧೨೩೪೫ × ೯ + ೬ = ೧೧೧೧೧೧
೧೨೩೪೫೬ × ೯ + ೭ = ೧೧೧೧೧೧೧
೧೨೩೪೫೬೭ × ೯ + ೮ = ೧೧೧೧೧೧೧೧
೧೨೩೪೫೬೭೮ × ೯ + ೯ = ೧೧೧೧೧೧೧೧೧
೧೨೩೪೫೬೭೮೯ × ೯ + ೧೦ = ೧೧೧೧೧೧೧೧೧೧

—ಶ್ರೀಕಾಂತ ಮಳಗಿ.

# ಸುರತ

ಗಂಗಾಧರ

ಈ ಶತಕದ ಆರಂಭದಲ್ಲಿ, ಶೇಕ್ಸಪಿಯ-ರನ 'ಮರ್ಚಂಟ್ ಆಫ್ ವೆನಿಸ್' ನಾಟಕವನ್ನು ಕನ್ನಡಕ್ಕೆ ಭಾಷಾಂತರಿಸಿದ ಕೆರೂರ ವಾಸುದೇವಾಚಾರ್ಯರು ಅದಕ್ಕೆ 'ಸುರತ ನಗರದ ಶ್ರೇಷ್ಠಿ' ಎಂದು ಹೆಸರಿಟ್ಟಿದ್ದರು. ಅವರು ಪ್ರಾಸಕ್ಕಾಗಿ ಆ ಹೆಸರಿಟ್ಟಿರಬಹುದಾದರೂ ಸುರತ ನಗರವು ಮಧ್ಯಯುಗದಲ್ಲಿ ಪ್ರಸಿದ್ಧ ವ್ಯಾಪಾರ ಕೇಂದ್ರವಾಗಿತ್ತೆಂಬುದು ಅಕ್ಷರಶಃ ನಿಜ. ಅದರ ಸಂಪತ್ತಿನ ಕಥೆಗಳನ್ನು ಕೇಳಿಯೇ ಬ್ರಿಟಿಶರು ಭಾರತಕ್ಕೆ ಬರಲು ಉತ್ಸಾಹಿತರಾದರು. ಅಲ್ಲಿಯೇ ಅವರು ತಮ್ಮ ಮೊದಲ ವ್ಯಾಪಾರ ಠಾಣೆಗಳಲ್ಲೊಂದನ್ನು ಸ್ಥಾಪಿಸಿದರು.

ಇಂಗ್ಲಂಡಿನಲ್ಲಿ ೧ನೇ ಜೇಮ್ಸ ರಾಜ್ಯವಾಳುತ್ತಿದ್ದ ಕಾಲವದು. ಅಲ್ಲಿ ಚಹ, ಕಾಫಿ, ತಂಬಾಕು ಮತ್ತು ಸಕ್ಕರೆಗಳ ಅಭಾವ ತುಂಬ ಇದ್ದಿತು. ಆದರೆ ಇವಕ್ಕಿಂತಲೂ ಅಡಿಗೆಗೆ ರುಚಿಯನ್ನೀಯುವ ಮತ್ತು ಇಂಗ್ಲಂಡಿನ ವಿಪರೀತ ಚಳಿಯಲ್ಲಿ ಮಾಂಸವನ್ನು ಕಾಯ್ದಿಡಲು ಬೇಕಾಗುತ್ತಿದ್ದ ಮಸಾಲೆ ಸಾಮಾನುಗಳ ಅಗತ್ಯ ಜನರಿಗೆ ಹೆಚ್ಚಾಗಿತ್ತು.

ಭಾರತದಲ್ಲಿ ಮಸಾಲೆ ಸಾಮಾನುಗಳು ವಿಪುಲವಾಗಿವೆ. ಸುರತ ಬಂದರಕ್ಕೆ ಹೋದರೆ ಸಾಕು, ಬೇಕಷ್ಟನ್ನು ಹೇರಿಕೊಂಡು ಬರಬಹುದು ಎಂಬುದನ್ನು ಇಂಗ್ಲಂಡಿನ ಜನ ಕೇಳಿ ಬಲ್ಲವರಾಗಿದ್ದರು. ಇಷ್ಟೇ ಅಲ್ಲ, ತಾಪಿ ನದಿ ದಂಡೆಯಲ್ಲಿದ್ದ ಈ ಪುಟ್ಟ ನಗರದ ಅಪಾರ ಸಂಪತ್ತಿನ ಬಗ್ಗೆ ನಾನಾ ಕಥೆಗಳನ್ನು ಅವರು ಕೇಳಿದ್ದರು.

ಆ ಕಾಲದಲ್ಲಿ ಸುರತ ನಗರವು ಭಾರತದಲ್ಲಿ ಅತಿ ಮಹತ್ವದ ಬಂದರವಾಗಿತ್ತು. ಭಾರತದ ಸಾಗರೋತ್ತರ ವ್ಯಾಪಾರದ ಬಹ್ವಂಶ ಸುರತ ಬಂದರದ ಮಾರ್ಗವಾಗಿಯೆ ನಡೆಯುತ್ತಿತ್ತು.

೧೬೦೮ ನೇ ಇಸವಿಯ ಅಗಸ್ಟತಿಂಗಳಲ್ಲಿ ಈಸ್ಟ ಇಂಡಿಯಾ ಕಂಪನಿಯ ಮೊದಲನೆಯ ಹಡಗು 'ಹೆಕ್ಟರ್' ಸುರತಕ್ಕೆ ಬಂದಿತು. ಅದರಲ್ಲಿ ವಿಲಿಯಂ ಹಾಕಿನ್ಸ್ ಮತ್ತು ಇನ್ನಿತರ ಕೆಲ ಸಾಹಸಿ ತರುಣರಿದ್ದರು. ಸಾವಿರಾರು ಮೈಲುಗಳ ಸಮುದ್ರ ಪ್ರವಾಸವನ್ನು ಮಾರ್ಗದ ಕಲ್ಪನೆಯಿಲ್ಲದೆ ಮತ್ತು ಪೋರ್ತುಗೀಜ ಹಾಗೂ ಸ್ಪೇನಿಶ್ ಸಮುದ್ರಗಳ್ಳರ ಆಕ್ರಮಣ ಭೀತಿಯನ್ನು ಲೆಕ್ಕಿಸದೆ ಹಾಕಿನ್ಸ್ ಕೈಕೊಂಡಿದ್ದನು.



ಮೊಗಲ ದರ್ಬಾರದ ವೈಭವ-ಸಂಪತ್ತುಗಳು ಸುರತ ನಗರದ ಕೀರ್ತಿಗೆ ಮೂಲವಾಗಿದ್ದವು. ಹಾಕಿನ್ಸನಿಗಿಂತಲೂ ಮುಂಚಿತವಾಗಿ ೧೫೮೨ ರಲ್ಲೆ ಇಂಗ್ಲಿಷರು ಭಾರತಕ್ಕೆ ಬಂದಿದ್ದರು. ಜಾನ್ ನ್ಯೂಬೆರಿ ಮತ್ತು ರಾಲ್ಫ ಫಿಚ್ ಎಂಬಿಬ್ಬರು ವ್ಯಾಪಾರಿಗಳು, ವಿಲಿಯಂ ಲೀಡ್ಸ್ ಎಂಬ ಸರಾಫ ಮತ್ತು ಜೇಮ್ಸ ಸ್ಟೋರಿ ಎಂಬ ಚಿತ್ರಕಾರ - ಈ ನಾಲ್ವರೇ ಭಾರತಕ್ಕೆ ಬಂದ ಪ್ರಥಮ ಆಂಗ್ಲರು. ''ಟಾಯಗರ್'' ಎಂಬ ಚಿಕ್ಕ ವ್ಯಾಪಾರಿ ಹಡಗದಲ್ಲಿ ಇವರು ಪ್ರವಾಸ ಮಾಡಿದ್ದರು. ಸ್ಪೇನ ಮತ್ತು ಪೋರ್ತುಗಾಲದ ಹಡಗುಗಳ ಅಧೀನದಲ್ಲಿದ್ದ ಕೇಪ್ ಆಫ್ ಗುಡ್ ಹೋಪ ಮಾರ್ಗವನ್ನು ತ್ಯಜಿಸಿ ಈ ಜನರು ಸುತ್ತುವರಿದು ಮೊದಲು ಭೂಮಧ್ಯ ಸಮುದ್ರದ ತ್ರಿಪೋಲಿಗೆ ಹೋಗಿ ಅಲ್ಲಿಂದ ಅಲೆಪ್ಪೋ, ಬಗದಾದ ಮತ್ತು ಬಹೆರೀನಗಳಿಗೆ ತೆರಳಿ ಮುಂದೆ ಮತ್ತೆ ಸಮುದ್ರಮಾರ್ಗವಾಗಿ ಭಾರತಕ್ಕೆ ಬಂದರು. ಇವರು ತಿರುಗಿ ಲಂಡನ್ನಿಗೆ ಹೋಗಿ ಭಾರತದ ಬಗ್ಗೆ ಆಡಿದ ಮಾತುಗಳನ್ನು ಕೇಳಿ ಇಂಗ್ಲಿಷರಿಗೆ ವಿಸ್ಮಯವಾಗಿರಬೇಕು. ಮಹಾಕವಿ ಶೇಕ್ಸಪಿಯರನು ಕೂಡ ಮ್ಯಾಕಬೆತ್ ನಾಟಕದಲ್ಲಿ "ಅವಳ ಗಂಡ ಅಲೆಪ್ಪೋಕ್ಕೆ ಹೋದ" ಎಂದು ಮಾಟಗಾರ್ತಿಯರಿಗೆ ಸಂಬಂಧಪಟ್ಟ ದೃಶ್ಯದಲ್ಲಿ ಹೇಳಿದ್ದಾನೆ.

ಆಗಿನ ಕಾಲದಲ್ಲಿ ಲಂಡನ್ ತೀರ ಕಗ್ಗ ನಗರವಾಗಿತ್ತು. ಮೊಗಲ ಚಕ್ರವರ್ತಿ ಅಕಬರನ ಶಿಲ್ಪಿಗಳು ಕಟ್ಟಿದ ಸುಯೋಜಿತ ನಗರಗಳೆದುರಿನಲ್ಲಿ ಲಂಡನ್ ನಗರ ಯಾತಕ್ಕೂ ಹತ್ತುತ್ತಿರಲಿಲ್ಲ. ಜಾನ್ ನ್ಯೂಬರಿಯು ಆಗ್ರಾ ನಗರದ ವರ್ಣನೆಯನ್ನು ಹೀಗೆ ಮಾಡಿದ್ದಾನೆ: "ಬಹಳ ದೊಡ್ಡ ನಗರವಿದು. ಲಂಡನ್ನಿಗಿಂತಲೂ ಎಷ್ಟೋ ಪಟ್ಟು ದೊಡ್ಡದು. ಅಗಲವಾದ ಬೀದಿಗಳು, ಕಲ್ಲಿನಿಂದ ಕಟ್ಟಿದ ಕಟ್ಟಡಗಳು. ಪರ್ಶಿಯ ಮೊದಲಾದ ವಿದೇಶಗಳಿಂದ ಬಂದ ವ್ಯಾಪಾರಿಗಳಿಗೆ ಇದೊಂದು ಅತ್ಯುತ್ತಮ ಪೇಟೆ. ಇಲ್ಲಿ ರೇಶಿಮೆ ಅರಿವೆ, ಮುತ್ತು-ರತ್ನಾದಿಗಳ ವ್ಯಾಪಾರ ಭರ್ಜರಿಯಾಗಿ ನಡೆಯುತ್ತದೆ. ರಾಜನ ಉದ್ಯಾನದಲ್ಲಿ ೧,೦೦೦ ಆನೆಗಳು, ೩೦,೦೦೦ ಕುದುರೆಗಳು, ೧,೪೦೦ ಚಿಗರಿಗಳು, ಅಲ್ಲದೆ ಚಿರತೆಗಳು, ಹುಂಜಗಳು, ಗಿಡುಗಗಳು ಇವೆ. ಅದ್ಭುತವಾದ, ನೋಡತಕ್ಕಂಥ ನಗರವಿದು."

ಆ ಕಾಲದ ವಿವರಗಳನ್ನು ಬರೆದಿರುವಾತನೊಬ್ಬ "ಸುರತವು ಭಾರತ ಸಾಮ್ರಾಜ್ಯದ ಅತ್ಯಂತ ಕೀರ್ತಿಶಾಲಿಯಾದ ವಾಣಿಜ್ಯ ಕೇಂದ್ರವಾಗಿದೆ. ಅಲ್ಲಿ ಎಲ್ಲ ಬಗೆಯ ಸರಕುಗಳ ಖರೀದಿ ವಿಕ್ರಿ ನಡೆಯುತ್ತದೆ — ಯುರೋಪ, ಚೀನ, ಪರ್ಶಿಯ, ಅರೇಬಿಯ ಮುಂತಾದ ದೇಶಗಳಿಂದಲ್ಲದೆ ಭಾರತದ ಮೂಲೆ-ಮೂಲೆಗಳಿಂದಲೂ ಸರಕು ಇಲ್ಲಿಗೆ ಬಂದು ಮಾರಾಟವಾಗುತ್ತದೆ" ಎಂದಿತ್ಯಾದಿಯಾಗಿ ಬರೆದಿದ್ದಾನೆ.

ಮೊಗಲರ ದೃಷ್ಟಿಯಲ್ಲಿ ಸುರತಕ್ಕೆ ಮಹತ್ವ ಬರಲು ಇನ್ನೂ ಒಂದು ಪ್ರಬಲ ಕಾರಣವಿತ್ತು. ಮಕ್ಕಾಕ್ಕೆ ಹೋಗುವ ಮುಸ್ಲಿಮರೆಲ್ಲ ಸುರತದಲ್ಲಿಯೆ ಹಡಗು ಏರಬೇಕಾಗಿತ್ತು. ಸುರತ ಮತ್ತು ಆಗ್ರಾಗಳ ನಡುವೆ ಸಾರಿಗೆ ಅವ್ಯಾಹತವಾಗಿ ನಡೆಯುತ್ತಿತ್ತು. ಪಶ್ಚಿಮಕ್ಕೆ ಜಂಜಿಬಾರದವರೆಗೆ, ಉತ್ತರಕ್ಕೆ ಪರ್ಶಿಯನ್ ಮತ್ತು ಸುಯೇಜ ಆಖಾತದ ವರೆಗೆ ಈ ನಗರದ ವ್ಯಾಪಾರದ ಎಳೆಗಳು ಹಬ್ಬಿದ್ದವಾದ್ದರಿಂದ ಪಾಶ್ಚಿಮಾತ್ಯರಿಗೆ, ಅದರಲ್ಲೂ ಬ್ರಿಟಿಶರಿಗೆ ಸುರತವು ಅಪೇಕ್ಷಣೀಯವಾಗಿತ್ತು.

ನ್ಯೂಬೆರಿ ಮತ್ತು ಹಾಕಿನ್ಸರ ಪ್ರಯಾಣದಿಂದ ಬ್ರಿಟಿಶರಿಗೇನೂ ಲಾಭವಾಗಲಿಲ್ಲ. ಮತ್ತೆ ಮೂರು ಚಿಕ್ಕ ಬ್ರಿಟಿಶ ಹಡಗಗಳು ಬಂದರೂ ಪ್ರಯೋಜನವೇನೂ ಆಗಲಿಲ್ಲ. ಆಗಲೇ ಪಶ್ಚಿಮ ಕರಾವಳಿಯಲ್ಲಿ ಪ್ರಬಲರಾಗಿದ್ದ ಪೋರ್ತುಗೀಜರೊಡನೆ ಅವರು ಕಾದಬೇಕಾಯಿತು. ಇಷ್ಟಾದರೂ ಇಂಗ್ಲಿಷರು ಧೈರ್ಯಗೆಡದೆ ೧೬೧೨ ರಲ್ಲಿ ಕ್ಯಾಪ್ಟನ್ ಬೆಸ್ಟ ಎಂಬವನನ್ನು "ಡ್ರೆಗನ್" ಮತ್ತು "ಹೋಸಿಂಡರ್" ಎಂಬೆರಡು ಹಡಗುಗಳೊಂದಿಗೆ

ಕಳಿಸಿದರು. ನಡುಸಮುದ್ರದಲ್ಲಿ ಪೋರ್ತುಗೀಜರು ಈ ಹಡಗುಗಳ ಮೇಲೆ ಭೀಕರ ದಾಳಿ ಮಾಡಿದರು. ಆದರೆ ಅವರು ಸೋತು ಗೋವೆಗೆ ಓಡಬೇಕಾಯಿತು. ಮೊಗಲ ಬಾದಶಾಹ ಜಹಾಂಗೀರನು ಈ ವರ್ತಮಾನವನ್ನು ಕೇಳಿ ಬ್ರಿಟಿಶರ ಶೌರ್ಯ-ಧೈರ್ಯಾದಿಗಳಿಂದ ಪ್ರೀತನಾಗಿ ಸುರತದಲ್ಲಿ ಅವರು ವ್ಯಾಪಾರ ನಡೆಸಬಹುದೆಂದು 'ಫರ್ಮಾನ' ಹೊರಡಿಸಿದನು. ಮುಂದೆ ನೂರು ವರ್ಷಗಳ ನಂತರ ಮೊಗಲ ಸಾಮ್ರಾಜ್ಯದ ಪತನಕ್ಕೆ ಈ ಫರ್ಮಾನವೇ ಕಾರಣವಾದೀತೆಂದು ಜಹಾಂಗೀರನು ಕನಸಿನಲ್ಲೂ ಎಣಿಸಿರಲಿಕ್ಕಿಲ್ಲ.

೧೬೧೪ ರಲ್ಲಿ ಮತ್ತೆ ಕಾಪ್ಟನ್ ಡೌಟನ್ನನ ನೇತೃತ್ವದಲ್ಲಿ ನಾಲ್ಕು ಹಡಗುಗಳು ೪೦೦ ಜನರನ್ನು ತುಂಬಿಕೊಂಡು ಸುರತಕ್ಕೆ ಬಂದವು. ಇದರಿಂದ ಗಾಬರಿಗೊಂಡ ಪೋರ್ತುಗೀಜರು ಡೌಟನ್ನನ ಮೇಲೇರಿ ಹೋದರೂ ಸೋತು ತಣ್ಣಗಾದರು.

ಅಂದಿನಿಂದ ಬ್ರಿಟಿಶ್ ದಲ್ಲಾಳಿಗಳು ಸುರತದೊಡನೆ ಧೈರ್ಯದಿಂದ ವ್ಯಾಪಾರವನ್ನಾರಂಭಿಸಿದರು. ೧೬೧೮ ರ ಅಗಷ್ಟ ತಿಂಗಳಲ್ಲಿ ಇಂಗ್ಲಂಡಿನ ಅರಸ ಒಂದನೇ ಜೇಮ್ಸನು ಜಹಾಂಗೀರನ ದರ್ಬಾರಕ್ಕೆ ಸರ್ ಥಾಮಸ್ ರೋ ಎಂಬ ರಾಯಭಾರಿಯನ್ನು ಕಳಿಸಿದನು. ಚಕ್ರವರ್ತಿ ಜಹಾಂಗೀರನು ಅರಸು ಜೇಮ್ಸನಿಗೆ ಒಂದು ಪತ್ರ ಬರೆದು ಭಾರತದಲ್ಲಿ ಸ್ವತಂತ್ರವಾಗಿ ವ್ಯಾಪಾರ ಮಾಡಲು ಅಧಿಕಾರವನ್ನು ಇಂಗ್ಲಿಷರಿಗೆ ಕೊಟ್ಟನು. ಈ ಪತ್ರದಲ್ಲಿ "ನನ್ನೆಲ್ಲ ಪ್ರಜೆಗಳಿಗೆ, ಸಾಮಂತರಿಗೆ, ಸಕಲರಿಗೆ ಫರ್ಮಾನ ಹೊರಡಿಸಿ ನನ್ನ ರಾಜ್ಯದಲ್ಲಿರುವ ಎಲ್ಲ ಇಂಗ್ಲಿಷ ವ್ಯಾಪಾರಿಗಳಿಗೆ ವಸತಿ ಮತ್ತು ಜೀವನ ಸ್ವಾತಂತ್ರ್ಯವನ್ನು ನಾನು ದಯಪಾಲಿಸಿದ್ದೇನೆ ಮತ್ತು ಅವರ ಹಡಗುಗಳು ಬೇಕಾದಾಗ, ಬೇಕಾದಲ್ಲಿಗೆ ಹೋಗಿ ಬರುವ ಸ್ವಾತಂತ್ರ್ಯವಿದೆ ಎಂದು ತಿಳಿಸಲಾಗಿದೆ. ಅವರಿಗೆ ಯಾವ ಆತಂಕವೂ ಒದಗಲಾಗದೆಂದು ನಾನು ವಿಧಿಸಿದ್ದೇನೆ," ಎಂದು ಬರೆಯಲಾಗಿದ್ದಿತು.

ಈ ಸಮಯದಲ್ಲಿಯೇ ಇಂಗ್ಲಿಷರು ಸುರತದಲ್ಲಿ ತಮ್ಮ ಮೊದಲನೆಯ ಕಾರಖಾನೆಯನ್ನು ಕಟ್ಟಿದರು. ಕೇವಲ ಐದು ಜನರಿಂದ ಪ್ರಾರಂಭವಾದ ಇಂಗ್ಲಿಷ ವಸಾಹತಿನಲ್ಲಿ ಅವರ ಸಂಖ್ಯೆ ೪೦ ಕ್ಕಿಂತ ಹೆಚ್ಚಾಯಿತು. ಇವರಿಗಾಗಿ ಈಸ್ಟ ಇಂಡಿಯಾ ಕಂಪನಿ ವರ್ಷಕ್ಕೆ ೧,೦೦,೦೦೦ ಪೌಂಡುಗಳನ್ನು ವೆಚ್ಚಮಾಡತೊಡಗಿತ್ತು. ಕಾರಖಾನೆಗಾಗಿ ದೊರಕಿಸಿದ ಮನೆ ಸುರತದಲ್ಲೇ ಅತಿ ದೊಡ್ಡದಾಗಿತ್ತು. ಅಲ್ಲಿ ಸಕಲ ಸೌಕರ್ಯಗಳಿದ್ದವು.

ಇವರ ಜೀವನದಲ್ಲಿ ಸುಖದಂತೆ ದುಃಖವೂ ಇತ್ತು. ಸುರತದಲ್ಲಿದ್ದ ಮೊಗಲ ಗವರ್ನರನು ಹಣದಾಸೆಯಿಂದ ವ್ಯಾಪಾರಿಗಳನ್ನು ತುಂಬ ಪೀಡಿಸುತ್ತಿದ್ದನು. ಆದರೆ ೧೭೩೨ ರಲ್ಲಿ ಇಂಗ್ಲಿಷ ಕಾರಖಾನೆಯ ಹೆನ್ರಿ ಲೌಥರ ಮತ್ತು ಮೂಲ್ನಾಸ ಎಂಬ ಪ್ರಸಿದ್ಧ ವ್ಯಾಪಾರಿ ಸೇರಿಕೊಂಡು ಮೊಗಲ ಗವರ್ನರ ಸೊರಾಬಖಾನನನ್ನು ಸುರತದಿಂದ ಓಡಿಸಿದರು. ಹೊಸತಾಗಿ ನೇಮಕವಾಗಿ ಬಂದ ಗವರ್ನರನು ಇಂಗ್ಲಿಷರಿಗೆ ಅನುಕೂಲವಾಗಿ ನಡೆದನು. ಮುಂದೆ ಈ ಗವರ್ನರರು ನಾಮಮಾತ್ರ ಅಧಿಕಾರಿಗಳಾಗುಳಿದರು. ನಿಜವಾದ ಅಧಿಕಾರ ಇಂಗ್ಲಿಷರದಾಯಿತು.

ಈಸ್ಟ ಇಂಡಿಯ ಕಂಪನಿಯ ಮುಖ್ಯ ಕಚೇರಿ ಮುಂಬಯಿಗೆ ವರ್ಗಾಯಿಸಲ್ಪಟ್ಟ ಬಳಿಕ ಸುರತದ ಭಾಗ್ಯ ಇಳಿಮುಖವಾಯಿತು. ಮುಂಬಯಿ ಮುಂದಕ್ಕೆ ಬರತೊಡಗಿ ಸುರತ ಹಿಂದೆ ಬೀಳತೊಡಗಿತು. ೧೮೮೫ ರಲ್ಲಿ ಬಿ. ಬಿ. ಆ್ಯಂಡ್ ಸಿ.ಆಯ್. ರೇಲ್ವೆ ಕಂಪನಿಯ ಗಾಡಿಗಳ ಓಡಾಟ ಸುರತದಲ್ಲೆ ಪ್ರಾರಂಭವಾಗಿ ಮತ್ತೆ ಅದಕ್ಕೆ ತುಸು ಮಹತ್ವ ಬಂದಿತಾದರೂ ಅದು ಹೇಳಿಕೊಳ್ಳುವಂಥದಾಗಿರಲಿಲ್ಲ.

ಇಂದು ಸುರತಕ್ಕೆ ಹೆಚ್ಚಿನ ಮಹತ್ವವಿಲ್ಲ. ಆದರೆ ಇತಿಹಾಸದ ಪುಟಗಳನ್ನು ತಿರುವಿ ಹಾಕಿದಲ್ಲಿ ಈ ನಗರ ವೈಭವದಿಂದ ಮೆರೆದಿತ್ತು ಎಂಬದು ಕಂಡುಬರುವದು.

# ಮನುಷ್ಯನಿಗೆ ಎಷ್ಟು ನಿದ್ದೆ ಬೇಕು?

ನಿದ್ದೆಯಿಲ್ಲದೆ ಮನುಷ್ಯ ಎಷ್ಟು ದಿನಗಳ ವರೆಗೆ ಇರಬಲ್ಲನು ?

ದ್ವಿತೀಯ ಜಾಗತಿಕ ಮಹಾಯುದ್ಧ ಕಾಲದಲ್ಲಿ ಕೆಲಿಫೋರ್ನಿಯದ ಒಂದು ಸೈನಿಕ ಶಿಬಿರದಲ್ಲಿ ಈ ಸಂಬಂಧದಲ್ಲಿ ಒಂದು ಮಹತ್ವದ ಪ್ರಯೋಗವನ್ನು ಮಾಡಲಾಯಿತು.

ಆಟ-ಪಾಟ ಊಟ-ಉಡಿಗೆ ಮುಂತಾದ ಸರ್ವ ಸಾಧಾರಣ ದೈನಂದಿನ ಕಾರ್ಯಗಳಲ್ಲಿ ಮಗ್ನರಾಗಿ ನೂರಾರು ಸೈನಿಕರು ನಾಲ್ಕು ದಿನಗಳಿಗಿಂತಲೂ ಹೆಚ್ಚು ಕಾಲ ಒಂದೇ ಒಂದು ನಿಮಿಷ ಕೂಡ ನಿದ್ದೆ ಮಾಡದೆ ಕಳೆದರು. ಓರ್ವನಂತೂ ಎಂಟು ದಿನ, ಎಂಟು ತಾಸು ನಿರಂತರ ಎಚ್ಚರವಿದ್ದು ವಿಕ್ರಮವನ್ನು ಸ್ಥಾಪಿಸಿದನು.

ಪ್ರಯೋಗದ ನಂತರ ಸೈನಿಕರ ದೇಹಾರೋಗ್ಯವನ್ನು ಪರೀಕ್ಷಿಸಲಾಯಿತು. ಮೊದಲಿಗೆ ಅವರಲ್ಲಿ ವಿಶೇಷ ಪರಿವರ್ತನೆಯೇನೂ ಕಂಡುಬರಲಿಲ್ಲ. ಆದರೆ ಎರಡು ಮೂರು ದಿನಗಳ ನಂತರ ನಿದ್ದೆಗೆಟ್ಟ ಕೆಲ ಸೈನಿಕರ ಸ್ವಭಾವ ಸಿಡುಕಿನದಾದದ್ದೂ ಕೆಲವರ ಸ್ಮರಣಶಕ್ತಿ ಕುಂದುತ್ತ ನಡೆದದ್ದೂ ಕಂಡುಬಂತು. ಕೆಲ ಸೈನಿಕರಲ್ಲಿ ಮಿದುಳಿನ ವಿಕಾರಗಳು ಕಾಣಿಸಿಕೊಂಡವು. ಅಧಿಕಾಂಶ ಸೈನಿಕರಲ್ಲಿ ಗಾಢನಿದ್ದೆಯ ನಂತರ ನಿದ್ದೆಗೇಡಿನಿಂದ ಉದ್ಭವಿಸಿದ ಲಕ್ಷಣಗಳು ಮಾಯವಾದವು. ಇಬ್ಬರು ಸೈನಿಕರಲ್ಲಿ ಮಾತ್ರ ಈ ಲಕ್ಷಣಗಳು ಬಹುಕಾಲ ಉಳಿದು ಅವರನ್ನು ಪೀಡಿಸಿದವು. ನಿದ್ರೆಗೂ ಮನುಷ್ಯ ಶರೀರಕ್ಕೂ ಸಂಬಂಧವಿರುವದಾದಲ್ಲಿ ಅದು ಮಿದುಳಿನೊಡನೆ ಇದೆ ಎಂಬ ಹಿಪೊಕ್ರೇಟಸನ ಸಿದ್ಧಾಂತವು ಈ ಪ್ರಯೋಗದಿಂದ ಸಿದ್ಧವಾಯಿತು.

ಆದರೆ ನಿದ್ದೆ ಎಚ್ಚರಗಳ ಬಗ್ಗೆ ನಮಗೇನು ಗೊತ್ತಿದೆ?

ಸಾಮಾನ್ಯವಾಗಿ ನಾವು ಅಲಾರಂ ಗಡಿಯಾರದ ಸಪ್ಪಳಕ್ಕೆ ನಿದ್ದೆ ಕಳೆದು ಎಚ್ಚರಾಗುತ್ತೇವೆ. ಗಂಟೆಯ ಧ್ವನಿ ನಿದ್ರಾವಸ್ಥೆಯಲ್ಲಿದ್ದ ನಮ್ಮಲ್ಲಿ ಅನೇಕ ಪ್ರತಿಕ್ರಿಯೆಗಳನ್ನುಂಟುಮಾಡುತ್ತದೆ. ನಮ್ಮ ಶ್ವಾಸೋಚ್ಛ್ವಾಸದಲ್ಲಿ ಅಂತರಬೀಳುತ್ತದೆ. ನರಮಂಡಲ ಬಿಗಿಯಾಗುತ್ತದೆ. ನಾವು ನಮ್ಮ ತಲೆಯನ್ನು ಅತ್ತಿತ್ತ ಹೊರಳಾಡಿಸಿ ಮಗ್ಗಲು ಬದಲಾಯಿಸುತ್ತೇವೆ. ಆ ಬಳಿಕ ನಮ್ಮ ಕಣ್ಣು ತೆರೆಯುತ್ತದೆ. ಈ ಎಲ್ಲ ಕ್ರಿಯೆಗಳು ಸಂಭವಿಸುವದಕ್ಕೆ ಗಂಟೆಯ ಧ್ವನಿ ನಮ್ಮ ಶ್ರವಣ ನರ




'ಸಾಯನ್ಸ್ ಡೈಜೆಸ್ಟ್' ಮತ್ತು 'ಹೆಲ್ತ' ಆಧಾರದಿಂದ

ಗಳ ಮೂಲಕ ಕೆಲ ಸಂದೇಶಗಳನ್ನು ಮಿದುಳಿಗೆ ಮುಟ್ಟಿಸುವದೇ ಕಾರಣವಾಗಿದೆ.

ನಿದ್ದೆಮಾಡುತ್ತಿದ್ದ ನಾವು ಒಮ್ಮಿಂದೊಮ್ಮೆ ಎಚ್ಚರಿಯುವದಿಲ್ಲ; ಒಂದು ಅವಸ್ಥೆಯಿಂದ ಇನ್ನೊಂದು ಅವಸ್ಥೆಗೆ ಮುಟ್ಟುವ ಮೊದಲು ನಮ್ಮ ಶರೀರದಲ್ಲಿ ಅನೇಕ ಪ್ರಕ್ರಿಯೆಗಳು ಜರಗುತ್ತವೆ. ಈ ಘಟನೆಯನ್ನು 'ಇಲೆಕ್ಟ್ರೊಎನ್ಸೆಫೆಲೊಗ್ರಾಫ್' ಯಂತ್ರದ ಮೂಲಕ ಗ್ರಾಫರೂಪದಲ್ಲಿ ಬರೆಸಲು ಸಾಧ್ಯವಿದೆ. ಈ ಯಂತ್ರವು ಮಿದುಳಿನಿಂದ ಉತ್ಪನ್ನವಾಗುವ ವಿದ್ಯುತ್‌ಧಾರೆಯನ್ನು ಗುರುತಿಸಿ ರೇಖಾರೂಪದಲ್ಲಿ ಬರೆಯುತ್ತದೆ. ಮನುಷ್ಯ ನಿದ್ರಾವಸ್ಥೆಯಲ್ಲಿದ್ದಾಗ ಈ ಯಂತ್ರ ಸರಳ ರೇಖೆಗಳನ್ನು ಎಳೆಯುತ್ತ ಹೋಗುತ್ತದೆ. ಇದಕ್ಕೆ ಮಿದುಳು ಶಾಂತವಿದೆಯೆಂದರ್ಥ. ಅಲ್ಲಲ್ಲಿ ಮೇಲೆ-ಕೆಳಗೆ ಗಂಟುಗಳೂ ಕಂಡುಬರುತ್ತವೆ. ನಿದ್ರಾವಸ್ಥೆಯಲ್ಲಿ ಕೆಲ ಕೋಶಗಳು ಆಕಸ್ಮಾತ್ತಾಗಿ ಜಾಗ್ರತವಾಗತೊಡಗಿದ್ದವು ಎಂಬುದನ್ನು ಇವು ತೋರಿಸುತ್ತವೆ.

ಈ ಪೂರ್ಣ ನಿದ್ರಾವಸ್ಥೆಯಿಂದ ಪೂರ್ಣ ಎಚ್ಚರದ ಅವಸ್ಥೆಗೆ ಮುಟ್ಟುವ ಮೊದಲು ನಾವು ಐದು ಹಂತಗಳನ್ನು ದಾಟಿ ಬರುತ್ತೇವೆಂದು ಈ ಯಂತ್ರವು ಎಳೆಯುವ ರೇಖೆಗಳ ವ್ಯತ್ಯಾಸಗಳಿಂದ ಗೊತ್ತಾಗುತ್ತದೆ.

ಎಚ್ಚರಾಗಲು ಎಷ್ಟು ವೇಳೆ ಹಿಡಿಯುತ್ತದೆ ಎಂಬುದು ಎಚ್ಚರಾಗುವದಕ್ಕೆ ಕಾರಣವಾಗುವ ಸಂಗತಿಯನ್ನೇ ಅವಲಂಬಿಸಿರುತ್ತದೆ. ಗಡಿಯಾರದ 'ಅಲಾರಂ' ದಿಂದ ನಾವು ನಿದಾನವಾಗಿ ಎಚ್ಚರಗೊಳ್ಳುತ್ತೇವೆ. ಆದರೆ ಮಕ್ಕಳ ರೋದನ ಧ್ವನಿ ಕಿವಿಗೆ ಬಿದ್ದೊಡನೆ ಎಚ್ಚರಾಗುತ್ತೇವೆ. ಕೆಲವರಿಗೆ ಎಚ್ಚರಾಗಲು ತುಸು ಹೆಚ್ಚುವೇಳೆ ಹಿಡಿಯುತ್ತದೆ. ಬೇಗನೆ ಮತ್ತು ತಡವಾಗಿ ಎಚ್ಚರವಾಗುವದು ಎಂದರೂ ಈ ಅಂತರ ಕೇವಲ ಕೆಲ ಸೆಕಂದು ಅಥವಾ ಮಿನಿಟುಗಳದಾಗಿರುತ್ತದೆ.

ತಾವು ನಿದ್ರಾವಸ್ಥೆಯಲ್ಲಿ ಸ್ವಪ್ನವನ್ನೇ ಕಾಣುವದಿಲ್ಲ ಎಂದು ಕೆಲವರೆನ್ನುತ್ತಾರೆ. ಇದಕ್ಕೂ ಒಂದು ಕಾರಣವಿದೆ. ಇಂಥ ಜನರು ಸಾಮಾನ್ಯವಾಗಿ ಯಾವುದೊಂದು ಗಹನವಾದ ಇಲ್ಲವೆ ಸ್ವಾರಸ್ಯಪೂರ್ಣವಾದ ವಿಷಯವನ್ನು ವಿಚಾರ ಮಾಡುತ್ತನಿದ್ದೆ ಹೋಗುತ್ತಾರೆ. ಮತ್ತು ಈ ಕಾರಣದಿಂದ ಇವರನ್ನು ಎಚ್ಚರಗೊಳಿಸುವ ಪ್ರಕ್ರಿಯೆಗಳು ಬಹು ಶೀಘ್ರದಲ್ಲಿ ಜರಗುವದರಿಂದ ಎಚ್ಚರಾದೊಡನೆ ಇವರಿಗೆ ನಿದ್ದೆ ಹೋಗುವಾಗ ಮಾಡುತ್ತಿದ್ದ ವಿಚಾರವೇ ಮನಸ್ಸಿನೆದುರು ಬಂದು ನಿಲ್ಲುತ್ತದೆ. ಹೀಗಾಗಿ ನಡುವೆ ನಿದ್ರಾವಸ್ಥೆಯಲ್ಲಿ ಕಂಡ ಸ್ವಪ್ನಗಳನ್ನು ಇವರು ಮರೆತುಬಿಡುತ್ತಾರೆ.

ಮನುಷ್ಯನು ಒಂದೇ ಒಂದು ಕ್ಷಣ ಮಾತ್ರವಾದರೂ ಏಕಾಗ್ರ ಚಿತ್ತನಾಗಿರಲಾರ ಎಂದು ಪತಂಜಲಿ ಹೇಳಿದ್ದಾನೆ. ಧ್ಯಾನವಿಜ್ಞಾನವು ಇಂದು ಈ ಮಾತನ್ನು ಪ್ರಯೋಗದಿಂದ ಸಿದ್ಧಮಾಡಿ ತೋರಿಸಿದೆ. ಧ್ಯಾನವಿಜ್ಞಾನಪ್ರವೀಣ ಡಾ. ಶಿಮ್ಮೋರರು, ಎಷ್ಟು ತಲ್ಲೀನರಾಗಿದ್ದೇವೆಂದರೂ ನಾವು ಒಂದು ಕಾರ್ಯದಲ್ಲಿ ನಮ್ಮ ಸಂಪೂರ್ಣ ಧ್ಯಾನ ತೊಡಗಿಸಲಾರೆವು, ಎಂದಿದ್ದಾರೆ. ನಮ್ಮ ಸ್ನಾಯುಗಳ ವಿಶಿಷ್ಟ ರಚನೆ ಮತ್ತು ವ್ಯವಸ್ಥೆಯ ಮೂಲಕ ನಾವು ನಮ್ಮ ಅಧಿಕಾಂಶ ಕಾರ್ಯಗಳನ್ನು ಅವುಗಳಲ್ಲಿ ಪೂರ್ಣಧ್ಯಾನವನ್ನು ತೊಡಗಿಸದೆ ಮಾಡಬಲ್ಲೆವು.

ಮೋಟರ ನಡೆಸುವದೇನೂ ಸುಲಭ ಕೆಲಸವಲ್ಲ. ರಸ್ತೆಯ ರೂಪರೇಷೆಗಳನ್ನೆಲ್ಲ ಡ್ರೈವರನು ಎಚ್ಚರಿಕೆಯಿಂದ ಗಮನಿಸಬೇಕಾಗುತ್ತದೆ. ಹಾಗಿದ್ದರೂ ಆತ ಮೋಟರ ನಡೆಸುತ್ತಿರುವಾಗ ತನ್ನ



ತಲೆಯಲ್ಲಿ ನೂರೆಂಟು ವಿಚಾರಗಳನ್ನು ಮಾಡುತ್ತಿರುತ್ತಾನೆ. ಇಲ್ಲವೆ ತನ್ನ ಹತ್ತಿರ ಕುಳಿತಿರುವ ವ್ಯಕ್ತಿಯೊಡನೆ ಏನೇನೋ ಮಾತುಕತೆ ನಡೆಸಿರುತ್ತಾನೆ. ನಿಜವಾಗಿಯೂ ನಾವು ನಮ್ಮ ಚಿತ್ತವನ್ನು ಸಂಪೂರ್ಣವಾಗಿ ಒಂದೇ ವಿಷಯದಲ್ಲಿ ಕೇಂದ್ರೀಕರಿಸುವದು ಹೆಚ್ಚುಕಡಿಮೆ ಅಸಂಭವವಾಗಿದೆ. ಒಂದು ತಾಸಿನ ಅವಧಿಯಲ್ಲಿ ಬಹು ಪ್ರಯಾಸಪಟ್ಟರೆ ಒಂದೇ ಒಂದು ಮಿನಿಟಿನ ವರೆಗೆ ಮಾತ್ರ ನಮ್ಮ ಚಿತ್ತ ಒಂದೇ ಒಂದು ವಿಷಯದಲ್ಲಿ ಪೂರ್ಣ ತಲ್ಲೀನತೆಯ ಅವಸ್ಥೆಯನ್ನು ಸಮೀಪಿಸಿರುತ್ತದೆ ಎಂದು ಅಂದಾಜುಕಟ್ಟಿದ್ದಾರೆ.

ದಿನವಿಡೀ ಕಾರ್ಯಮಗ್ನವಾಗಿರುವ ಮನಸ್ಸು ದಣಿದು ಹೋಗುತ್ತದೆ. ದಣಿದ ನರಮಂಡಲಗಳಿಂದ ಕೆಲಸ ಮಾಡಿಸುವದು ಅಶಕ್ಯವಾಗುತ್ತದೆ. ಕೆಲವರಿಗೆ ನರಮಂಡಲಗಳ ವಿಶ್ರಾಂತಿಗೆ ನಿದ್ರೆಯ ಅಗತ್ಯಬೀಳುವದೂ ಉಂಟು. ಜಾಗ್ರತಾವಸ್ಥೆಯಲ್ಲೇ ವಿಶ್ರಾಂತಿ ಪಡೆದು ಮತ್ತೆ ಕೆಲಸಕ್ಕೆ ಅಣಿಯಾಗುವಂಥ ನರಮಂಡಲಗಳಿರುವ ಜನರೂ ಇರುತ್ತಾರೆ. ಇಂಥ ವ್ಯಕ್ತಿಗಳ ಮಿದುಳಿನಲ್ಲಿ ಒಂದು ಕೆಲಸಕ್ಕೆ ಎರಡು ಎರಡು ಕೋಶಗಳಿರುತ್ತವೆ ಎಂಬುದೇ ಇದರ ರಹಸ್ಯ. ದಣಿದ ಕೋಶ ವಿಶ್ರಾಂತಿ ಪಡೆಯುವಾಗ ಎರಡನೆಯದು ಕೆಲಸ ಮಾಡುತ್ತದೆ.

ನಿದ್ರಾವಸ್ಥೆಯಲ್ಲಿ ಕೂಡ ಮನಸ್ಸು ಕೆಲಸ ಮಾಡುತ್ತಲೇ ಇರುತ್ತದೆ. ಶ್ವಾಸೋಚ್ಛ್ವಾಸ ಕ್ರಿಯೆ, ಹೃದಯ ಬಡಿದುಕೊಳ್ಳುವ ಕ್ರಿಯೆ ನಿದ್ರಾವಸ್ಥೆಯಲ್ಲೂ ನಡೆದಿರುತ್ತದೆ. ಸ್ವಪ್ನ ಕಾಣುವಾಗಲೂ ಮಿದುಳು ಅಲ್ಪಸ್ವಲ್ಪ ಪರಿಶ್ರಮವನ್ನು ಮಾಡಲೇಬೇಕಾಗುತ್ತದೆ.

ಇನ್ನು ನಿದ್ದೆ ಎಷ್ಟು ಬೇಕಾಗುತ್ತದೆ? ಮಗು ತನ್ನ ದಿನದ ವೇಳೆಯಲ್ಲಿ ಅರ್ಧದಷ್ಟನ್ನು ನಿದ್ದೆಯಲ್ಲಿ ಕಳೆಯುತ್ತದೆ; ವಯಸ್ಸಿಗೆ ಬಂದವನು ದಿನದ ಒಂದು ಮೂರಾಂಶದಷ್ಟು ಸಮಯವನ್ನು ನಿದ್ದೆಯಲ್ಲಿ ಕಳೆಯುತ್ತಾನೆ; ಮುದುಕರು ತಿನ್ನುವದು ಮತ್ತು ಮಲಗುವದನ್ನು ಬಿಟ್ಟು ಇನ್ನೇನನ್ನೂ ಮಾಡುವುದಿಲ್ಲ ಎಂಬ ಸಾಮಾನ್ಯ ಕಲ್ಪನೆಯಿದೆ. ಆದರೆ ಇದನ್ನೇನೂ ಸಿದ್ಧಾಂತವೆಂದು ಹೇಳಬರುವದಿಲ್ಲ. ನಿದ್ದೆಯ ಪ್ರಮಾಣ ಅವರವರ ವೈಯಕ್ತಿಕ ಅವಶ್ಯಕತೆಗನುಗುಣವಾಗಿ ಹೆಚ್ಚುಕಡಿಮೆಯಾಗುತ್ತದೆ. ವಯಸ್ಸು ಹೆಚ್ಚಾದವರಿಗಿಂತ ಕಡಿಮೆ ವಯಸ್ಸಿನವರು ಹೆಚ್ಚು ಹೊತ್ತು ನಿದ್ದೆ ಮಾಡುತ್ತಾರೆ. ಸಾಮಾನ್ಯವಾಗಿ ಸ್ತ್ರೀಯರಿಗೆ ಗಂಡಸರಿಗಿಂತ ಹೆಚ್ಚು ನಿದ್ರೆ ಬೇಕಾಗುತ್ತದೆ.

ಥಾಮಸ್ ಎಡಿಸನ್ ಪ್ರತಿನಿತ್ಯ ೪-೫ ತಾಸು ನಿದ್ದೆ ಮಾಡಿ ಆರೋಗ್ಯವಾಗಿದ್ದನು ಎನ್ನುತ್ತಾರೆ. ದಿನಕ್ಕೆ ೨-೩ ತಾಸು ನಿದ್ದೆಯಾದರೆ ಸಾಕು ಎನ್ನುವವರೂ ಇದ್ದಾರೆ. ಮಹಾತ್ಮಾ ಗಾಂಧಿಯವರಿಗೆ ತೀರ ಕಡಿಮೆ ನಿದ್ದೆ ಸಾಲುತ್ತಿತ್ತು ಎಂದು ಬಿರ್ಲಾರವರು ಬರೆದಿದ್ದಾರೆ.

ಅಧಿಕಾಂಶ ಜನರಿಗೆ ದಣಿದ ನರಮಂಡಲಗಳಿಗೆ ನಿದ್ರಾರೂಪ ವಿಶ್ರಾಂತಿ ಬೇಕೇಬೇಕು. ನಿದ್ದೆ ಮನುಷ್ಯನಿಗೆ ಇಷ್ಟೊಂದು ಅವಶ್ಯವಿರುವದರಿಂದಲೆ ನಿದ್ದೆ ಬಾರದಿದ್ದಾಗ ಮನುಷ್ಯ ಚಿಂತೆಗೊಳಗಾಗುತ್ತಾನೆ. ನಿದ್ದೆ ಬರಲಿ ಎಂದು ನಾನಾ ವಿಧದ ಔಷಧಿಗಳನ್ನು ಸೇವಿಸುವವರ ಸಂಖ್ಯೆಯೂ ಇತ್ತೀಚೆಗೆ ಮಿತಿಮೀರಿದೆ. ಆದರೆ ನಿದ್ದೆ ಬರಿಸುವ ಬ್ರೊಮಾಯಿಡ್, ಕ್ಲೋರಲ್ ಹಾಯಡ್ರೇಟ ಮೊದಲಾದ ಔಷಧಿಗಳು ಒಂದು ಬಗೆಯ



ಗುಂಗನ್ನು ತರುವವೇ ವಿನಾ ನಿಜವಾದ ನಿದ್ದೆಯನ್ನಲ್ಲ. ಇದರಿಂದ ಎದ್ದೊಡನೆಯೂ ಮನುಷ್ಯ ನಿರುತ್ಸಾಹಿಯಾಗಿಯೆ ಉಳಿಯುತ್ತಾನೆ. ನಿದ್ದೆ ಬರಿಸುವ ಗುಳಿಗೆಗಳನ್ನು ಸಿಕ್ಕಾಬಟ್ಟೆಯಾಗಿ ತೆಗೆದುಕೊಂಡು ಅನರ್ಥವನ್ನುಂಟುಮಾಡಿಕೊಳ್ಳುವವರೂ ಇದ್ದಾರೆ.

೧೯೫೦ ರಲ್ಲಿ ಅಮೇರಿಕೆಯಲ್ಲಿ ನಿದ್ದೆ ಬರಿಸುವ ಗುಳಿಗೆಗಳನ್ನು ನುಂಗಿ ೧,೦೦೦ ಜನರು ಮರಣಕ್ಕೀಡಾದ ದಾಖಲೆಯಿದೆ. ಈ ಗುಳಿಗೆಗಳ ಗಂಡಾಂತರವನ್ನು ಮನಗಂಡು ಈಗ ಡಾಕ್ಟರರು ಹೊಸದೊಂದು ಬಗೆಯ ಗುಳಿಗೆಗಳನ್ನು ಶೋಧಿಸಿದ್ದಾರೆ. ಕಾರ್ಬನ್, ಹೈಡ್ರೊಜನ್ ಮತ್ತು ಆಕ್ಸಿಜನ್‌ಗಳ ಮಿಶ್ರಣವಿರುವ ಈ ಗುಳಿಗೆ ನಿರುಪದ್ರವಿ ಎಂದು ಹೇಳಲಾಗುತ್ತದೆ.

ಎಂದಾದರೊಮ್ಮೆ ನಿಮಗೆ ನಿದ್ದೆ ಬರುವದಿಲ್ಲ ಎಂದರೆ ನೀವೇನೂ ಗಾಬರಿಯಾಗಿ ಡಾಕ್ಟರರ ಬಳಿಗೆ ಓಡಬೇಕಾಗಿಲ್ಲ. ನಿದ್ದೆಯ ಸಮಸ್ಯೆ ಉದ್ಭವಿಸಿದಾಗ ಈ ಮುಂದಿನ ಸರಳ ಉಪಾಯಗಳನ್ನು ಯೋಚಿಸಿಕೊಂಡು ಪ್ರಯೋಜನ ಪಡೆಯಬಹುದು :

• ನಿಶ್ಚಿತ ವೇಳೆಗೆ ಮಲಗುವ ಅಭ್ಯಾಸ ಮಾಡಿಕೊಳ್ಳಿರಿ. ಮಲಗುವದಕ್ಕೆ ಮೊದಲು ಒಂದು ತಾಸು ಶಾಂತ ವಾತಾವರಣದಲ್ಲಿ ಕಳೆಯಿರಿ.
• ನಿಮ್ಮ ಚಿಂತೆ, ವಿಚಾರಗಳನ್ನು ಹಾಸಿಗೆಗೊಯ್ಯಬೇಡಿರಿ. ಹಗಲಿಡೀ ನಿಮ್ಮನ್ನು ಪೀಡಿಸಿದ ಅಥವಾ ನಿಮ್ಮ ಮನಸ್ಸನ್ನು ಆಕ್ರಮಿಸಿದ ವಿಚಾರಗಳಿದ್ದರೆ ಅವನ್ನು ಮರೆಯಲು ಪ್ರಯತ್ನಿಸಿರಿ.
• ಗಾಢ ನಿದ್ದೆ ಬೇಕು ಎಂದಿದ್ದರೆ ಶಾಂತವಾದ, ಸಂಪೂರ್ಣ ಕತ್ತಲೆಯಾಗಿರುವ ಕೋಣೆಯಲ್ಲಿ ಮಲಗಿರಿ. ಅಲ್ಲಿ ಗಾಳಿ ಸಂಚಾರಕ್ಕೆ ಸಾಕಷ್ಟು ಅವಕಾಶವಿರಲಿ. ಹಾಸಿಗೆ ಯದ್ವಾ-ತದ್ವಾ ಆಗದಿರಲಿ.
• ಮಲಗುವ ಮೊದಲು ಹೊಟ್ಟೆ ಬಿರಿಯುವಷ್ಟು ತಿನ್ನಬೇಡಿರಿ. ಮಲಗುವ ಪೂರ್ವದಲ್ಲಿ ಒಂದು ಬಟ್ಟಲು ಬಿಸಿ ಹಾಲು ಕುಡಿಯುವದು ಹಿತಕರವಾಗುವದು.
• ಕುಳಿತು ಕೆಲಸ ಮಾಡುವವರಿಗೆ ಕೂಲಿ ಕೆಲಸದವರಂತೆ ದೇಹದ ದಣಿವು ಅನಿಸಲಾರದು. ಅಂಥವರು ಮಲಗುವ ಮೊದಲು ತುಸು ದೂರ ನಡೆದು ಬಂದರೆ ಸಹಾಯಕವಾಗುವದು. ಸ್ವಚ್ಛ ಹವೆ, ಹಗುರಾದ ವ್ಯಾಯಾಮದಿಂದ ನಿಮ್ಮ ನರಮಂಡಲ ಶಾಂತವಾಗುವದು. ಹಾಸಿಗೆಯನ್ನು ಕಾಣುವ ವಿಚಾರ ಸುಖಕರವೆನಿಸುವದು.
• ಹಲಕೆಲವರಿಗೆ ಒಳ್ಳೆಯ ಪುಸ್ತಕವನ್ನೋದುವದು, ಇಲ್ಲವೆ ಸುಖಕರವಾದ ಸಂಗೀತ ಕೇಳ್ಳುವದು ಪ್ರಯೋಜನವನ್ನೀಯುವದು.
• ಮಲಗುವ ಮೊದಲು ಮನೆಯಲ್ಲಿ ಯಾರ ಮೇಲಾದರೂ ಸಿಟ್ಟು ಮಾಡಿದ್ದರೆ ಅದನ್ನು ಮರೆತುಬಿಡಿ. ಸಮಾಧಾನದ ವಾತಾವರಣವು ನಿಮಗೆ ಮಾತ್ರವಲ್ಲ, ನಿಮ್ಮ ಮನೆಯ ಎಲ್ಲರಿಗೂ ಸುಖ ನಿದ್ದೆಗೆ ಅವಕಾಶ ಮಾಡಿಕೊಡುವದು.

ನೈಸರ್ಗಿಕ ನಿದ್ದೆಯ ಸಮಾನವಾದುದು ಇನ್ನೊಂದಿಲ್ಲ. ನಿದ್ದೆ ಬರಿಸುವ ಗುಳಿಗೆಗಳಿಂದ ದೂರವಿರಿ. ನಿಮ್ಮ ಡಾಕ್ಟರರೇನಾದರೂ ಸಂದರ್ಭಾನುಸಾರ ಅವುಗಳನ್ನು ತೆಗೆದುಕೊಳ್ಳಲು ಹೇಳಿದರೆ ಬಹು ಜಾಗ್ರತೆಯಿಂದ ಅವರು ಹೇಳಿದ್ದಕ್ಕೆ ಚಾಚೂ ತಪ್ಪದೆ ನಡೆಯಿರಿ. ನಿದ್ದೆ ಬಾರದಿದ್ದಾಗ ಮೊದಲು ಮೇಲೆ ಹೇಳಿದ ಸಾಮಾನ್ಯವಾದ ಉಪಾಯಗಳನ್ನು ಯೋಜಿಸಿ ಅವು ನಿಷ್ಫಲವೆಂದಾದಾಗ ಮಾತ್ರ ಡಾಕ್ಟರರನ್ನು ವಿಚಾರಿಸಿರಿ.

ಯಾವಾಗಲಾದರೂ ಒಂದು ದಿನ ನಿದ್ದೆ ಬಾರದಿದ್ದಲ್ಲಿ, ಒಂದು ತುಸು ದಿನ ತಡವಾಗಿ ನಿದ್ದೆ ಬಂದಲ್ಲಿ ಘಾತವೇನೂ ಆಗುವದಿಲ್ಲ. ಆ ಬಗ್ಗೆ ಕೊರಗಬಾರದು. ಕೊರಗು ಹಚ್ಚಿಕೊಂಡರೆ ಮುಂದೆ ನಿದ್ರೆ ಬಾರದಿರುವದಕ್ಕೆ ಅದೇ ಕಾರಣವಾಗುವದು. ನಿದ್ದೆಯ ಹೊತ್ತಿಗೆ ನಿದ್ದೆಯ ವಿಚಾರವೊಂದನ್ನು ಬಿಟ್ಟು ಇನ್ನಾವ ವಿಚಾರವನ್ನೂ ಮಾಡದಿರಲು ನೀವು ಕಲಿತಿರಾದರೆ "ನಿದ್ದೆ ಬರಲಿಲ್ಲ-ಬರುವದಿಲ್ಲ" ಎಂಬ ಶಬ್ದಕ್ಕೆ ನಿಮ್ಮ ಶಬ್ದಕೋಶದಲ್ಲಿ ಆಸ್ಪದವೇ ಉಳಿಯಲಾರದು.

# ಇದುವೆ ಜೀವ, ಇದು ಜೀವನ

ನನ್ನ ಗೆಳೆಯನೊಬ್ಬನ ಮದುವೆಗೆ ನಾವೆಲ್ಲ ಎಂಟು ಹತ್ತು ಗೆಳೆಯರು ಕೂಡಿದ್ದೆವು. ಮದುವೆಯು ಸಾನಂದ ಸಂಭ್ರಮಗಳೆಲ್ಲ ಮುಗಿದ ಮೇಲೆ ಕೇವಲ ಗೆಳೆಯರಿಗಾಗಿ ಒಂದು ಕಾರ್ಯಕ್ರಮ ಮಾಡಬೇಕೆಂದು ನಿರ್ಣಯವಾಯಿತು. ನಮ್ಮಲ್ಲಿ ಇಬ್ಬರು ಸಂಗೀತಗಾರರು ಅದೇ ಸಂಗೀತ ಕಲಿಯುತ್ತಿದ್ದರಾದರೂ ಅಪರಿಮಿತ ಉತ್ಸಾಹ ಅವರದು. ಅಂದು ಅವರ ಸಂಗೀತಕಾರ್ಯಕ್ರಮ ನಿಶ್ಚಿತವಾಯಿತು. ತಂಬೂರಿ, ತಬಲಾ ಹಾರ್ಮೋನಿಯಮ್ ಎಲ್ಲಿಂದಲೋ ಬೇಡಿ ಕಾಡಿ ತಂದರು. ಊರಲ್ಲಿನ ಸಂಗೀತ ರಸಿಕರೆಲ್ಲ ಕೂಡಿದರು. ಹತ್ತು ಗಂಟೆಗೆ ನಮ್ಮ ಗೆಳೆಯನ ಅಟ್ಟದಮೇಲೆ ಸಂಗೀತ ಸುರುವಾಯಿತು. ಸಂಗೀತ ಒಳ್ಳೆಯ ರಂಗಿಗೆ ಬಂದಿತ್ತು. ನಡುವೆ ನಾನು ತಂಬಾಕು ಉಗುಳಲಿಕ್ಕೆಂದು ಕೆಳಗಿಳಿದು ಬಂದೆ. ಹೊರಗೆ ಬೆಳುದಿಂಗಳು ನೆಲವನ್ನಪ್ಪಿತ್ತು. ನಾನು ತಿರುಗಿ ಅಟ್ಟವನ್ನೇರುವಾಗ ಕವಿನೆರಳಿನಲ್ಲಿ ಯಾರೋ ನಿಂತಂತೆ ಕಂಡಿತು. 'ಯಾರವರು' ಎಂದು ಹೆದರಿದರೂ ಗದ್ದರಿಸಿದೆ. ಅವಿತು ನಿಂತ ವ್ಯಕ್ತಿ ನೆರಳಿನಿಂದ ಬೆಳಕಿಗೆ ಬಂತು. ಮಾಸಿದ ಟೊಪ್ಪಿಗೆ, ಹೊಲಸು ಅಂಗಿ, ಹೊಲಸು ಧೋತರ, ಬಾಡಿದ ಮುಖ, ಬೆಳೆದ ಗಡ್ಡಗಳಿಂದ ಶೋಭಿಸುತ್ತಿದ್ದ. ಕಳ್ಳನೋ ಭಿಕ್ಷುಕನೋ ಎಂದು ಸಂಶಯ ನನಗೆ. ಅಲ್ಲಿ ನಿಂತ ಕಾರಣವನ್ನು ಕೇಳಿದೆ. 'ನಾನೂ ಹಾಡು ಕೇಳಲಿಕ್ಕೆ ಬರಲೇನ್ರಿ?' ದೀನನಾಗಿ ಅವನು ಬಿನ್ನವಿಸಿಕೊಂಡ. ಅವನ ರಸಿಕತೆ ನನ್ನ ಅಂತಃಕರಣವನ್ನು ತಟ್ಟಿತು. ಬಾ ಎಂದು ಅವನನ್ನು ಕರೆದುಕೊಂಡು ಅಟ್ಟವನ್ನೇರಿದೆ.

ನಮ್ಮ ಸಂಗೀತಗಾರರು ಇನ್ನೂ ಹುರುಪಿನಲ್ಲಿಯೇ ಇದ್ದರು. ಕುಳಿತವರು ಆಕಳಿಸುತ್ತಿದ್ದರೂ ಅದರ ಅರಿವು ಹಾಡುವವರಿಗಿರಲಿಲ್ಲ. ಅಂತೂ ಕೊನೆಗೊಮ್ಮೆ ಮುಗಿಸಿದರು. ಅಷ್ಟರಲ್ಲಿ ನನ್ನ ಜೊತೆಗೆ ಬಂದ ಆ ಮನುಷ್ಯ 'ನಾನೂ ಸ್ವಲ್ಪ ಹಾಡಲೇನ್ರಿ?' ಎಂದು ಕೇಳಿದ. ಮತ್ತೆ ಅದೇ ದೈನ್ಯ ಅವನ ದನಿಯಲ್ಲಿ. ಸಭೆಯಲ್ಲಿ ಎಲ್ಲರಿಗೂ ಆಶ್ಚರ್ಯ, ಕೆಲವರಿಗೆ ತಿರಸ್ಕಾರ; ಮತ್ತೆ ಕೆಲವರಿಗೆ ಚೇಷ್ಟೆಗೊಂದು ಅವಕಾಶ ಸಿಕ್ಕಂತಾಗಿ 'ಹಾಡಪಾ ನಿಂದಷ್ಟು ಆಗಲಿ' ಎಂದು ಮೂದಲಿಸಿದರು. ಅವನು ಇದಾವುದರ ಕಡೆಗೂ ಲಕ್ಷ್ಯಕೊಡದೆ ನಿರ್ವಿಕಾರವಾಗಿ ತಂಬೂರಿಯನ್ನು ಶ್ರುತಿಗೊಳಿಸಿದ. ಸ್ವಲ್ಪ ಕೆಮ್ಮಿ ಸ್ವರ ಹಚ್ಚಿದ. ಭೈರವಿಯ ಅಪೂರ್ವ ಆಲಾಪನೆ ಕನಸಿನಂತೆ ಮೂಡಿತು. ಸಭೆಯೆಲ್ಲ ಸ್ತಬ್ಧವಾಯಿತು. ನಾನು ಮುಗ್ಧನಂತೆ ಒಮ್ಮೆ ಅವನ ಕಡೆಗೆ, ಇನ್ನೊಮ್ಮೆ ಕಿಡಿಕಿಯಾಚೆಯ ಬೆಳುದಿಂಗಳಿನ ಕಡೆಗೆ ನೋಡುತ್ತಿದ್ದೆ. ಬೆಳುದಿಂಗಳು, ತಾನಗಳು ತೇಲಿಬಂದು ರೋಮಾಂಚಗೊಂಡಂತಿತ್ತು. ಅವನು ಹಾಡು ಮುಗಿಸಿ ಸಭೆಗೆ ವಿನಯದಿಂದ ನಮಸ್ಕರಿಸಿ ಹೊರಟು ಹೋದ. ಶಾಪಗ್ರಸ್ತ ಗಂಧರ್ವನೊಬ್ಬ ನಿಜರೂಪ ತೋರಿಸಿ ಮಾಯವಾದಂತಾಯಿತು.

ಇವನಾರು ಎಂದು ಎಲ್ಲರಿಗೂ ಕುತೂಹಲ. ಕೂಡಿದವರಲ್ಲಿ ಹಿರಿಯರೊಬ್ಬರು ಹೊದ್ದ ಧೋತರದಿಂದ ಕಣ್ಣೀರೊರಸಿಕೊಳ್ಳುತ್ತ ಹೇಳಿದರು. 'ಇವ ಇದೇ ಊರಿನವ, ನಾಟಕ ಕಂಪನಿಯೊಂದರಲ್ಲಿ ಕೆಲಸ ಮಾಡುತ್ತಿದ್ದ. ಉತ್ತಮ ಗಾಯಕ. ಅವನಿಂದಲೇ ಕಂಪನಿಗೆ ಸಾವಿರಾರು ರೂಪಾಯಿ ಲಾಭವಾಯಿತು.

ಮುಂದೆ ಯಾರೋ ಇವನ ಮೇಲೆ ಅಸೂಯೆ ಗೊಂಡು ಮಾಟಮಾಡಿಸಿದರಂತೆ. ಅಂದಿನಿಂದ ಇವನಿಗೆ ಹುಚ್ಚು ಹಿಡಿಯಿತು. ಈಗ ಆ ಕಂಪನಿಯೂ ಇಲ್ಲ; ಇವನ ಗಾಯನವೂ ಇಲ್ಲ. ಆಗಿನಿಂದ ಹೀಗೆಯೇ ಅಲ್ಲಿ ಇಲ್ಲಿ ಓಡಾಡುತ್ತ ಭಿಕ್ಷೆಬೇಡಿ ಜೀವಿಸುತ್ತಿದ್ದಾನೆ.''

ಕ್ಷಣಕಾಲ ಯಾರೂ ಮಾತನಾಡಲಿಲ್ಲ. ಎಲ್ಲರ ಕಣ್ಣೂ ಅವನನ್ನು ಅರಸಿಹೋದವು. ಅವನು ಅಲ್ಲಿ ಇರಲಿಲ್ಲ.

—ಕೀರ್ತಿ ಕುರ್ತಕೋಟಿ, ಧಾರವಾಡ

ಕೊಲ್ಹಾಪುರದಿಂದ ನನಗೆ 'ಸಂದರ್ಶನ'ಕ್ಕಾಗಿ ಕರೆ ಬಂದಿತ್ತು. ಬೆಳಗಾಂವಿಯಿಂದ ಕೊಲ್ಹಾಪುರಕ್ಕೆ ಹೊರಟದ್ದೆ. ಬೆಳಗಿನ ಒಂಬತ್ತು ಘಂಟೆಗೆ ಕೊಲ್ಹಾಪುರಕ್ಕೆ ಬಸ್ಸು ಬಿಡುತ್ತಿತ್ತು. ನಾನು 'ಸಂದರ್ಶನ' ದ ವೇಳೆಗೆ ಸರಿಯಾಗಿ ಅಲ್ಲಿಗೆ ಮುಟ್ಟಬಹುದಿತ್ತು. ಅಂದು ಒಂಬತ್ತರ ಬಸ್ಸಿಗೆ ವಿಶೇಷ ಗದ್ದಲ. ಅಂತೂ ನನಗೊಂದು ಸೀಟು ದೊರಕಿಸಿಕೊಳ್ಳ ಬೇಕಾದರೆ ಸಾಕುಸಾಕಾಗಿಹೋಯಿತು.

ಬಸ್ಸು ಬಿಡಲು ಇನ್ನು ಐದು ನಿಮಿಷಮಾತ್ರ ಇತ್ತು. ಅಷ್ಟರಲ್ಲಿ ಅತ್ಯಾಧುನಿಕ ವೇಷಭೂಷಣದ ತರುಣಿಯೊಬ್ಬಳು ಬಸ್ಸಿನಲ್ಲಿ ಹಣಿಕಿಕ್ಕಿದಳು. ಸ್ಥಳಾವಕಾಶ ಇಲ್ಲದ್ದನ್ನು ನೋಡಿ ನಿರಾಶೆ ಗೊಂಡು ಕಂಡಕ್ಟರನಿಗೆ ಅಂಗಲಾಚಿಕೊಂ-ಡಳು. "ನನಗೆ ಕೊಲ್ಹಾಪುರದಲ್ಲಿ ಅಗತ್ಯದ ಕೆಲಸ ಇದೆ. ಹೇಗಾದರೂ ಮಾಡಿ, ಪ್ಲೀಜ್ ನನಗೊಂದು ಸೀಟು ಕೊಡಿರಿ,'' ಎಂದು.

ಕಂಡಕ್ಟರನು "ಜಾಗಾ ಇಲ್ರಿ'' ಎಂದ.

ಅವರಿಬ್ಬರಲ್ಲಿ ನಡೆದ ಸಂಭಾಷಣೆಯನ್ನು ಕೇಳುತ್ತಿದ್ದ ನನಗೊಂದು ಯೋಚನೆ ಹೊಳೆ ಯಿತು : ನನ್ನ ಸೀಟನ್ನು ಅವಳಿಗೆ ಕೊಟ್ಟು, ನಾನು ನಿಂತುಕೊಂಡು ಪ್ರಯಾಣಮಾಡಿ ನನ್ನ ದೊಡ್ಡಿಸ್ತಿಕೆಯ ಗುಣವನ್ನೇಕೆ ತೋರಿಸಿಕೊ-ಳ್ಳಬಾರದು ? ಸರಿ, ಅವಳನ್ನು ಕರೆದೇಬಿಟ್ಟೆ-"ಬರ್ರಿ, ನೀವು ಇಲ್ಲಿ ಕುಳಿತುಕೊಳ್ಳಿರಿ, ನಾನು ನಿಂತುಕೊಂಡು ಹೋಗುವೆ'' ಎಂದೆ-ಅವಳು "ಥ್ಯಾಂಕ್ಸ'' ಎಂದು ಮುಗುಳುನಗೆಯಿಂದ ನನ್ನ ಉಪಕಾರವನ್ನು ಸ್ಮರಿಸುತ್ತ ಸೀಟನ್ನು ಆಕ್ರಮಿಸಿದಳು.

ಇನ್ನು ಗಾಡಿ ಬಿಡುವದು ಅನ್ನುವದರಲ್ಲಿ ಸ್ಟ್ಯಾಂಡ ಕಂಟ್ರೋಲರನು ಬಂದು "ಬಸ್ಸಿ-ನಲ್ಲಿ ಪ್ರಯಾಣಿಕರು ಹೆಚ್ಚಾಗಿದ್ದಾರೆ. ನಿಂತವ ರೆಲ್ಲರೂ ಕೆಳಗೆ ಇಳಿಯಿರಿ'' ಎಂದು ಅಪ್ಪಣೆ ಮಾಡಿದನು. ನಾನು ಎಷ್ಟು ಹೇಳಿಕೊಂಡರೂ ನಿರರ್ಥಕವಾಯಿತು. ಆ ತರುಣಿ ಮಾತ್ರ ಏನೂ ಕೇಳಿಸದವಳಂತೆ ತನ್ನ ಸೀಟನ್ನು ಭದ್ರ ಪಡಿಸಿಕೊಂಡು ಕುಳಿತಿದ್ದಳು. ನಿರುಪಾಯನಾಗಿ ಅವಳ ಮೇಲೆ ಹಲ್ಲುಕಡಿಯುತ್ತಾ ಕೆಳ ಗಿಳಿದೆನು. ಬಸ್ಸು ಬಿಟ್ಟಿತು.

—ವ್ಹಿ. ಜಿ. ವೈದ್ಯ, ಬೆಳಗಾವಿ.

ನಾನೊಮ್ಮೆ ಹುಬ್ಬಳ್ಳಿಯಿಂದ ಬಾಗಿಲು ಕೋಟೆಗೆ ರೈಲಿನಲ್ಲಿ ಪ್ರಯಾಣ ಮಾಡುತ್ತಿದ್ದೆ. ಒಬ್ಬ ಊಲನ್ ಸೂಟು ಧರಿಸಿದ ಯುವಕನು ಒಳ್ಳೇ ಠೀವಿಯಿಂದ ಪುಸ್ತಕವನ್ನೋದುತ್ತ ಕುಳಿತಿದ್ದನು. ಕುಸುಗಲ್ ಸ್ಟೇಶನ್ನಿನಲ್ಲಿ ಒಬ್ಬ ಮನುಷ್ಯನು ಅವಸರದಿಂದ ಇಳಿಯುವಾಗ ಈ ಯುವಕನ ಕಾಲು ತುಳಿದನು. "ತುಳಿ-ಯೂದ ತುಳೀತಿ ಯಜಮಾನಾ, ಆದರೆ ಜರಾ ಮೆಲ್ಲಗೆ ತುಳಿದಿದ್ದರೆ ಚೆಲೋಆಗ್ತಿತ್ತು'' ಎಂದ. ಆ ಮನುಷ್ಯ ಈ ಕೊಂಕು ಮಾತನ್ನು ಕೇಳಿ ನೊಂದುಕೊಂಡ. ಕೆಲ ಜನ ಈ ಮಾತನ್ನು ಕೇಳಿ ಖೊಳ್ಳನೆ ನಕ್ಕರು. ಕೆಲ ಹಿರಿಯರು ಮಾತ್ರ ಆ ಯುವಕನೆಡೆ ಹುಸಿನಗೆ ಬೀರಿದರಷ್ಟೇ.

ಮುಂದಿನ ಸ್ಟೇಶನದಲ್ಲಿ ಆ ಯುವಕನು ಇಳಿಯುವಾಗ ಒಬ್ಬ ವೃದ್ಧನ ಕಾಲು ತುಳಿ ದನು. "ಕ್ಷಮಿಸಿರಿ ತಪ್ಪಾಯಿತು'' ಎಂದ ಯುವಕ. "ತುಳಿಯಲಿಕ್ಕೆ ನನ್ನ ಅಡ್ಡಿಯಿಲ್ಲ ರಾಯರೇ, ಆದರೆ ನೋವಾಗದಂತೆ ತುಳೀರಿ ತೀರಿತು'' ಎಂದ ಆ ಮುದುಕ. ಈ ಸಲವೂ

ನಗುವವರು ನಕ್ಕರು. ಹಿರಿಯರು ಈ ಸಲ ಹುಸಿನಗೆಯನ್ನು ಮತ್ತೆ ಯುವಕನ ಕಡೆಗೇ ಬೀರಿದರು.

—ವ್ಹಿ. ಕೃ. ಬೆಂಗಳೂರ, ಹುಬ್ಬಳ್ಳಿ.

ನಾನು ಪುಣೆಯಲ್ಲಿ ವಿದ್ಯಾರ್ಥಿಯಾಗಿದ್ದಾಗ, ಕೆಂಟೋನಮೆಂಟದಲ್ಲಿ ಪ್ರಸಿದ್ಧ ಇಟಾಲಿಯನ ಹೊಟೆಲು ಒಂದಿತ್ತು. ಅಲ್ಲಿಗೆ ಚಹಾ ಕುಡಿಯಲು ನಾವು ಆಗಾಗ ಹೋಗುತ್ತಿದ್ದೆವು. ಒಂದು ಚಹಾ ಅಂದರೆ ಸುಂದರವಾದ ಕಿಟ್ಲಿಯಲ್ಲಿ ಸುಮಾರು ಎರಡುವರೆ ಕಪ್ಪಿನಷ್ಟು ಚಹಾ, ಅಷ್ಟು ಚಹಾಕ್ಕೆ ಬೇಕಾಗುವಷ್ಟು ಹಾಲು, ಸಕ್ಕರೆ ಅಂದವಾದ ಟ್ರೇಯಲ್ಲಿ ತಂದು ಕೊಡುತ್ತಿದ್ದರು. ಒಂದು ಚಹಾದ ದರ ನಾಲ್ಕು ಆಣೆ ಇರುತ್ತಿತ್ತು. ಹಲವು ಸಾರೆ ನಾವು ಅಷ್ಟನ್ನು ಕುಡಿಯಲಾರದೆ ಕೆಲವಂಶವನ್ನು ಕಿಟ್ಲಿಯಲ್ಲೇ ಬಿಡುತ್ತಿದ್ದೆವು.

ಒಮ್ಮೆ ಇಬ್ಬರು ವಿದ್ಯಾರ್ಥಿಗಳು ನಾಲ್ಕು ಆಣೆ ಕೊಟ್ಟು ಒಬ್ಬನೇ ಚಹಾ ಕುಡಿಯುವದೇಕೆ ಎಂದು ಯೋಚಿಸಿ, ಒಂದು ಚಹಾ ತರಿಸಿ ಇನ್ನೊಂದು ಹೆಚ್ಚಿನ ಕಪ್ ತರಲು ವೇಟರನಿಗೆ ಹೇಳಿದರು. ವೇಟರನು ಒಂದು ಚಹಾ ತರಿಸಿದಾಗ ಎರಡು ಕಪ್ ಕೊಡಲು ಹುಕುಮು ಇಲ್ಲ ಎಂದನು. ಆದರೆ ಮಿತವ್ಯಯಪಟುಗಳು ಇಷ್ಟರಿಂದ ಸೋಲುವಂತಿರಲಿಲ್ಲ. ಹೊಟೆಲ ಮ್ಯಾನೇಜರರಿಗೆ ಕಲಿಸುತ್ತೇವೆಂದು ಬಗೆದು, ಒಬ್ಬನು ಕಪ್ಪಿನಿಂದ, ಇನ್ನೊಬ್ಬನು ಬಸಿಯಿಂದ ಕುಡಿದು ವಿಜಯವನ್ನು ಸಾಧಿಸಿದ ವೀರರಂತೈವೇಟರನಿಗೆ "ಬಿಲ್ ತಾ'' ಎಂದು ಅಜ್ಞೆಯಿತ್ತರು.

ಬಿಲ್ ನೋಡಿದಾಗ ಮಾತ್ರ ಇಬ್ಬರಿಗೂ ದಿಗಿಲುಬಿತ್ತು. ಅದರಲ್ಲಿ "ಎರಡು ಚಹಾ, ಎಂಟು ಆಣೆ'' ಎಂದು ಬರೆದಿತ್ತು.

—ರಂ. ರಾ. ತ., ಬೆಳಗಾವಿ.



ಈ ಶೀರ್ಷಿಕೆಯ ಕೆಳಗೆ ಪ್ರಕಟವಾಗಲು ಓದುಗರಿಂದ ಸ್ವಂತ ಅನುಭವದ ಇಂಥ ಚುಟುಕು ಲೇಖಗಳು ಬೇಕಾಗಿವೆ. ೧೫೦ ಶಬ್ದಗಳಿಗೆ ಮೀರದಂತೆ ಅವನ್ನು ಬರೆದು ಕಳಿಸಬೇಕು. ಚುಟುಕುಗಳು ಭಾರತೀಯ ಜೀವನದ ಸ್ವಾರಸ್ಯಮುಖವನ್ನು ಪ್ರದರ್ಶಿಸುವಂತಿರಬೇಕು. ಸ್ವೀಕೃತವಾದ ಪ್ರತಿ ಚುಟುಕಕ್ಕೆ ಒಂದು ರೂಪಾಯಿ ಬಹುಮಾನವೀಯಲಾಗುವದು.

ಭಾರತದಲ್ಲಿ ಮಹಿಳೆಯರಿಗೆ ಈ ಸುಖಗಳು ಬರಲು ಇನ್ನೂ ಸ್ವಲ್ಪ ತಡವಾಗ ಬಹುದು; ಆದರೆ ಆರ್ಥಿಕ ಪ್ರಗತಿಯಾದರೆ ಇಸವಿ ೧೯೮೦ರಲ್ಲಲ್ಲದಿದ್ದರೆ ೨೦೦೦ಕ್ಕಾದರೂ "ಗೃಹಿಣಿಯರ ಸ್ವರ್ಗ'' ಅವರ ಬಾಗಿಲಿಗೆ ಬರುವದು ಖಂಡಿತ—

# ನಿಮ್ಮ ಮೊಮ್ಮಗಳು ಮತ್ತು ಮನೆಗೆಲಸ

ನಿಮ್ಮ ಮೊಮ್ಮಗಳ ಕಾಲಕ್ಕೆ ಮನೆಗೆ-ಲಸ, ಅಡಿಗೆ ಮೊದಲಾದ ಶಬ್ದಗಳಿಗೆ ಅರ್ಥವೇ ಇಲ್ಲದಾಗಬಹುದು. ಕಾಶೀ ಯಾತ್ರೆಯನ್ನು ಕಾಲ್ನಡಿಗೆಯಿಂದ ಮಾಡುವ ಕಾಲದ ಕಥೆಗಳಂತೆ ನಿಮ್ಮ ಕಾಲದ ಮನೆಗೆಲಸದ ಕಷ್ಟಗಳ ಕಥೆಗಳನ್ನು ಕೇಳಿ ಅವಳಿಗೆ ಒಳ್ಳೇ ಸೋಜಿಗವೆನಿಸಬಹುದು.

ವಿಜ್ಞಾನದ ಪ್ರಗತಿಯು ನಿಮ್ಮ ಮೊಮ್ಮಗಳಿಗೆ ಮನೆಗೆಲಸವನ್ನೆಲ್ಲ ನೀರು ಕುಡಿದಷ್ಟು ಸುಲಭ ಮಾಡಿಕೊಡಲಿದೆ.

ರಾಜಕೀಯ ಘಟನೆಗಳ ಭವಿಷ್ಯ ಹೇಳುವದು ಎಂಥ ಜ್ಯೋತಿಷಿಗೂ ಕಷ್ಟದ ಕೆಲಸ. ಆದರೆ ನಮ್ಮ ನಿತ್ಯ ಜೀವನದ ಸುಖ ಸೌಕರ್ಯಗಳು ಇನ್ನೆರಡು ತಲೆಮಾರಿನಲ್ಲಿ ಹೇಗಿರಬಹುದೆಂದು ಹೆಚ್ಚು ಸುಲಭವಾಗಿ ಊಹಿಸಿಕೊಳ್ಳಬಹುದು. ಯಾಕೆಂದರೆ ಮುಂದಿನ ಸುಖ ಸೌಕರ್ಯಗಳ ಬೀಜಗಳು ಈಗಲೇ ಬಿತ್ತಲ್ಪಟ್ಟಿವೆ.

೧೮೯೦ ರಲ್ಲಿ ಮೋಟಾರುಗಳು ಮೊದಲ ಬಾರಿ ರಸ್ತೆಗಳಲ್ಲಿ ಘುಡಘುಡಿಸುತ್ತ ಹೊರಟಾಗಲೇ ಒಂದು ಪೀಳಿಗೆಯೊಳಗೆ ಎಲ್ಲೆಡೆ ಅವು ಜನಪ್ರಿಯವಾಗಲಿವೆಯೆಂದು ಊಹಿಸಬಹುದಿತ್ತು. ವಿದ್ಯುದ್ದೀಪದ ಮೊದಲನೇ ಬಲ್ಬು ಪ್ರಯೋಗಶಾಲೆಯಲ್ಲಿ ಝಗ್ಗೆಂದಾಗ ಕಂದೀಲುಗಳಿಗೆ ಅರ್ಧ ಚಂದ್ರವಾಗುವ ಕಾಲ ಬಹಳ ದೂರವಿಲ್ಲೆಂದು ತಿಳಿದಿತ್ತು.

ಮುಂದೆ ಆಗಬಹುದಾದ ಹೊಸ ಶೋಧಗಳ ಮಾತಂತಿರಲಿ. ಈಗಾಗಲೇ ಆದ ಶೋಧಗಳ ಮೇಲಿಂದ ಇಷ್ಟು ಹೇಳಬಹುದು. ೧೯೮೦ ರಷ್ಟು ಹೊತ್ತಿಗೆ ಗೃಹಿಣಿಯು ದೇಹಶ್ರಮದ, ಬೇಸರದ ಏಕತಾನ ಕೆಲಸಗಳಿಂದ ಮುಕ್ತಳಾಗಿ ಆರಾಮ ಜೀವನ ನಡೆಸುವಂತಾಗಲಿದೆ.

ಆಗ ಮನೆಗೆಲಸದ ಒದ್ದಾಟವೇ ಇರಲಾರದು. ಕಸ ಝಾಡಿಸುವದು, ಬಟ್ಟೆ ಒಗೆಯುವದು, ಥೂಳೊರಸುವದು, ಉರಿಯುವ ಒಲೆಯ ಮುಂದೆ ಬೆವರು ಸುರಿಸುತ್ತ ಕುಳಿತಿರುವದು, ಇದೊಂದನ್ನೂ ಕೇಳಬೇಡಿರಿ. ತಾನೇ ಒಂದು ಕಪ್ಪು ಚಹಾ ಮಾಡಿಕೊಳ್ಳುವ ಅಗತ್ಯ ಕೂಡ ನಿಮ್ಮ ಮೊಮ್ಮಗಳಿಗೆ ಬೀಳಲಾರದು!

ನಿಮ್ಮ ಮೊಮ್ಮಗಳು ಬಹುಶಃ ಬೆಳಿಗ್ಗೆ ಎದ್ದೊಡನೆ ಒಂದು ಟೇಪ್ ರಿಕಾರ್ಡರ ಯಂತ್ರಕ್ಕೆ ಆ ದಿನದ ಕೆಲಸಗಳನ್ನೆಲ್ಲ ಹೇಳಿಬಿಡುವಳು. ೭ ಗಂಟೆಗೆ ಚಹಾ, ಉಪ್ಪಿಟ್ಟು; ೧೦ಕ್ಕೆ ಊಟ; ೨

ಆ್ಯನ್ ಡೋರ್‌ವಿಲ್ಲರ ಲೇಖದ ಆಧಾರದಿಂದ

ಗಂಟೆಗೆ ಕಾಫಿ ಇತ್ಯಾದಿ. ಅದು ಅವಳ ಅಡಿಗೆ ಯಂತ್ರ, ಒಗೆಯುವ ಯಂತ್ರ, ಗುಡಿಸುವ ಯಂತ್ರ, ತೊಳೆಯುವ ಯಂತ್ರಗಳನ್ನು ನಿಶ್ಚಿತ ಹೊತ್ತಿಗೆ ತಾನೇ ಚಾಲೂ ಮಾಡಿಬಿಡುವದು. ಊಟ ಮಾಡಿದರೆ ತೀರಿತು. ಉಳಿದದ್ದೆಲ್ಲ ತಂತಾನೇ ಆಗುವದು.

ಗಾಳಿಗೋಪುರ? ಅಲ್ಲ. ಆಗಲೆ ಮುಂದುವರಿದ ದೇಶಗಳ ಅನುಕೂಲವಂತರ ಮನೆಗಳಲ್ಲಿ ನಿಶ್ಚಿತ ಕಾಲಕ್ಕೆ 'ಕುಕ್ಕರು'ಗಳನ್ನು 'ಹೊತ್ತಿಸಿ' ಅಡಿಗೆ ಮಾಡಿ, ಅದು ಮುಗಿದ ಮೇಲೆ ತಾನೇ ಸ್ವಿಚ್ ತೆಗೆದುಬಿಡುವ ಯಂತ್ರಗಳಿವೆ. ಇಂಥವೇ ತೊಳೆಯುವ, ಒಗೆಯುವ ಮೊದಲಾದ ಯಂತ್ರಗಳೂ ಆಗುತ್ತಿವೆ.

ಅದೇ ಪ್ರಕಾರ ಇಡಿ ಇಡಿ ಕಾರಖಾನೆಗಳನ್ನು ಕೂಲಿಕಾರರ ಸಹಾಯವಿಲ್ಲದೆ ತಾವೇ ನಡೆಸುವ 'ವಿದ್ಯುತ್ ಮೆದುಳು' ಗಳೂ ಇವೆ.

ಇವೆರಡರ ಹೊಂದಿಕೆ ಪ್ರತಿ ಮನೆಯಲ್ಲಿ ಆಗುವದೊಂದೇ ಬಾಕಿ; ಅದಾಗುವದು ಖಂಡಿತ. ಆಗ ಯಂತ್ರಗಳು ಕೂಡ ತಾವೇ ಚಾಲೂ ಆಗಿ ಕೆಲಸ ಮುಗಿಸಿ ತಾವೇ ಸ್ವಿಚ್ ತೆಗೆದುಬಿಡುವವು.

ನೀವು ಗಡಿಯಾರಕ್ಕೆ ಅಲಾರಂ ಇಡುವಂತೆ ನಿಮ್ಮ ಮೊಮ್ಮಗಳು ಸ್ವಿಚ್ಚನ್ನು ೫ ಗಂಟೆಗೆ ಹೊಂದಿಸಿಟ್ಟು ಮಲಗುವಳು. ಬೆಳಗಿನ ೫ಗಂಟೆಗೆ ಅಡಿಗೆ ಯಂತ್ರ ತಾನೇ ಎಚ್ಚತ್ತು ಚಹಾ, ಉಪ್ಪಿಟ್ಟು, ಟೋಸ್ಟು, ಮುಖ ತೊಳೆಯಲು ಬಿಸಿನೀರು ಮತ್ತು ಬೇಕಾದ್ದನ್ನೆಲ್ಲ ತಯಾರಿಸಿಡುವದು. ನಿಮ್ಮ ಮೊಮ್ಮಗಳು ೬ ಗಂಟೆಗೆ ಎದ್ದು ಒಂದು ಸ್ವಿಚ್ ಹಾಕುವಳು. ಕೂಡಲೆ ಅವಳಿಗೆ ನೆರೆಯ ಕೋಣೆಯಲ್ಲಿ ಮಲಗಿದ್ದ ಮಕ್ಕಳು ಎದ್ದಿವೆಯೋ ಇಲ್ಲವೋ ಎಂದು ಟೆಲಿವಿಜನ್ ಪರದೆಯ ಮೇಲೆ ಕಾಣಿಸುವದು. ಎದ್ದಿರದಿದ್ದರೆ, ಇಲ್ಲವೆ ಎದ್ದು ಗಲಾಟೆ ಮಾಡುತ್ತಿದ್ದರೆ ಅವಳು ಅವರ ಸಮಾಚಾರ ತೆಗೆದುಕೊಂಡು ಪುಸ್ತಕದ ಮುಂದೆ ಕೂಡ್ರಿಸುವಳು.

ನೆಲದ ಧೂಳು ಉಡುಗುವ ಕೆಲಸ? ಪ್ಪೂ! ಪ್ಪೂ! ಧೂಳು ಮನೆಯೊಳಗೆ ಬಂದರಲ್ಲವೆ? ನಿಮ್ಮ ಮೊಮ್ಮಗಳ ಮನೆಯ ಪ್ರತಿ ಕಿಟಕಿ, ಬಾಗಿಲು ಮೊದಲಾದ್ದಕ್ಕೂ ಅಯಸ್ಕಾಂತ ಲೋಹದ ಆವರಣವಿರುವದು. ಅದು ಒಂದು ಕಣ ಧೂಳನ್ನೂ ಮನೆಯೊಳಗೆ ಹೋಗಗೊಡದೆ ತಾನೇ ಸೆಳೆದುಕೊಳ್ಳುವದು. ಹಗಲಿರುಳೂ ಬೇಸಿಗೆ ಚಳಿಗಾಲಗಳೆರಡರಲ್ಲೂ ಅವಳ ಮನೆ ಏರ್‌ಕಂಡೀಶನ್‌ದಿಂದ ಸುಖೋಷ್ಣವಾಗಿರುವದು.

ಅಂದಿನ ಮನೆಗಳ ಬಗೆಯೇ ಬೇರೆ. ನಿಮ್ಮ ಮೊಮ್ಮಗಳ ಮನೆ ಇದ್ದಲ್ಲಿರದೆ, ಸೂರ್ಯ ಪ್ರಕಾಶದೊಡನೆ ತಿರುಗುವ ಏರ್ಪಾಡನ್ನು ಒಳಗೊಂಡಿರುವದು. ಬಿಸಿಲು ಬೇಕೆನಿಸಿತೋ ನಿಮ್ಮ ಮೊಮ್ಮಗಳು ಮನೆಯನ್ನು ಬಿಸಿಲಿಗೆ ಎದುರಾಗಿ ತಿರುಗಿಸಬಹುದು. ಸೆಕೆಯಾದರೆ ಬಿಸಿಲಿಗೆ ಬೆನ್ನು ತಿರುಗಿಸಬಹುದು. ಅವಳ ಮನೆ ಹಗುರಾದರೂ ಬಲವಾದ ವಸ್ತುಗಳಿಂದ ತಯಾರಾಗುವದು. ಅವುಗಳನ್ನು ವಿಮಾನಗಳಿಂದ ಎತ್ತಿ ಬೇರೊಂದೆಡೆ ಒಯ್ಯುವದೂ ಸಾಧ್ಯವಾದೀತು!

ನಿಮ್ಮ ಮೊಮ್ಮಗಳ ಕಾಲದಲ್ಲಿ ತರಕಾರಿ ಹಣ್ಣುಹಂಪಲು ತಂದಿಟ್ಟರೆ ಕೊಳೆತು ಹೋಗುವ ಅಂಜಿಕೆಯೇ ಇರಲಾರದು. ಪದಾರ್ಥಗಳು ಕೊಳೆಯುವಂತೆ ಮಾಡುವ ಅಣುಜೀವಿಗಳನ್ನು ಕೊಂದು ಅವುಗಳನ್ನು ತಾಜಾ ಉಳಿಸುವ ವ್ಯವಸ್ಥೆ ಆಗ ಸಾರ್ವತ್ರಿಕವಾಗಲಿದೆ. ಅಣುವಿಕಿರಣಕ್ಕೆ ಒಳಪಡಿಸಿ ಹಣ್ಣು ಹಂಪಲು, ತರಕಾರಿ, ಮಾಂಸ ಮೊದಲಾದವನ್ನು ಬೇಕಾದಷ್ಟು ದಿನ ಕೆಡದಂತೆ ಇಡಬಹುದು.

ಅಂತೂ ನಿಮ್ಮ ಮೊಮ್ಮಗಳ ಕಾಲಕ್ಕೆ ಗೃಹಿಣೀ ಜೀವನ ಎಷ್ಟು ಸುಲಭವಾಗುವದೆಂದರೆ ಅವಳನ್ನು ಗೃಹಿಣಿ ಎಂದು ಕರೆಯುವದೇ ಸರಿಯಲ್ಲ ಅನಿಸುವದು! ಈಗ ನಿಮಗೆ ದಿನದ ೨೪ ತಾಸು ಸಾಲದೆನಿಸುತ್ತದೆ. ಅವಳಿಗೆ ೨೪ ತಾಸುಗಳನ್ನು ಏನು ಮಾಡಲಿ ಅನಿಸಬಹುದು.



**ಈ ಪೌರಾಣಿಕ ಕಥೆ ಆಧುನಿಕ ಕಥೆಗಳಷ್ಟೇ ರೋಮಾಂಚಕವಾಗಿದೆ.**

# ಗಾಧಿ ಕಂಡ ಮಾಯಾವಿಲಾಸ

ಕೋಸಲ ದೇಶದಲ್ಲಿ ಗಾಧಿಯೆಂಬ ಶ್ರೋತ್ರಿಯ ಬ್ರಾಹ್ಮಣನಿದ್ದನು. ಅವನು ಧರ್ಮಿಷ್ಠಮತ್ತುಶಾಸ್ತ್ರಜ್ಞ. ಅವನಿಗೆ ವಿಷಯಗಳಲ್ಲಿ ವಿರಕ್ತಿ ಹುಟ್ಟಿ, ಮನೆಮಾರು ಬಂಧುಬಾಂಧವರನ್ನು ತ್ಯಜಿಸಿ ತಪಸ್ಸಿಗಾಗಿ ಅರಣ್ಯಕ್ಕೆ ಹೋದನು.

ಸರೋವರದಲ್ಲಿ ಕಂಠಮಟ್ಟ ನೀರಲ್ಲಿ ನಿಂತು ಅವನು ಉಗ್ರ ತಪಸ್ಸು ಪ್ರಾರಂಭಿಸಿದನು. ಪರಮಾತ್ಮನ ದರ್ಶನವೊಂದೇ ಅವನ ಅಭೀಷ್ಟವಾಗಿತ್ತು. ಎಂಟು ತಿಂಗಳ ಅವಿರತ ತಪಸ್ಸಿನ ನಂತರ ಶ್ರೀಮನ್ನಾರಾಯಣನು ಪ್ರತ್ಯಕ್ಷನಾದನು.

"ಭಕ್ತಾ, ತಪಸ್ಸಿಗೆ ಮೆಚ್ಚಿದ್ದೇನೆ. ವರ ಬೇಡಿಕೋ" ಎಂದು ಪರಮಾತ್ಮ ಕರುಣಾಪೂರ್ಣ ಸ್ವರದಲ್ಲಿ ಹೇಳಿದನು.

ಬ್ರಾಹ್ಮಣನಿಗೆ ಸತ್ಯದರ್ಶನ ಬೇಕಾಗಿತ್ತು. ಅವನು ಪ್ರಪಂಚದ ಸ್ವರೂಪದ ಬಗ್ಗೆ ವಿಚಾರ ಮಾಡಿಮಾಡಿ ದಣಿದಿದ್ದ. ಇದು ತಥ್ಯವೋ ಅತಥ್ಯವೋ ನಿತ್ಯವೋ ಅನಿತ್ಯವೋ ಎಂಬ ಪ್ರಶ್ನೆ ಬಗೆಹರಿದಿರಲಿಲ್ಲ. ಅವನು ಬೇಡಿಕೊಂಡ: "ಪ್ರಭೋ, ಮಾಯೆಯನ್ನು ನನಗೆ ತೋರಿಸು. ಈ ಸಂಸಾರವೆಲ್ಲ ನಿನ್ನಲ್ಲಿ ಅಧಿಷ್ಠಿತವಾಗಿ ನಡೆಯಲು ಕಾರಣವಾದ ಆ ನಿನ್ನ ಮಾಯೆಯನ್ನು ನೋಡುವ ಬಯಕೆಯಾಗಿದೆ."

"ಹಾಗೇ ಆಗಲಿ" ಎಂದು ಗರುಡಧ್ವಜ ಪ್ರಭು ಅಂತರ್ಧಾನ ಹೊಂದಿದನು.

ಗಾಧಿ ನೀರಿನಿಂದ ಮೇಲೆ ಬಂದು ವೃಕ್ಷಗಳ ಬುಡದಲ್ಲಿ ಇರತೊಡಗಿದನು. ಹಣ್ಣು ಹಂಪಲು ತಿಂದು ಋಷಿಜೀವನ ನಡೆಸುತ್ತ ಮಾಯಾದರ್ಶನವನ್ನು ಎದುರುನೋಡುತ್ತಿದ್ದನು.

ಕೆಲ ದಿನ ಕಳೆಯಿತು. ಒಂದು ದಿನ ಸರೋವರದಲ್ಲಿ ಸ್ನಾನ ಮಾಡುತ್ತ ದರ್ಭದಿಂದ ನೀರಲ್ಲಿ ಸುಳಿಯನ್ನುಂಟುಮಾಡಿ ಮುಳುಗು ಹಾಕಿ ಗಾಧಿ ಅಘಮರ್ಷಣ ಮಂತ್ರವನ್ನು ಜಪಿಸತೊಡಗಿದನು.

ಆಗ ಒಂದು ವಿಚಿತ್ರ ಘಟಿಸಿತು. ಗಾಧಿಗೆ ನಡುವೆಯೇ ಮಂತ್ರ ಮರೆತುಹೋಯಿತು. ಅವನ ಚಿತ್ತ ಅದ್ಭುತವಾದ ಒಂದು ದಶೆಗೆ ಒಳಗಾಯಿತು. ತಾನು ಸರೋವರದಲ್ಲಿ ಮೀಯುತ್ತ ಇರದೆ ತನ್ನ ಮನೆಗೆ ಮರಳಿದಂತೆ ಅವನಿಗೆ ಭಾಸವಾಯಿತು. ಮತ್ತು ತಾನು ಅಲ್ಲಿ ಸತ್ತುಹೋದದ್ದನ್ನೂ ಅವನು ಕಂಡನು. ಅವನ ಕಳೇವರ

**ಯೋಗವಾಸಿಷ್ಠದಿಂದ ಆಯ್ದುದು**



ಸ್ಮಶಾನಕ್ಕೆ ಒಯ್ಯಲ್ಪಟ್ಟಿತು. ಅಲ್ಲಿ ಅದನ್ನು ಚಿತೆಯ ಮೇಲೇರಿಸಿ ದಹಿಸಲಾಯಿತು.

ಅಲ್ಲಿಂದ ಗಾಧಿಗೆ ಬೇರೊಂದು ಅನುಭವ ವಾಯಿತು. ಸೂಕ್ಷ್ಮ ಶರೀರಧಾರಿಯಾದ ಅವನ ಆತ್ಮ ಭೂತಮಂಡಲವೆಂಬ ದೇಶಕ್ಕೆ ಪ್ರಯಾಣ ಬೆಳಸಿದೆ. ಅಲ್ಲಿ ಚಂಡಾಲ ಸ್ತ್ರೀಯೊಬ್ಬಳ ಗರ್ಭ ವನ್ನು ಪ್ರವೇಶಿಸುತ್ತಿದೆ. ಪಿಂಡ ಬೆಳೆದು ತಾನು ಒಂದು ಗಂಡು ಮಗುವಾಗಿ ಹುಟ್ಟಿದ್ದಾನೆ.

ಚಂಡಾಲ ಮಾತಾಪಿತೃಗಳು ಅವನಿಗೆ ಕಟಂಜ ಎಂದು ಹೆಸರಿಟ್ಟು ಸಾಕಿ ಸಲುಹಿದರು. ಕಟಂಜ ಬೆಳೆದು ದೊಡ್ಡವನಾದ. ಒಳ್ಳೇ ಬಲಿಷ್ಠ ತರುಣ ನಾದ. ಅವನು ಬಿಲ್ಲು ವಿದ್ಯೆಯಲ್ಲಿಯೂ ಬೇಟೆ ಯಲ್ಲೂ ಸಿದ್ಧಹಸ್ತನಾದ. ಚಂಡಾಲ ಕನ್ಯೆಯೊ ಬ್ಬಳೊಡನೆ ಮದುವೆಯಾಯಿತು. ಮಕ್ಕಳು ಮರಿಯೂ ಆಯಿತು.

ಒಮ್ಮೆ ಊರಲ್ಲಿ ಮಹಾಮಾರಿಯ ಹಾವಳಿ ಯೆದ್ದಿತು. ಕಟಂಜನ ಕಣ್ಣುಂದೆಯೇ ಅವನ ಹೆಂಡತಿ ಮಕ್ಕಳು ಪಟಪಟನೆ ಬಿದ್ದು ಸತ್ತರು. ತನ್ನವರೆಂಬವರು ಯಾರೂ ಉಳಿಯಲಿಲ್ಲ. ಕಟಂಜ ಶೋಕಾಕುಲನಾಗಿ ಊರು ಬಿಟ್ಟು ಹೊರಟುಹೋದ.

ಊರೂರು ಅಲೆಯುತ್ತ ಕಟಂಜನು ಕೀರ ದೇಶದ ರಾಜಧಾನಿಯಾದ ಶ್ರೀಮತೀಪುರವನ್ನು ಸೇರಿದನು. ಅಲ್ಲಿನ ಅರಸ ಅದೇ ಸತ್ತಿದ್ದನು. ಹೊಸ ರಾಜನನ್ನು ಆರಿಸುವ ಗದ್ದಲ ನಡೆದಿತ್ತು. ಅರಸ ನಿಧನ ಹೊಂದಿದಾಗ, ಪಟ್ಟದಾನೆಯನ್ನು ಬೀದಿಯಲ್ಲಿ ಬಿಟ್ಟು, ಯಾರನ್ನು ಅದು ಎತ್ತಿ ತಲೆಯ ಮೇಲೆ ಏರಿಸಿಕೊಳ್ಳುವುದೋ ಅವನನ್ನೇ ಅರಸನಾಗಿ ಮಾಡುವುದು ಕೀರದೇಶದ ಸಂಪ್ರ ದಾಯವಾಗಿತ್ತು.

ಪಟ್ಟದಾನೆಯನ್ನು ಸಿಂಗರಿಸಿ ಬಿಡಲಾಯಿತು. ಅದು ಯಾರನ್ನು ಆರಿಸುವುದೋ ನೋಡೋಣ ವೆಂದು ಜನರು ಉತ್ಸುಕರಾಗಿ ಬೆಂಬತ್ತಿದರು. ಆನೆ ರಾಜಧಾನಿಯಲ್ಲಿ ತಿರುಗುತ್ತ ಕಟಂಜ ನಿಂತಿ ದ್ದಲ್ಲಿಗೆ ಬಂತು; ಅವನನ್ನು ಸೊಂಡಿಲಲ್ಲಿ ಎತ್ತಿ ತಲೆಯ ಮೇಲೇರಿಸಿಕೊಂಡಿತು. ಮಂಗಲ ವಾದ್ಯಗಳು ಬಾರಿಸಿದವು; ಜಯಜಯಕಾರ ಎಲ್ಲೆಲ್ಲಿಯೂ ಮಸಗಿತು.

ಕಟಂಜನು ಕನಸುಮನಸಿನಲ್ಲಿ ನೆನೆಯದ ಈ ಸೌಭಾಗ್ಯವನ್ನು ಉಳಿಸಿಕೊಳ್ಳಲು ತನ್ನ ಹೆಸರು ದೆಸೆ ಜಾತಿಗಳನ್ನು ಮರೆಮಾಚಿ ತನ್ನ ಹೆಸರು ಗವಲನೆಂದು ಹೇಳಿದನು. ಪಟ್ಟಾಭಿಷೇಕವಾ ಯಿತು. ರಾಜ್ಯಾಧಿಕಾರ, ರಾಜಭೋಗಗಳು ಅವ ನವಾದವು. ಹಲವು ರಾಣಿಯರಾದರು. ಅವನು ಹೊಲೆಯನೆಂದು ಯಾರಿಗೂ ಗೊತ್ತಾಗಲಿಲ್ಲ.

ಚಂಡಾಲ ಕಟಂಜನ ರಾಜವೈಭವ ಇದೇ ಬಗೆಯಾಗಿ ಎಂಟು ವರ್ಷ ಸಾಗಿತು. ಆ ಮೇಲೆ ಒಂದು ದಿನ ಅವನ ಭಾಗ್ಯವೆಲ್ಲ ಒಂದು ಆಕಸ್ಮಿಕ ಘಟನೆಯಿಂದ ಮಣ್ಣುಪಾಲಾಗಿಹೋಯಿತು.

ಆ ದಿನ ಶ್ರೀಮತಿಪುರದಲ್ಲಿ ಚಂಡಾಲರ ಒಂದು ಹಬ್ಬವಿತ್ತು. ನಾನಾ ದೇಶಗಳಿಂದ ಚಂಡಾಲರು ನೆರೆದಿದ್ದರು. ಅವರು ಬಾರಿಸುತ್ತ ಕುಣಿಯುತ್ತ ಹೊರಟಾಗ ರಾಜನು ಕುತೂಹಲದಿಂದ ಅರ ಮನೆಯ ಬಾಗಿಲಲ್ಲಿ ನಿಂತು ಮೆರವಣಿಗೆಯನ್ನು ನೋಡತೊಡಗಿದನು. ಉತ್ಸವಕ್ಕಾಗಿ ಬಂದ ವರಲ್ಲಿ ಕಟಂಜನ ಸ್ವಂತಗ್ರಾಮದ ಒಬ್ಬ ಮುದುಕ ಹೊಲೆಯನಿದ್ದನು. ಅವನು ಅರಸನನ್ನು ಗುರು ತಿಸಿದನು. 'ಎಲಾ! ನಮ್ಮ ಕಟಂಜ! ಇಲ್ಲಿ ಬಂದು ಬಿಟ್ಟಿದ್ದೀಯಾ? ನಿನಗೆ ರಾಜ್ಯ ಸಿಕ್ಕಿತೇ? ಸಂತೋಷ ಸಂತೋಷ! ಬಡಪಾಯಿಗಳಾದ ನಮ್ಮನ್ನು ಮರೆಯಬೇಡ ಮಹಾರಾಯಾ!' ಎಂದು ಆ ಮುದುಕ ಚಂಡಾಲ ಒದರಿ ಹೇಳಿಬಿಟ್ಟನು.

ಕಟಂಜನು ಅವನನ್ನು ಸನ್ನೆಯಿಂದ ತಡೆಯ ಬೇಕೆಂದರೂ ಆಗಲಿಲ್ಲ. ಅರಸನ ಬಳಿಯಿದ್ದ ರಾಣಿಯರೂ ಕೆಲ ಮಂತ್ರಿಗಳೂ ಚಂಡಾಲನ ಮಾತನ್ನು ಕೇಳಿ ಬೆಚ್ಚಿಬಿದ್ದರು. ಹಾಗಾದರೆ ತಮ್ಮ ರಾಜ ಚಂಡಾಲನೇ? ಸುದ್ದಿ ಊರಲ್ಲೆಲ್ಲ ಹಬ್ಬಿತು. ರಾಣಿಯರಂತಿರಲಿ, ಸೇವಕರೂ ಕಟಂಜನ ಬಳಿ ಸುಳಿಯದಾದರು.

ಬ್ರಾಹ್ಮಣರ ಸಭೆ ಸೇರಿತು. ಎಂಟು ವರ್ಷಗಳಿಂದ ಚಂಡಾಲನನ್ನು ಸ್ಪರ್ಶಿಸುತ್ತ ಅವನ ಮನೆಯಲ್ಲಿ ಭೋಜನಾದಿಗಳನ್ನು ಸ್ವೀಕರಿಸಿದ ತಮ್ಮ ಪಾಪಕ್ಕೆ ಪ್ರಾಯಶ್ಚಿತ್ತವೇನೆಂಬುದು ಚರ್ಚೆಗೆ ಬಿತ್ತು. ಅಗ್ನಿ ಪ್ರವೇಶ ಹೊರತು ಬೇರೆ ಪರಿಮಾರ್ಜನೆ ಇಲ್ಲೆಂಬ ತೀರ್ಮಾನ ಹೊರಟಿತು.

ನಗರದ ಹೊರಗೆ ಮಹಾ ಚಿತೆ ಸಿದ್ಧವಾಯ್ತು. ಚಂಡಾಲ ರಾಜನೊಡನೆ ಸಂಪರ್ಕ ಬೆಳೆಸಿದ ಸೇವಕರು, ಮಂತ್ರಿಗಳು, ಅವನ ರಾಣಿಯರು, ಬ್ರಾಹ್ಮಣರು ಅಗ್ನಿದೇವನಿಗೆ ತಮ್ಮ ದೇಹಗಳನ್ನು ಸಮರ್ಪಿಸಿದರು. ಈ ಘೋರ ದೃಶ್ಯವನ್ನು ನೋಡಿ ಕಟಂಜ ವಿಹ್ವಲನಾದನು. ಅವನೂ ಅದೇ ಚಿತೆಯಲ್ಲಿ ಧುಮುಕಿ ಇಹಲೋಕಯಾತ್ರೆ ಮುಗಿಸಿದನು.......

ನೀರಲ್ಲಿ ಮುಳುಗಿದ್ದ ಬ್ರಾಹ್ಮಣ ಗಾಧಿಗೆ ಹಠಾತ್ತಾಗಿ ಪ್ರಜ್ಞೆ ಮರಳಿತು. ಅವನಿಗೆ ಮಂತ್ರ ನೆನಪಿಗೆ ಬಂತು. ಸ್ನಾನ ಸಂಧ್ಯಾದಿಗಳನ್ನು ಪೂರೈಸಿ ಸರೋವರದಿಂದ ಹೊರಬಿದ್ದನು. ಆದರೆ ಅವನ ಮನಸು ತನ್ನ ವಿಚಿತ್ರ ಅನುಭವದಿಂದ ವಿಚಲಿತವಾಗಿತ್ತು. "ನಾನು ಇದೆಲ್ಲ ಏನು ಕಂಡೆ?" ಎಂಬ ಪ್ರಶ್ನೆ ಅವನನ್ನು ಬಾಧಿಸುತ್ತಿತ್ತು.

ಅಡವಿಯಲ್ಲಿ ಹೀಗೆ ಕೆಲದಿನ ಕಳೆಯಿತು. ಒಂದು ದಿನ ಗಾಧಿಗೆ ಪರಿಚಿತನಾಗಿದ್ದ ಒಬ್ಬ ಬ್ರಾಹ್ಮಣನು ಆ ದಾರಿಯಾಗಿ ಬಂದನು. ಅವನ ದೇಹ ಅತಿ ಕೃಶವಾಗಿತ್ತು. ಗಾಧಿ ಅವನಿಗೆ ಆದರಾತಿಥ್ಯಗಳನ್ನು ನೆರವೇರಿಸಿ, ವಿರಾಮವಾಗಿ ಕುಳಿತಾಗ, "ಹೀಗೇಕೆ ಸೊರಗಿದ್ದೀರಿ?" ಎಂದು ವಿಚಾರಿಸಿದನು.



ಆ ಬ್ರಾಹ್ಮಣ ಹೇಳಿದ: "ಏನು ಹೇಳಲಿ ಅದರ ಕಥೆ? ದೇಶಾಟನ ಮಾಡುತ್ತ ಕೀರ ದೇಶಕ್ಕೆ ಹೋಗಿದ್ದೆ. ಅಲ್ಲಿ ಒಂದು ತಿಂಗಳು ಇದ್ದೆ. ಅಷ್ಟರಲ್ಲಿ ಅಲ್ಲೊಂದು ಕೋಲಾಹಲ ಎದ್ದಿತು. ಅಲ್ಲಿನ ರಾಜ ಚಂಡಾಲನಿದ್ದನೆಂದು ತಿಳಿದುಬಂತಂತೆ. ಎಂಟು ವರ್ಷಕಾಲ ಅವನಿಂದ ತಾವು ಅಶನವಸನಾದಿಗಳನ್ನು ಸ್ವೀಕರಿಸಿದ್ದ ಬ್ರಾಹ್ಮಣರೆಲ್ಲರೂ ಚಿತೆಯನ್ನೇರಿದರು. ಆ ದೂಷಿತ ದೇಶದಲ್ಲಿ ಒಂದು ತಿಂಗಳು ಇದ್ದದ್ದಕ್ಕೆ ಪ್ರಾಯಶ್ಚಿತ್ತವೆಂದು ನಾನು ಚಾಂದ್ರಾಯಣ ವ್ರತ ಮಾಡಲು ಪ್ರಯಾಗಕ್ಕೆ ಹೋದೆ. ವ್ರತಮುಗಿಸಿ ಪಾರಣೆ ಮಾಡಿದವನೇ ಇತ್ತ ಬಂದೆ. ಅದರಿಂ-ದಲೇ ಇಷ್ಟು ಸೊರಗಿದ್ದೇನೆ."

ಗಾಧಿ ಬೆಚ್ಚಿಬಿದ್ದು, "ನಿಜ ಹೇಳುತ್ತೀರಾ?" ಎಂದು ಕೇಳಿದ.

"ಅಕ್ಷರಶಃ ನಿಜ."

ಈಗ ಗಾಧಿಗೆ ಮನಶ್ಶಾಂತಿಯೇ ಉಳಿಯಲಿಲ್ಲ. ಅತಿಥಿ ಹೊರಟುಹೋದ ಮೇಲೆ ಅವನು ಅಡವಿಯನ್ನು ಬಿಟ್ಟು ಹೊರಟನು. ದಾರಿ ಕೇಳುತ್ತ ಕೇಳುತ್ತ ಭೂತಮಂಡಲ ದೇಶವನ್ನು ತಲುಪಿದನು. ಅಲ್ಲಿ ಆ ಚಾಂಡಾಲರ ಕೇರಿಯನ್ನು ಹುಡುಕಿ ತೆಗೆದನು. ಅಲ್ಲಿ ಹೋಗುತ್ತಲೇ ಅವನಿಗದು ಪರಿಚಿತ ಸ್ಥಾನವೆನಿಸಿತು. ತಾನು ಕಟಂಜನಾಗಿದ್ದಾಗ ಅಲ್ಲಿ ನೋಡಿದ್ದೆಲ್ಲ ಅವನಿಗೆ ಗುರುತು

ಈ ಶಿಕ್ಷಣ ಕೇಂದ್ರದ ಖ್ಯಾತಿ ವಿದೇಶಗಳಲ್ಲಿ ಹಬ್ಬಿತ್ತು. ರಾಜಗೃಹ, ಮಿಥಿಲಾ, ಕಾಶಿ ಮೊದಲಾದ ಸ್ಥಳಗಳಿಂದ ವಿದ್ವಾಂಸರು ಉಚ್ಚ ಜ್ಞಾನ ಪ್ರಾಪ್ತಿಗಾಗಿ ಇಲ್ಲಿಗೆ ಬರುತ್ತಿದ್ದರು ಎಂದು ಜಾತಕ ಗ್ರಂಥಗಳಲ್ಲಿ ಹೇಳಿದೆ.

ಸಿಕಂದರನು ಭಾರತದ ಮೇಲೆ ದಾಳಿಮಾಡುವ ಪೂರ್ವದಲ್ಲಿ ಅಂದರೆ ಕ್ರಿ. ಶ. ಪೂ. ೪ನೆಯ ಶತಮಾನದಲ್ಲಿ ಮಹಾನ್ ದಾರ್ಶನಿಕರು ತಕ್ಷಶಿಲೆಯಲ್ಲಿ ಸಭೆಗೂಡಿದ್ದರು ಎಂಬ ಉಲ್ಲೇಖವೂ ಇದೆ.

ತಕ್ಷಶಿಲೆಯ ಮೇಲೆ ಬೇರೆ ಬೇರೆ ಅರಸರ ಪ್ರಭುತ್ವ ನಡೆಯಿತು. ಬೇರೆ ಬೇರೆ ಅರಸರ ಕಾಲದಲ್ಲಿ ಇಲ್ಲಿಯ ಭಾಷೆ ಬದಲಾಯಿತು ಎಂದು ಶಿಲಾಲೇಖಗಳು ಮತ್ತು ತತ್ಕಾಲೀನ ನಾಣ್ಯಗಳು ಸಾಕ್ಷಿ ಹೇಳುತ್ತವೆ. ಆದರೆ ಭಾಷೆ ಬದಲಾದರೂ ಶಿಕ್ಷಣ ಕೇಂದ್ರದ ಕಾರ್ಯ ಮಾತ್ರ ಸಾಗಿತ್ತು ಎಂಬ ಬಗ್ಗೆ ಉಲ್ಲೇಖಗಳೂ ದೊರೆಯುತ್ತವೆ. ಪಾರ್ಥೇನಿಯನ್ನ (ಪಾರಶಿಕ--ಇರಾಣಿ) ರ ಆಧಿಪತ್ಯ ಇಲ್ಲಿ ಕ್ರಿ. ಶ. ಪೂ. ೬ನೆಯ ಶತಮಾನದಲ್ಲಿತ್ತು. ಕ್ರಿ. ಶ. ಪೂ. ೨ ಮತ್ತು ೩ ನೆಯ ಶತಮಾನಗಳಲ್ಲಿ ಗ್ರೀಕರು ಅಂದರೆ ಯವನರ ಪ್ರಭುತ್ವ ಇಲ್ಲಿ ನಡೆಯುತ್ತಿತ್ತು. ಮುಂದೆ ಸುಮಾರು ನೂರು ವರ್ಷಗಳವರೆಗೆ ಶಕರ ಅಧಿಕಾರ ಇಲ್ಲಿ ನಡೆಯಿತು. ಕ್ರಿ. ಶ. ೧ನೆಯ ಶತಮಾನದಲ್ಲಿ ತಕ್ಷಶಿಲಾ ನಗರವು ರಾಜ್ಯದ ರಾಜಧಾನಿಯಾಗಿತ್ತು. ಈ ಸಮಗ್ರ ಕಾಲದಲ್ಲಿ ರಾಜಕೀಯ ಪ್ರಭುತ್ವದ ಬದಲಾವಣೆಯ ಮೂಲಕ ವಿದೇಶೀ ಶಿಕ್ಷಣ ಪದ್ಧತಿ ರೂಢಿಗೆ ಬಂದಿತಾದರೂ ಮೂಲ ದೇಶೀ ಪರಂಪರೆ ಅಳಿದಂತೆ ಕಾಣುವದಿಲ್ಲ. ಮೊದಲಿಗೆ ಬ್ರಾಹ್ಮಿ, ಬಳಿಕ ಖರೋಷ್ಟ್ರಿ, ನಂತರ ಗ್ರೀಕ ಹಾಗೂ ಕೊನೆಯದಾಗಿ ಪಾರಸೀ-ಅರಬ್ಬೀ ಭಾಷೆಗಳು ಆ ಆ ಭಾಷೆಯವರ ಪ್ರಭುತ್ವದಲ್ಲಿ ಬಳಕೆಗೆ ಬಂದ ಬಗ್ಗೆ ಪುರಾವೆಗಳಿವೆ. ಮುಸಲ್ಮಾನರ ಪ್ರಭುತ್ವದ ಕಾಲದಲ್ಲಿ ಭಾರತಕ್ಕೆ ಹೇಗೆ ಪಾರಸೀ ಪಂಡಿತರನ್ನು ಕರತರಲಾಯಿತೊ, ಈಗ ಇಂಗ್ಲಿಷ್ ಭಾಷೆಯನ್ನು ಕಲಿತು ಅದರಲ್ಲಿ ಗ್ರಂಥಗಳನ್ನು ಬರೆಯುವವರು ಹೇಗೆ ಭಾರತದಲ್ಲಿ ಹುಟ್ಟಿರುವರೋ ಹಾಗೆ ಆ ಕಾಲದಲ್ಲೂ ಸಂಭವಿಸಿರಬೇಕು. ಇದೂ ಅಲ್ಲದೆ ಈ ಬೇರೆ ಬೇರೆ ರಾಜರು ತಮ್ಮ ತಮ್ಮ ದೇಶದ ಶಿಲ್ಪ, ಸಂಸ್ಕೃತಿ, ಕಲೆ ಮುಂತಾದವುಗಳನ್ನೂ ಇಲ್ಲಿಗೆ ತಂದಿರಬೇಕು ಎಂಬುದು ಉತ್ಖನನದಲ್ಲಿ ದೊರೆತ ಮಾಹಿತಿಯಿಂದ ಸ್ಪಷ್ಟವಾಗುತ್ತದೆ. ಭಾರತೀಯ ಸಂಸ್ಕೃತಿಯು ಇವನ್ನೆಲ್ಲ ತನ್ನಲ್ಲಿ ಅಳವಡಿಸಿಕೊಂಡು ತನ್ನ ವೈಯಕ್ತಿಕ ಸತ್ವ ಪ್ರತಿಭೆಗಳನ್ನು ಕಾಯ್ದುಕೊಂಡಿತು.

ತಕ್ಷಶಿಲೆಯಲ್ಲಿಯ ಶಿಕ್ಷಣ ವ್ಯವಸ್ಥೆಗೂ ಇಂದಿನ ಶಾಲೆ-ಕಾಲೇಜು, ವಿಶ್ವವಿದ್ಯಾಲಯಗಳ ಶಿಕ್ಷಣ ರೀತಿಗೂ ಏನೇನೂ ಸಾಮ್ಯವಿರುವದಿಲ್ಲ. ಆಗ ಯಾವುದೊಂದು ಶಾಸ್ತ್ರದಲ್ಲಿ ಪಾರಂಗತನಾದ ಗುರುವು ತಾನು ಶಿಕ್ಷಣವಿತ್ತು ತಯಾರಿಸಿದ ಶಿಷ್ಯರೊಂದಿಗೆ ಶಿಕ್ಷಣ ಸಂಸ್ಥೆಗಳನ್ನು ನಡೆಸುತ್ತಿದ್ದನು. ಅಗತ್ಯವಿರುವಷ್ಟು ಮತ್ತು ಅರ್ಹತೆಯಿರುವ ವಿದ್ಯಾರ್ಥಿಗಳನ್ನು ಸಂಸ್ಥೆಗೆ ಸೇರಿಸಿಕೊಂಡು ವಿದ್ಯಾರ್ಥಿಯ ಇಚ್ಛೆಯಂತೆ ಮತ್ತು ಅವಶ್ಯಕತೆಯಂತೆ ಶಿಕ್ಷಣವನ್ನೀಯಲಾಗುತ್ತಿತ್ತು ತನ್ನ ಬುದ್ಧಿಯೋಗ್ಯತೆಗನುಸರಿಸಿ ವಿದ್ಯಾರ್ಜನೆಯನ್ನು ಮುಗಿಸಿಕೊಂಡು ಗುರುವಿನ ಆಶೀರ್ವಾದವನ್ನು ಪಡೆದು, ಸ್ನಾತಕನು ಸ್ವಗೃಹಕ್ಕೆ ಮರಳುತ್ತಿದ್ದನು. ಈಗಿನಂತೆ ಕೊನೆಯ ಪರೀಕ್ಷೆ ಮತ್ತು ಅದರಲ್ಲಿ ಉತ್ತೀರ್ಣನಾದ ಬಗ್ಗೆ ಪ್ರಮಾಣ ಪತ್ರವನ್ನು ಕೊಡುವ ಪರಿಪಾಠ ಆಗಿರಲಿಲ್ಲ.

ಆಗಿನ ಕಾಲಕ್ಕೆ ಉಪಯುಕ್ತವಾದ ವಿದ್ಯೆಗಳ ಅಧ್ಯಯನವು ಇಲ್ಲಿಯ ಬೇರೆ ಬೇರೆ ಗುರುಗೃಹಗಳಲ್ಲಿ ಸಾಗುತ್ತಿತ್ತು. ಬುದ್ಧನ "ಮಹಾಸುತ್ತ (ಸೂಕ್ತ) ಸೋಮ ಜಾತಕ"ದಲ್ಲಿ ತಕ್ಷಶಿಲೆಯ ಒಂದು ಆಶ್ರಮದಲ್ಲಿ ಧನುರ್ವಿದ್ಯೆಯನ್ನು ಕಲಿಯುವ ದೇಶ ದೇಶಗಳ ೧೦೩ ರಾಜಪುತ್ರರು ಬಂದಿದ್ದರೆಂಬ ಉಲ್ಲೇಖವಿದೆ. ಓರ್ವ ಶಿಕ್ಷಕನ ಬಳಿ ಸಾಮಾನ್ಯವಾಗಿ ೨೦ ಶಿಷ್ಯರು ಕಲಿಯಬಹುದಾಗಿತ್ತು. ಅಂದರೆ ಈ ಧನುರ್ವಿದ್ಯೆಯ ವಿದ್ಯಾಲಯದಲ್ಲಿ ಆಗ ಕಡಿಮೆಯೆಂದರೂ ಐದು ಜನ ಧನುರ್ವಿದ್ಯಾಪಾರಂಗತರಾದ ಬ್ರಾಹ್ಮಣರಿದ್ದಿರ

ಬೇಕು. ಇದರಿಂದ ಶಸ್ತ್ರವಿದ್ಯೆಯು ಕೇವಲ ಕ್ಷತ್ರಿಯರ ಸೊತ್ತಾಗಿರಲಿಲ್ಲವೆಂದು ಕಾಣಿಸುವದು. ಕಾಶಿ, ಧಾರಾ, ಉಜ್ಜಯಿನಿ, ಮಿಥಿಲಾ, ರಾಜಗೃಹ ಮುಂತಾದೆಡೆಗಳ ರಾಜರು ತಮ್ಮ ಪುತ್ರರನ್ನು ಅಧ್ಯಯನಕ್ಕಾಗಿ ತಕ್ಷಶಿಲೆಗೆ ಕಳಿಸಿದ್ದರೆಂಬುದು ಜಾತಕ ಗ್ರಂಥಗಳಿಂದ ತಿಳಿದು ಬರುತ್ತದೆ.

ಗೌತಮ ಬುದ್ಧನ ಸಮಕಾಲೀನನಾದ ಕೋಶಲ ದೇಶದ ಅರಸು ಪ್ರಸೇನಜಿತನು ತಕ್ಷಶಿಲೆಯ ಸ್ನಾತಕನಿದ್ದನು. ಬಿಂಬಿಸಾರನ ಮಗ ಜೀವಕನು ಏಳು ವರ್ಷಗಳ ಕಾಲ ತಕ್ಷಶಿಲೆಯಲ್ಲಿದ್ದು ಆಯುರ್ವೇದವನ್ನೂ ಶಲ್ಯತಂತ್ರ (ಶಸ್ತ್ರ ಚಿಕಿತ್ಸೆ) ವನ್ನೂ ಅಭ್ಯಾಸ ಮಾಡಿದ್ದನು. ಪ್ರಸಿದ್ಧ ವ್ಯಾಕರಣಾಚಾರ್ಯ ಪಾಣಿನಿಯು ಕೂಡ ತಕ್ಷಶಿಲೆಯಲ್ಲಿ ತರಬೇತಿ ಪಡೆದವನೇ ಆಗಿದ್ದಾನೆ. ತಕ್ಷಶಿಲೆಯಲ್ಲಿ ಪ್ರಾಮುಖ್ಯವಾಗಿ ವೇದವೇದಾಂಗ, ಶಿಲ್ಪ, ವೈದ್ಯಕ, ಶಲ್ಯ, ವಾಣಿಜ್ಯ, ಶಾಸ್ತ್ರ, ಜ್ಯೋತಿಷ್ಯ, ಕೃಷಿ, ಮಂತ್ರ, ದರ್ಶನ, ಕಾವ್ಯ, ಸಾಹಿತ್ಯ, ಸಂಗೀತಾದಿಗಳ ಅಧ್ಯಯನ ನಡೆಯುತ್ತಿತ್ತು.

ತಕ್ಷಶಿಲೆಗೆ ಕುಶಾನ ರಾಜನ ನಂತರ ಇಳಿಗಾಲ ಬಂದಿತು. ಯೂ ಚಿ ಯ ಪ್ರಭುತ್ವದಲ್ಲಿ ಅದು ಛಿನ್ನವಿಚ್ಛಿನ್ನವಾಗಿ ಹೂಣರ ಆಕ್ರಮಣದಿಂದ ಸಂಪೂರ್ಣವಾಗಿ ನಾಶವಾಯಿತು. ಕ್ರಿ. ಶ. ೫ ನೆಯ ಶತಮಾನದಲ್ಲಿ ಭಾರತದಲ್ಲಿ ಸಂಚರಿಸಿದ ಫಾಹಿಯಾನನ ಪ್ರವಾಸ ವರ್ಣನೆಯಲ್ಲಿ ತಕ್ಷಶಿಲೆಯ ಹೆಸರೂ ಬಂದಿಲ್ಲ. ೭ ನೆಯ ಶತಮಾನದಲ್ಲಿ ಭಾರತದಲ್ಲಿ ಸಂಚರಿಸಿದ ಹು-ಯೆನ್-ತ್ಸಂಗನಿಗೆ ತಕ್ಷಶಿಲೆಯ ಹೆಸರು ಅದರ ಪ್ರಾಚೀನ ಖ್ಯಾತಿಯ ಮೂಲಕ ಪರಿಚಿತವಾಗಿತ್ತು. ಆದರೆ ಆ ಕಾಲದಲ್ಲಿ ಅಲ್ಲಿ ಚಿಕ್ಕದೊಂದು ಊರಿನ ಸುತ್ತುಮುತ್ತ ಮೈಲುಗಟ್ಟಲೆ ಪ್ರದೇಶದಲ್ಲಿ ಹಳೆಯ ವೈಭವದ ಅವಶೇಷಗಳು ಮಾತ್ರ ಕಾಣಬರುತ್ತಿದ್ದವು. ಹು-ಯೆನ್-ತ್ಸಂಗ ಬಂದ ಕಾಲದಲ್ಲಿ ಪಂಡಿತರಾಗಿದ್ದ ಕೆಲವು ಬೌದ್ಧ ಭಿಕ್ಷುಗಳು ತಕ್ಷಶಿಲೆಯಲ್ಲಿ ವಾಸವಾಗಿದ್ದರು ಎಂದು ತಿಳಿಯುತ್ತದೆ.

ತಕ್ಷಶಿಲೆಯ ಒಂದು ಕಾಲದ ವೈಭವದ ಕಲ್ಪನೆ ಅಲ್ಲಿ ನಡೆದ ಉತ್ಖನನ-ಸಂಶೋಧನೆಗಳಿಂದ ಕಂಡುಬರುತ್ತದೆ. ಈ ನಗರದ ಜನವಸತಿ ಮೂರು ಬೇರೆ ಬೇರೆ ಸ್ಥಳಗಳಲ್ಲಿತ್ತು. ಬಿದ್ದು ಹೋಗಿರುವ ಬೌದ್ಧ ಮಠಗಳು, ಮಂದಿರಗಳು, ಅರಮನೆಗಳು, ಅಸಂಖ್ಯ ಶಾಲಾ ಗೃಹಗಳು ಇಂದು ಭೂಗರ್ಭದಿಂದ ಹೊರಗೆ ಬರುತ್ತಿವೆ. ಬೇರೆ ಬೇರೆ ಸಂಸ್ಥೆಗಳು, ಆಚಾರ್ಯರು, ಬೌದ್ಧ ಸಂಘಗಳೇ ಮೊದಲಾದವುಗಳ ನಿತ್ಯ ಯೋಗಕ್ಷೇಮಕ್ಕಾಗಿ ಕೊಟ್ಟಿದ್ದ ಅಗ್ರಹಾರಗಳ ದಾನಪತ್ರಗಳು, ಶಿಲಾಲೇಖಗಳು, ತಾಮ್ರಪಟಗಳು, ಸ್ತಂಭಗಳು, ನಾಣ್ಯಗಳ ಮೇಲಿನ ಪ್ರಶಸ್ತಿಗಳು, ಅಲಂಕಾರಗಳು ಮತ್ತು ಮೂರ್ತಿಗಳೇ ಮೊದಲಾದವುಗಳ ಸಹಾಯದಿಂದ ಆ ಕಾಲದ ಇತಿಹಾಸವು ಸಂಪೂರ್ಣವಾಗಿ ಬರೆಯಲ್ಪಟ್ಟಾಗ ತಕ್ಷಶಿಲೆಯ ವೈಭವದ ನಿಜ ಪರಿಚಯ ನಮಗಾದೀತು.

ಸುಖವು ಹಂಚಿದಷ್ಟೂ ಹಿಗ್ಗುತ್ತದೆ, ದುಃಖವು ಹಂಚಿದಷ್ಟೂ ಕುಗ್ಗುತ್ತದೆ.

— ವಿನೋಬಾ

# ನಗೆ - ಮಲ್ಲಿಗೆ

## ಪಸಂದ—ನಾಪಸಂದ

ಗಿರಾಕಿ ರೋಷದಿಂದ ಸರಾಫಿ ಅಂಗಡಿಯ ಮಾಲಿಕನ ಕಡೆ ಹೋಗಿ ಹೇಳಿದ. "ಏನು ಸಾವುಕಾರರೇ, ನಿಮ್ಮ ಅಂಗಡಿಯಿಂದ ನಿನ್ನೆ ನಾನು ಈ ಹಾರ ಕೊಂಡು ಒಯ್ದಿದ್ದೆ. ಮನಸಿಗೆ ಬರಲಿಲ್ಲ. ನಿಮ್ಮ ಮನುಷ್ಯ ಈಗ ಇದನ್ನು ತಿರುಗಿ ತೆಗೆದುಕೊಳ್ಳುವದಿಲ್ಲ ಅನ್ನುತ್ತಾನೆ.''

ಸರಾಫ: "ಅದು ಸಹಜ."

ಗಿರಾಕಿ: "ಹಾಗಂದರೇನ್ರೀ. ಹೊರಗೆ ಬೋರ್ಡು ಹಾಕಿದ್ದೀರಿ 'ಪಸಂದ ಬಾರದಿದ್ದರೆ ಹಣ ವಾಪಾಸ್' ಅಂತ. ಈಗ ಒಲ್ಲೆನೆಂದರೆ ಹೇಗೆ?''

ಸರಾಫ: "ಹೌದು. ಆದರೆ ಈಗ ನಿಮ್ಮ ಹಣ ನಮಗೆ ನಾಪಸಂದ ಆಗಿಲ್ಲವಲ್ಲ!''

—ಜ್ಞಾನೋದಯ

## ಭಗವಂತನ ಬುದ್ಧಿವಂತಿಕೆ

ಅವನಿಗೆ ಒಂದು ರೂಪಾಯಿಯ ಅಗತ್ಯ ಬಹಳವಾಗಿತ್ತು ಆ ದಿವಸ. ದಾರಿಯಲ್ಲಿ ಯೋಚಿಸುತ್ತ ಹೊರಟಿದ್ದ.

"ದಾರಿಯಲ್ಲಿ ಎಲ್ಲಾದರೂ ಒಂದು ರೂಪ್ಯಾ ಸಿಕ್ಕಿದ್ದರೆ ಎಂಟಾಣೆಯನ್ನು ಭಗವಂತನಿಗೆ ಅರ್ಪಿಸುತ್ತಿದ್ದೆ. ದೇವಾ, ಒಂದು ರೂಪಾಯಿ ಕೊಡಿಸು!''

ಅಕಸ್ಮಾತ್ತಾಗಿ ಅವನಿಗೆ ಬೀದಿಯಲ್ಲಿ ಒಂದು ನಾಣ್ಯ ಹೊಳೆಯುವುದು ಕಾಣಿಸಿತು. ನೋಡುತ್ತಾನೆ, ಎಂಟಾಣೆ.

ಅದನ್ನು ಎತ್ತಿಕೊಂಡು ನಸುನಕ್ಕು ಹೇಳಿದನಾತ: "ಅಬ್ಬಾ, ಈ ಕಲಿಯುಗದಲ್ಲಿ ಭಗವಂತನೂ ಎಷ್ಟು ಬುದ್ಧಿವಂತನಾಗಿಬಿಟ್ಟಿದ್ದಾನೆ! ಮಾರವಾಡಿಯಂತೆ ತನ್ನ ಪಾಲು ಮೊದಲೇ ಮುರಿದುಕೊಂಡು ಬಿಟ್ಟಿದ್ದಾನಲ್ಲ!''

—ಶಿವನಾಥ

## ಎಲ್ಲಿದ್ದರೂ ಅಷ್ಟೇ

ಗಂಗೊಳ್ಳಿ ಹೊಳೆಯ ಕಡವಿನಲ್ಲಿ ಒಬ್ಬ ಬಡ ಪ್ರಯಾಣಿಕ ನಿಂತಿದ್ದ. ಅವನು ಅಂಬಿಗನಿಗಂದ: "ನೋಡಪ್ಪಾ, ನನಗೆ ಹೊಳೆ ದಾಟಬೇಕಾಗಿದೆ. ಆದರೆ ನನ್ನ ಹತ್ತಿರ ಹಣ ಇಲ್ಲ.''

"ಏನೂ ಹಣವಿಲ್ಲವೆ?''

"ಇಲ್ಲ. ಒಂದಾಣೆಯೂ ಇಲ್ಲ.''

"ಆದರೆ ಹೊಳೆದಾಟಸಬೇಕಾದರೆ ನಾಲ್ಕಾಣೆ ಕೊಡಬೇಕಲ್ಲಾ.''

"ಗೊತ್ತಿದೆ. ಆದರೆ ಒಂದು ಕಾಸು ಕೂಡ ಇಲ್ಲವಲ್ಲಾ.''

ಅಂಬಿಗ ತುಸು ಗೊಂದಲದಲ್ಲಿ ಬಿದ್ದ. ಕೊನೆಗೆ ಅವನಿತ್ತ ತೀರ್ಪು ಇದು:

"ಕೈಯಲ್ಲಿ ನಾಲ್ಕಾಣೆ ಇಲ್ಲದ ಮನುಷ್ಯ ಆ ದಡದಲ್ಲಿದ್ದರೂ ಅಷ್ಟೆ, ಇಲ್ಲಿದ್ದರೂ ಅಷ್ಟೇ.''

## ಅಪರಾಧಿ ಯಾರು?

ಕಾರನ್ನು ನಡೆಸುತ್ತಿದ್ದ ಡ್ರೈವರ ಮೋಟಾರಿಗೆ ಹಚ್ಚಿದ್ದ ರೇಡಿಯೋವನ್ನು ಆಲಿಸುತ್ತ ತಾಸಿಗೆ ಮೂವತ್ತು ಮೈಲು ವೇಗದಿಂದ ಸಾಗಿದ್ದ. ರೇಡಿಯೋದಿಂದ ಒಮ್ಮೆಲೇ ವಾಣಿ ಬಂತು: "ಈಗ ನಿಮ್ಮ ಕಣ್ಣು ಮುಚ್ಚಿಕೊಳ್ಳಿರಿ. ಹೇಳಿರಿ, ಯಾವ ಬಣ್ಣ ಕಾಣಿಸುತ್ತದೆ?'

ಡ್ರೈವರನು ತಟ್ಟನೆ ಕಣ್ಣು ಮುಚ್ಚಿದ. ತನಗೆ ಕಾಣಿಸುವ ಬಣ್ಣ ಕಪ್ಪೋ ಕೆಂಪೋ ಎಂದು ಗುರುತಿಸುವ ಮೊದಲೇ ಅವನ ಮೋಟಾರು ಗಿಡಕ್ಕೆ ಬಡಿದು ಅವನಿಗೆ ಕಣ್ಣು ಕತ್ತಲು ಬಂತು.

ಪ್ರಜ್ಞೆ ಬಂದ ಮೇಲೀಗ ಅವನು ರೇಡಿಯೋದವರ ಮೇಲೆ ದಾವೆ ಹೂಡಿದ್ದಾನಂತೆ!

—ಸರಿತಾ

**ಇಲ್ಲಿ ಮಹಾಕ್ಷೇತ್ರಗಳಿವೆ, ಇಲ್ಲಿ ಮಹಾಪುರುಷರು ಹುಟ್ಟಿದ್ದಾರೆ, ಇದು ಭಾರತದ ಇತಿಹಾಸದ ಚಂಚಲ ತರಂಗಗಳ ಆಘಾತದ ಅನೇಕ ಗುರುತುಗಳನ್ನು ಒಳಗೊಂಡಿವೆ.**

# ಕೃಷ್ಣನಾಳಿದ ಸೌರಾಷ್ಟ್ರ

ಶ್ರೀಪಾದ ಜೋಶಿ

ಮರಾಠಿ 'ಕಿರ್ಲೋಸ್ಕರ'ದಿಂದ

ಭಾರತದಲ್ಲಿ ಪ್ರಸಿದ್ಧವಿರುವ ದ್ವಾದಶ ಜ್ಯೋತಿರ್ಲಿಂಗಗಳಲ್ಲಿ ಸೋಮನಾಥ ಲಿಂಗವೂ ಒಂದು. ಸೋಮನಾಥ ದೇವಾಲಯದ ಮೇಲೆ ಕ್ರಿ. ಶ. ೧೦೨೬ರಲ್ಲಿ ಗಝನಿಯ ಮಹಮ್ಮದನು ದಾಳಿ ಮಾಡಿ, ಮೂರ್ತಿಯನ್ನು ಭಂಗಿಸಿ, ಅಲ್ಲಿಯ ಸಂಪತ್ತನ್ನೆಲ್ಲ ಸೂರೆಮಾಡಿದ್ದು ಇತಿಹಾಸಪ್ರಸಿದ್ಧವಿದೆ. ಆತನ ನಂತರದಲ್ಲಿ ಉಲಗಖಾನ, ಬಹಾದ್ದೂರಶಾಹ ಮೊದಲಾದ ಮುಸ್ಲಿಂ ಆಕ್ರಮಣಗಾರರು ೧೨೯೭, ೧೩೧೮, ೧೩೯೫, ೧೫೧೧ ಮತ್ತು ೧೫೨೦ ರಲ್ಲಿ ಸೋಮನಾಥ ದೇವಾಲಯದ ಮೇಲೆ ದಾಳಿ ಮಾಡಿ ಅದನ್ನು ಸುಲಿದರು. ಮೊಗಲ ಬಾದಶಾಹ ಔರಂಗಜೇಬನಂತೂ ೧೭೦೬ರಲ್ಲಿ ಈ ದೇವಾಲಯವನ್ನು ಮಸೀದೆಯನ್ನಾಗಿ ಮಾರ್ಪಡಿಸಿದನು. ತೀರ ಇತ್ತೀಚಿನ ವರೆಗೂ ಸೋಮನಾಥ ಮಂದಿರವು ಮಸೀದೆಯಾಗಿಯೆ ಉಳಿದಿತ್ತು. ಭಾರತವು ಸ್ವತಂತ್ರವಾದ ನಂತರ ೧೯೫೦ರಲ್ಲಿ ವಲ್ಲಭಭಾಯಿ ಪಟೇಲರು ಈ ಮಂದಿರದ ಪುನರುದ್ಧಾರವನ್ನು ಪ್ರಾರಂಭಿಸಿದರು. ಅಲ್ಲೀಗ ಪ್ರಚಂಡವಾದ ಹೊಸ ಮಂದಿರ ಕಟ್ಟುವ ಕಾರ್ಯ ನಡೆದಿದೆ.

ಸುಪ್ರಸಿದ್ಧವಾದ ಸೋಮನಾಥ ದೇವಾಲಯವಿರುವದು ಸೌರಾಷ್ಟ್ರದಲ್ಲಿ. ಸೌರಾಷ್ಟ್ರವು ಅನೇಕ ಕಾರಣಗಳಿಗಾಗಿ ಭಾರತದಲ್ಲಿ ಮಹತ್ವದ ಸ್ಥಳವಾಗಿದೆ. ಭಾರತದಲ್ಲಿ ಮಾತ್ರವಲ್ಲ, ಇಡೀ



ಸೋಮನಾಥ ದೇವಾಲಯದ ಭಗ್ನಾವಶೇಷ

ಏಶಿಯ ಖಂಡದಲ್ಲೇ ಸಿಂಹಗಳ ವಸತಿಯಿರುವದು ಸೌರಾಷ್ಟ್ರದ ಜುನಾಗಡದ ಬಳಿಯಿರುವ ಗೀರ ಅಡವಿಯಲ್ಲಿ. ೫೭೬ ಚದುರ ಮೈಲು ವಿಸ್ತೀರ್ಣವಾದ ಈ ಅಡವಿಯಲ್ಲೀಗ ೨೫೩ ಸಿಂಹಗಳಿವೆ. ಸಿಂಹಗಳ ಸಂಖ್ಯೆ ಕಡಿಮೆಯಾಗುತ್ತ ನಡೆದುದನ್ನು ಕಂಡು ಭಾರತ ಸರಕಾರವು ಸಿಂಹಗಳ ಬೇಟೆಯಾಡುವದಕ್ಕೆ ಪ್ರತಿಬಂಧ ಹಾಕಿದೆ. ಇಲ್ಲವಾದಲ್ಲಿ, ಸೌರಾಷ್ಟ್ರದಿಂದ, ಭಾರತದಿಂದ, ಅಥವಾ ಏಶಿಯದಿಂದಲೇ ಅನ್ನಬಹುದು, ಸಿಂಹಕುಲದ ಉಚ್ಚಾಟನೆಯಾಗಿಬಿಡುತ್ತಿತ್ತು!

ಮತ್ತೆ, ಅಖಿಲ ಭಾರತೀಯ–ಅಷ್ಟೇ ಏಕೆ, ಜಾಗತಿಕ ಕೀರ್ತಿ ಗಳಿಸಿದ ಮಹಾಪುರುಷರನೇಕರು ಸೌರಾಷ್ಟ್ರದಲ್ಲಿಯೇ ಜನ್ಮ ತಾಳಿದ್ದಾರೆ. ರಾಷ್ಟ್ರಪಿತ ಮಹಾತ್ಮಾ ಗಾಂಧಿಯವರು ಸೌರಾಷ್ಟ್ರದ ಸುದಾಮಪುರಿ (ಪೋರಬಂದರ) ಯಲ್ಲಿ ಹುಟ್ಟಿದರು. ಆರ್ಯಸಮಾಜದ ಸಂಸ್ಥಾಪಕ ಸ್ವಾಮಿ ದಯಾನಂದ ಸರಸ್ವತಿಯವರು ಟಂಕಾರಾ ಎಂಬಲ್ಲಿ ಹುಟ್ಟಿದರು. ಹರಿಜನ ಮತ್ತು ಆದಿವಾಸಿ ಜನರ ಸೇವೆಗಾಗಿ ಜೀವನವನ್ನು ಮುಡಿಪಿಟ್ಟ ಶ್ರೀ ಠಕ್ಕರ ಬಾಪ್ಪಾ, ಶಿಕ್ಷಣ ಕ್ಷೇತ್ರದಲ್ಲಿ ಅಖಿಲ ಭಾರತೀಯ ಕೀರ್ತಿ ಸಂಪಾದಿಸಿದ ಪ್ರೊ. ನಾನಾಭಾಯಿ ಭಟ್ಟ, ಮುಂಬಯಿಯ ಹಿಂದಿನ ಅರ್ಥಮಂತ್ರಿ ಶ್ರೀ ವೈಕುಂಠಭಾಯಿ ಮೆಹತಾ, ಕಾಂಗ್ರೆಸ್ಸಿನ ಇಂದಿನ ಅಧ್ಯಕ್ಷ ಶ್ರೀ ಉಚ್ಛ್ರುಂಗರಾಯ ಢೇಬರ ಇವರೆಲ್ಲ ಸೌರಾಷ್ಟ್ರದವರೇ. ಒಂದಾಗಿದ್ದ ಭಾರತವು ಎರಡು ಹೋಳಾಗಿ ಪಾಕಿಸ್ತಾನವು ಜನಿಸಲು ಕಾರಣರಾದ ದಿ. ಮಹಮ್ಮದ ಅಲಿ ಜಿನ್ನಾ ಕೂಡ ಸೌರಾಷ್ಟ್ರದವರೇ. ಪೋರಬಂದರದ ಸಮೀಪವಿರುವ ಪಾನೇಲಿ ಎಂಬ ಊರಿನಲ್ಲಿ ಇವರು ಹುಟ್ಟಿದರು.

"ಸೌರಾಷ್ಟ್ರ" ಎಂಬ ಹೆಸರು ಅತ್ಯಂತ ಪ್ರಾಚೀನವಾದುದು. ರಾಮಾಯಣ, ಮಹಾಭಾರತಗಳಲ್ಲಿ ಸೌರಾಷ್ಟ್ರದ ಉಲ್ಲೇಖವಿದೆ. ಸೌರಾಷ್ಟ್ರವೆಂದರೆ ಒಳ್ಳೆಯ ದೇಶ ಎಂದರ್ಥವಾಗುವದರಿಂದ ಒಂದಾನೊಂದು ಕಾಲದಲ್ಲಿ ಈ ದೇಶ ಜನರಿಗೆ ಅತ್ಯಂತ ಪ್ರಿಯವಾಗಿದ್ದಿರಬೇಕು ಎನಿಸುತ್ತದೆ. ಆದರೆ ನಡುವಿನ ಕಾಲದಲ್ಲಿ ಈ ಹೆಸರೇ ಅಳಿಸಿದಂತಾಗಿತ್ತು. ಸೌರಾಷ್ಟ್ರದಲ್ಲಿಯ ೨೨೨ ಸಂಸ್ಥಾನಗಳ ವಿಲಯನವನ್ನು ಮಾಡಿ ೧೯೪೮ ರ ಫೆಬ್ರುವರಿ ೧೫ ರಂದು ಸರದಾರ ವಲ್ಲಭಭಾಯಿ ಪಟೇಲರು ಕಾಠೇವಾಡ ರಾಜ್ಯವನ್ನು ನಿರ್ಮಿಸಿದಾಗ ಅದಕ್ಕೆ ಮತ್ತೆ ಸೌರಾಷ್ಟ್ರವೆಂಬ ಹೆಸರು ಪ್ರಾಪ್ತವಾಯಿತು. ನಡುವಿನ ಅವಧಿಯಲ್ಲಿ ಅದಕ್ಕೆ ಸೂರಠ, ಸೋರಠ, ಕಾಠೇವಾಡ ಎಂಬ ಹೆಸರುಗಳು ಕಾಲಕಾಲಕ್ಕೆ ಬಂದಿದ್ದವು*.

ಸೌರಾಷ್ಟ್ರದ ವಿಸ್ತೀರ್ಣ ೨೧,೪೫೧ ಚದರು ಮೈಲು; ಜನಸಂಖ್ಯೆ ೪೧,೩೭,೩೫೯.

ದ್ವಾರಕಾಧೀಶ ಶ್ರೀಕೃಷ್ಣನ ಹೆಸರನ್ನು ಅರಿಯದವರು ನಮ್ಮಲ್ಲಿ ಇಲ್ಲವೇ ಇಲ್ಲವೆನ್ನಬಹುದು. ಸೌರಾಷ್ಟ್ರದ ಇತಿಹಾಸವು ಶ್ರೀಕೃಷ್ಣನು ದ್ವಾರಕೆಗೆ ಆಗಮಿಸಿದಂದಿನಿಂದಲೇ ಪ್ರಾರಂಭವಾಗುತ್ತದೆ.

ಜುನಾಗಡದ ಸಮೀಪ ಸಮ್ರಾಟ ಅಶೋಕ, ರುದ್ರದಾಮನ ಮತ್ತು ಸ್ಕಂದಗುಪ್ತರ ಶಿಲಾಲೇಖಗಳೂ ಇವೆ. ವಲ್ಲಭೀ ವಂಶದವರ ಆಳಿಕೆಯ ಕಾಲದಲ್ಲಿ ಸೌರಾಷ್ಟ್ರವು ಅಭ್ಯುದಯದ ಸ್ಥಿತಿಯಲ್ಲಿತ್ತು ಎಂಬುದನ್ನು ಚೀನೀ ಪ್ರವಾಸಿ ಹುಯನ್‌ತ್ಸಂಗನು ಬರೆದಿಟ್ಟಿದ್ದಾನೆ. ಕ್ರಿ. ಶ. ೭೬೫ ರಲ್ಲಿ

---

*** ಈಗ ಪುನಃ ಸೌರಾಷ್ಟ್ರವು ದ್ವಿಭಾಷಾ ಮುಂಬಯಿ ರಾಜ್ಯದಲ್ಲಿ ಲೀನವಾಗುವದು.**

ಸಿಂಧದ ಮುಸಲ್ಮಾನರು ವಲ್ಲಭೀ ರಾಜರನ್ನು ಸೋಲಿಸಿದರು. ಬಳಿಕ ಚಾವಡಾ, ಚೂಡಾಸಮಾ, ಝಾಲಾ, ಗೋಹೇಲ ಮೊದಲಾದ ರಜಪೂತ ವಂಶಜರು ಅಲ್ಲಿಗೆ ಬಂದು ತಂತಮ್ಮ ಚಿಕ್ಕ ಚಿಕ್ಕ ರಾಜ್ಯಗಳನ್ನು ಸ್ಥಾಪಿಸಿದರು. ೯ನೆಯ ಶತಮಾನ ದಲ್ಲಿ ಕಾಠಿ ಎಂಬ ಹೆಸರಿನ ಸಿಥಿಯನ್ ಜನರು ಪಂಜಾಬದಿಂದ ಇಲ್ಲಿಗೆ ಬಂದು ನೆಲೆಸಿದರು. ಅವ ರಿಂದ ಕಾಠೇವಾಡ ಎಂಬ ಹೆಸರು ಹುಟ್ಟಿರಬೇಕು.

ಮುಸಲ್ಮಾನರ ಸಾಮ್ರಾಜ್ಯಕ್ಕೆ ಇಳಿಗಾಲ ಬಂದಾಗ ೧೮ನೆಯ ಶತಮಾನದಲ್ಲಿ ಮರಾಠರು ಸೌರಾಷ್ಟ್ರವನ್ನು ವ್ಯಾಪಿಸಿದರು. ಇಂಗ್ಲೀಷರ ಆಗಮನ ಕಾಲದ ವರೆಗೆ (೧೮೨೦) ಸೌರಾಷ್ಟ್ರವು ಬಡೋದೆಯ ಗಾಯಕವಾಡರ ಅಧೀನದಲ್ಲಿತ್ತು. ಮುಂದೆ ೧೯೨೪ ರ ವರೆಗೆ ಸೌರಾಷ್ಟ್ರದ ಸಂಸ್ಥಾನ ಗಳು ಮುಂಬಯಿ ರಾಜ್ಯದ ಭಾಗಗಳಾಗಿದ್ದವು.

ಹಿಂದಿನ ಕಾಲದಲ್ಲಿ ಸೌರಾಷ್ಟ್ರವು ಭಾರತದ ಬಾಗಿಲಿನಂತಿತ್ತು. ಪರದೇಶದವರು ಇಲ್ಲಿಂದಲೆ ಭಾರತವನ್ನು ಪ್ರವೇಶಿಸುತ್ತಿದ್ದರು. ಸಿಥಿಯನ್, ಪಾರ್ಥಿಯನ್, ಹೂಣ, ಬಾಕ್ಟ್ರಿಯನ್, ಗ್ರೀಕ್, ರೋಮನ್, ಪರ್ಶಿಯನ್, ಅರಬ ಮತ್ತು ಪೋರ್ತುಗೀಜರೇ ಮುಂತಾಗಿ ನಾನಾ ದೇಶಗಳ ಜನರು ಈ ಪ್ರದೇಶದಲ್ಲಿ ಬಂದು ನೆಲೆಸಿದರು ಭಾರತದ ಇತರ ಭಾಗದಲ್ಲಿಯ ಮೌರ್ಯ, ಗುಪ್ತ, ಸೈಂಧವ, ಚಾಲುಕ್ಯ, ರಾಜಪೂತ, ಕಾಠಿ ಮುಂತಾದ ಜನರೂ ಇಲ್ಲಿ ಬಂದು ನೆಲೆಸಿದರು. ಈಗ ಇವರೆಲ್ಲ ಒಂದೇ ಎಂಬಂತೆ ಕಾಣುತ್ತಿರುವ ರಾದರೂ ಗೋಪಾಲನದ ವ್ಯವಸಾಯ ಮಾಡುವ ಪೋರಬಂದರದ ಸಮೀಪದ ಮೇರ, ಮೇಂದ ಪಾಲ ಜನರು, ಮೋರವಿಯ ಬಳಿ ಸಂಚಾರೀ ಜೀವನ ಸಾಗಿಸುವ ಮಿಯಾಣಾ ಜನರು, ದ್ವಾರ ಕೆಯ ಬಳಿಯ ಚಾರಣ, ಮಾಹಿಯ, ಮೊದಲಾ ದವರು ಇನ್ನೂ ತಂತಮ್ಮ ವೈಶಿಷ್ಟ್ಯವನ್ನು ಕಾಯ್ದುಕೊಂಡಿದ್ದಾರೆ. ಮೇರ ಮತ್ತು ಕಾಠಿ ಜನರು ಭವ್ಯ ಪುರುಷರಾಗಿದ್ದು ಶೌರ್ಯಕ್ಕಾಗಿ ಹೆಸರಾಗಿದ್ದಾರೆ. ಸೌರಾಷ್ಟ್ರದ ಸರ್ವಸಾಮಾನ್ಯ ಮನುಷ್ಯ ಗಟ್ಟಿಮುಟ್ಟಾದ ಆಳು, ಸರಳ ಮನಸ್ಸಿ ನವ, ಉತ್ಸವ ಪ್ರಿಯ. ಒಕ್ಕಲತನವನ್ನು ಪ್ರಾಮುಖ್ಯವಾಗಿ ಕಣಬಿ, ಮುಮನ (ಮುಸ ಲ್ಮಾನ), ಕಾಠಿ, ಗಿರಾಸದಾರ (ರಾಜಪೂತ) ಜಾತಿಯವರು ಮಾಡುತ್ತಾರೆ. ಅತಿಥಿಸತ್ಕಾರ ದಲ್ಲಿ ಇವರು ಪ್ರಸಿದ್ಧರು. ಸ್ತ್ರೀಯರಲ್ಲಿ ಘೋಷಾ ಪದ್ಧತಿ ಇಲ್ಲ.

ಸೌರಾಷ್ಟ್ರದಲ್ಲಿ ಅವಿಭಕ್ತ ಕುಟುಂಬ ಪದ್ಧತಿ ಯಿದೆ. ಅಲ್ಲಿ ಬ್ರಾಹ್ಮಣ-ಬ್ರಾಹ್ಮಣೇತರ ವಾದ ವಿಲ್ಲ. ಬ್ರಾಹ್ಮಣ ಮತ್ತು ಬ್ರಾಹ್ಮಣೇತರರಲ್ಲಿ ಇರುವ ಉಪಜಾತಿಗಳು ಪ್ರಬಲವಾಗಿವೆ. ಪ್ರತಿ




ಒಬ್ಬ ಮೇರ ತರುಣಿ

ಯೊಂದು ಉಪಜಾತಿಯೂ ತಾನು ಸ್ವತಂತ್ರ ಜಾತಿ, ತನಗೆ ಸ್ವತಂತ್ರ ಧರ್ಮವಿದೆ ಎಂದು ತಿಳಿದುಕೊಳ್ಳುತ್ತಿದೆ.

ಸ್ತ್ರೀಯರು ಉತ್ತಮ ಗೃಹಿಣಿಯರಾಗಿರು ತ್ತಾರೆ. ಸುಂದರ ಪೋಷಾಕು ಧರಿಸುವದು, ಆಭರಣಗಳಿಂದ ಅಲಂಕರಿಸಿಕೊಳ್ಳುವದು, ಪಕ್ವಾನ್ನಗಳಿಂದ ಮನೆಯವರನ್ನು ಸಂತುಷ್ಟ ಪಡಿಸುವದು—ಇವುಗಳಲ್ಲಿಯೆ ತನ್ನ ಜೀವನದ ಸಾರ್ಥಕತೆಯಿದೆ ಎಂದು ಗೃಹಿಣಿ ಎಣಿಸುತ್ತಾಳೆ. ಇದರಿಂದ ರಾಜಕೀಯ, ಸಾಮಾಜಿಕ, ಶೈಕ್ಷಣಿಕ ಮುಂತಾದ ಸಾರ್ವಜನಿಕ ಕ್ಷೇತ್ರಗಳಲ್ಲಿ ಪುರುಷರ

ಸರಿಸಮಾನವಾಗಿ ಕೆಲಸ ಮಾಡುವ ಸ್ತ್ರೀಯರು ಇಲ್ಲಿ ಕಾಣಸಿಗುವದಿಲ್ಲ. ಸಾಹಿತ್ಯರಂಗದಲ್ಲಿಯೂ ಸ್ತ್ರೀಯರು ಕೈ ಹಾಕಿಲ್ಲ.

ವರದಕ್ಷಿಣೆ ಪದ್ಧತಿಯ ಮೂಲಕ ಗಂಡಸರಿಗೆ ಅನೇಕ ಲಗ್ನ ಮಾಡಿಕೊಳ್ಳುವ ಚಾಪಲ್ಯ ಬಂದಿದೆ. ಈ ಪರಿಸ್ಥಿತಿಯಲ್ಲಿ ಜೀವನ ಅಸಹ್ಯವಾಗಿ ಆತ್ಮಹತ್ಯೆ ಮಾಡಿಕೊಳ್ಳುವ ಪ್ರವೃತ್ತಿ ಸ್ತ್ರೀಯರಲ್ಲಿ ವಿಶೇಷವಾಗಿದೆ. ಈ ವಿಷಯವಾಗಿ ವಿಚಾರಣೆ ನಡೆಸಲು ಸರಕಾರವು ಒಂದು ಸಮಿತಿಯನ್ನು ಕೂಡ ನೇಮಿಸಿದೆ. ಈ ಸಮಿತಿಯ ನೇಮಕವಾದ ಒಂದೇ ಒಂದು ತಿಂಗಳಲ್ಲಿ ಹತ್ತು ಜನ ಸ್ತ್ರೀಯರು ಆತ್ಮಹತ್ಯೆ ಮಾಡಿಕೊಂಡರು. ಆತ್ಮಹತ್ಯೆ ಮಾಡಿಕೊಳ್ಳುವವರ ಸಂಖ್ಯೆ ಅಶಿಕ್ಷಿತರಿಗಿಂತ ಸುಶಿಕ್ಷಿತ, ಸುಖವಸ್ತು ಸಮಾಜದವರಲ್ಲಿಯೇ ಹೆಚ್ಚಾಗಿರುತ್ತದೆ ಎಂಬುದು ಗಮನಿಸತಕ್ಕ ವಿಚಾರವಾಗಿದೆ.



ದ್ವಾರಕೆಯ ಶ್ರೀಕೃಷ್ಣಮಂದಿರ

ದೀಪಾವಳಿ, ಮಕರ ಸಂಕ್ರಾಂತಿ, ಹೋಳಿ, ರಾಮನವಮಿ, ಬಳೇವ (ಶ್ರಾವಣಿ) ರಕ್ಷಾಬಂಧನ, ಜನ್ಮಾಷ್ಟಮಿ, ದಸರಾ ಮುಂತಾದ ಅಖಿಲ ಭಾರತ ಹಬ್ಬಗಳನ್ನು ಇಲ್ಲಿಯೂ ಆಚರಿಸುತ್ತಾರೆ. ಇಲ್ಲಿ ನಮ್ಮಲ್ಲಿಯಂತೆ ಗಣೇಶಚೌತಿ ಹಬ್ಬವನ್ನಾಚರಿಸುವದಿಲ್ಲ. ಇಲ್ಲಿಯ ಗಣೇಶ ಚತುರ್ಥಿ ಭಾದ್ರಪದದಲ್ಲಿರದೆ ವೈಶಾಖ ಶುದ್ಧ ಚತುರ್ಥಿಯಂದು ಇರುತ್ತದೆ. ಅಂದು ಮಣ್ಣಿನ ಗಣಪತಿಯನ್ನು ಮಾಡಿ ಪೂಜಿಸುವದಿಲ್ಲ. ಬಾಗಿಲ ಮೇಲೆ 'ಶ್ರೀಗಣೇಶಾಯ ನಮಃ' ಎಂದು ಬರೆದು ಅದರ ಪೂಜೆಮಾಡಿ ಮೋದಕ ಮುಂತಾದವುಗಳ ನೈವೇದ್ಯ ಮಾಡಿ ತಿನ್ನುತ್ತಾರೆ. ನವರಾತ್ರಿಯನ್ನು ವಿಶೇಷ ವಿಜೃಂಭಣೆಯಿಂದಾಚರಿಸುತ್ತಾರೆ.

ಇತ್ತೀಚೆಗೆ ಇಲ್ಲಿ ಸ್ತ್ರೀಯರಲ್ಲಿ ಕುಂಕುಮ ಹಚ್ಚುವ ಪದ್ಧತಿ ಲೋಕಪ್ರಿಯವಾಗತೊಡಗಿದೆ. ಕೈಯೊಳಗಿನ ಬಳೆ ಮತ್ತು ಮೂಗಿನ ನತ್ತು—ಇವೇ ಇಲ್ಲಿಯ ಸ್ತ್ರೀಯರ ಸೌಭಾಗ್ಯದ ಚಿಹ್ನಗಳು. ಸೌರಾಷ್ಟ್ರದಲ್ಲಿ ಮಂಗಳಸೂತ್ರವು ಕಣ್ಣಿಗೆ ಬೀಳುವದಿಲ್ಲ. ಲಗ್ನಗಳು ಸಾಮಾನ್ಯವಾಗಿ ಭಾರತದ ಇತರ ಕಡೆಗಳಂತೆಯೇ ನಡೆಯುತ್ತವೆ. ಸಪ್ತಪದಿ ಮತ್ತು ಮಂಗಲಾಷ್ಟಕಗಳು ಅಪರಿಹಾರ್ಯ ವಿಧಿಗಳಾಗಿವೆ.

ಇಲ್ಲಿಯ ಸ್ತ್ರೀಯರಂತೆ ಪುರುಷರಿಗೂ ಎದ್ದು ಕಾಣುವ ಬಣ್ಣಗಳ ಮೇಲೆ ಪ್ರೀತಿ ಹೆಚ್ಚು. ಕೆಂಪು, ನೀಲಿ, ಹಸುರು ಬಣ್ಣಗಳ ಮೇಲೆ ಈ ಜನರಿಗೆ ಬಹಳ ಪ್ರೀತಿ.

ಸೌರಾಷ್ಟ್ರದಲ್ಲಿ ೫ ಜಿಲ್ಹೆಗಳಿವೆ. ಅಲ್ಲಿಯ ೧ ಕೋಟಿ ೨೮ ಲಕ್ಷ ಎಕರೆ ಭೂಮಿಯಲ್ಲಿ ೮೦ ಲಕ್ಷ ಎಕರೆ ಭೂಮಿ ಸಾಗುವಳಿಯಲ್ಲಿದೆ. ಒಂದು ಕಾಲದಲ್ಲಿ ಇಲ್ಲಿ ವಿಸ್ತಾರವಾದ ದಟ್ಟಡವಿಯಿದ್ದಿತು. ಈಗಿಲ್ಲ. ಇದರಿಂದ ಮಳೆಯ ಪ್ರಮಾಣ ತೀರ ಕಡಿಮೆಯಾಗಿದೆ. ಆಗಾಗ ಬರಗಾಲ ಬೀಳುತ್ತಿದೆ. ಸಾಗುವಳಿ ಭೂಮಿಯಲ್ಲಿ ಅರ್ಧದಷ್ಟು ಭೂಮಿಯಲ್ಲಿ ಅನ್ನಧಾನ್ಯ, ಅರ್ಧದಷ್ಟರಲ್ಲಿ ಹತ್ತಿ ಮತ್ತು ಎಣ್ಣೆಕಾಳು ಬೆಳೆಯುತ್ತದೆ. ಇಲ್ಲಿಯ ನದಿಗಳಿಗೆ ಒಡ್ಡು ಕಟ್ಟುವ ಕೆಲಸ ನಡೆದಿದ್ದು ಕೆಲವು ಒಡ್ಡುಗಳ ಕಾರ್ಯ ಮುಗಿದಿದೆ. ದ್ವಿತೀಯ ಪಂಚವಾರ್ಷಿಕ ಯೋಜನೆ ಮುಗಿದಾಗ ೨೨ ಕೋಟಿ ೬೫ ಲಕ್ಷ ರೂಪಾಯಿಗಳ ವೆಚ್ಚದಿಂದ ಕಟ್ಟಿದ ಅಣೆಕಟ್ಟಿನಿಂದ ೫॥ ಲಕ್ಷ ಎಕರೆ ಭೂಮಿ ತೋಟ

ವಾಗಿ ಪರಿಣಮಿಸುವದು. ಸೌರಾಷ್ಟ್ರದ ಆಕಳು ಮತ್ತು ಎಮ್ಮೆಗಳು ವಿಪುಲ ಹಾಲು ಕರೆಯುವಲ್ಲಿ ಪ್ರಸಿದ್ಧವಾಗಿವೆ. ಇಲ್ಲಿ ಸದ್ಯದಲ್ಲೆ ದೊಡ್ಡದೊಂದು ಹಾಲಿನ ಕಾರಖಾನೆ ಪ್ರಾರಂಭವಾಗಲಿದೆ. ಅಲ್ಲಿ ಹಾಲಿನ ಪುಡಿ ತಯಾರಿಸಲಾಗುವದು. ಏಶಿಯದಲ್ಲೆ ಇದು ದೊಡ್ಡ ಕಾರಖಾನೆಯಾಗಲಿದೆ.

ಸೌರಾಷ್ಟ್ರವು ಕೃಷಿಪ್ರಧಾನ ಪ್ರದೇಶ. ಚಿಕ್ಕ ಪುಟ್ಟ ಉದ್ಯೋಗ ಧಂದೆಗಳು ನಡೆಯುತ್ತವೆ. ಸೌರಾಷ್ಟ್ರಕ್ಕೆ ವಿಸ್ತಾರವಾದ ಸಮುದ್ರತೀರವಿದ್ದು ಅಲ್ಲಿ ಮೊದಲಿಂದಲೂ ಭಾವನಗರ, ಬೇಡಿ, ನವಲಖಿ, ವೇರಾವಳ ಮತ್ತು ಪೋರಬಂದರಗಳೆಂಬ ಒಳ್ಳೆಯ ಬಂದರಗಳಿವೆ. ಇಲ್ಲಿ ಈಗಿರುವ ಮಿಟರಗೇಜ ರೇಲ್ವೆ ಬ್ರಾಡ್‌ಗೇಜ ಆದಾಗ ಈ ಬಂದರಗಳ ವಿಕಾಸವಾಗುವದು. ಉತ್ತರ ಭಾರತಕ್ಕೆ ಮುಂಬಯಿಗಿಂತಲೂ ಈ ಬಂದರಗಳು ಸಮೀಪವಾಗುವದರಿಂದ ಈ ಮಾರ್ಗವೇ ಅವರಿಗೆ ಸುಲಭದ್ದೂ ಅಗ್ಗದ್ದೂ ಆಗುವದು. ಈ ಬಂದರಗಳ ಮೂಲಕ ಸೌರಾಷ್ಟ್ರದಲ್ಲಿ ಮೀನುಗಾರಿಕೆ ವ್ಯವಸಾಯ ಉತ್ತಮ ಸ್ಥಿತಿಯಲ್ಲಿದೆ. ಇಲ್ಲಿ ಸಮುದ್ರದಲ್ಲಿ ಮುತ್ತುಗಳೂ ದೊರೆಯುತ್ತವೆ.

ಸಿಮೆಂಟ, ಪಾಟರಿ, ಕಾಜು, ಕೆಮಿಕಲ್ಸ್ ಮೊದಲಾದ ಪದಾರ್ಥಗಳಿಗೆ ಬೇಕಾಗುವ ಕಚ್ಚಾ ಸರಕು ಸೌರಾಷ್ಟ್ರದಲ್ಲಿ ವಿಪುಲವಾಗಿರುವದರಿಂದ ಇಲ್ಲಿ ಮೊದಲಿಂದಲೂ ಅವುಗಳ ಅನೇಕ ಕಾರಖಾನೆಗಳಿವೆ. ಇಲ್ಲೀಗ ೬೨೭ ಕಾರಖಾನೆಗಳಿದ್ದು ಅವುಗಳಲ್ಲಿ ೪೮ ಸಾವಿರ ಜನ ದುಡಿಯುತ್ತಾರೆ. ಪೋರಬಂದರದಲ್ಲಿರುವ ಸಿಮೆಂಟ ಕಾರಖಾನೆ ಭಾರತದ ಸಿಮೆಂಟ ಕಾರಖಾನೆಗಳಲ್ಲಿ ಮೊದಲನೆಯದು. ಪ್ರತಿವರ್ಷ ಇಲ್ಲಿ ೪೨ ಸಾವಿರ ಟನ್ ಸಿಮೆಂಟ ತಯಾರಾಗುತ್ತದೆ. ಜಾಮನಗರ (ಸೀಕಾ) ದ ಸಿಮೆಂಟ ಕಾರಖಾನೆಯಲ್ಲಿ ೧ ಲಕ್ಷ ಟನ್ ಮತ್ತು ದ್ವಾರಕೆಯ ಸಿಮೆಂಟ ಕಾರಖಾನೆಯಲ್ಲಿ ೧ ಲಕ್ಷ ೪೦ ಸಾವಿರ ಟನ್ ಸಿಮೆಂಟ ಉತ್ಪಾದನೆಯಾಗುತ್ತದೆ. ಸೌರಾಷ್ಟ್ರದ ಸಮುದ್ರ ತೀರ ೭೦೦ ಮೈಲುದ್ದವಿದ್ದು ಇಲ್ಲಿ ಉಪ್ಪು ಬಹು ದೊಡ್ಡ ಪ್ರಮಾಣದಲ್ಲಿ ದೊರೆಯುತ್ತದೆ. ಹತ್ತಿ ವಿಪುಲವಾಗಿ ಬೆಳೆಯುತ್ತಿದ್ದರೂ ನೂಲಿನ ಗಿರಣಿಗಳು ಕೇವಲ ಒಂಬತ್ತೇ ಇವೆ. ಸೌರಾಷ್ಟ್ರದಲ್ಲಿ ಕಚ್ಚಾ ಸರಕು ವಿಪುಲವಾಗಿದ್ದರೂ ದೊಡ್ಡ ಕಾರಖಾನೆಗಳಿಲ್ಲದಿರುವದಕ್ಕೆ ಕಲ್ಲಿದ್ದಲಿ ಮತ್ತು ವಿದ್ಯುಚ್ಛಕ್ತಿಯ ಅಭಾವವೇ ಕಾರಣವಾಗಿದೆ.

ಸೌರಾಷ್ಟ್ರದಲ್ಲಿ ಪ್ರೇಕ್ಷಣೀಯ ಸ್ಥಳಗಳು ಬಹಳ ಇವೆ. ಪಾಲಿತಾಣಾದ ಬಳಿಯ ಶತ್ರುಂಜಯ ಗುಡ್ಡದ ಮೇಲಿಂದ ಮತ್ತು ಜುನಾಗಡದ ಬಳಿಯ ಗಿರನಾರ ಗುಡ್ಡದ ಮೇಲಿಂದ ಕಾಣುವ ಸೃಷ್ಟಿಸೌಂದರ್ಯ ಅಪ್ರತಿಮವಾದುದು. ಸೋಮನಾಥ ಮಂದಿರವಿರುವ ಪ್ರಭಾಸ ಪಟ್ಟಣದ ಸಮುದ್ರ ದಂಡೆಯ ಶೋಭೆ ಭಾರತದಲ್ಲಿ ಬೇರಾವ ಕಡೆಗೂ ಕಾಣಸಿಗುವದಿಲ್ಲ.



ಗಾಂಧೀ ಕೀರ್ತಿಮಂದಿರ

ದ್ವಾರಕೆಯಲ್ಲಿರುವ ಶ್ರೀಕೃಷ್ಣನ ದೇವಾಲಯ ಪ್ರಚಂಡವಾಗಿದೆ. ಅದರ ಶಿಖರ ೧೪೦ ಅಡಿ ಎತ್ತರವಾಗಿದೆ. ದೇವಾಲಯಕ್ಕೆ ಐದು ಮಾಳಿಗೆಗಳಿವೆ. ಆದ್ಯ ಶಂಕರಾಚಾರ್ಯರು ಸ್ಥಾಪಿಸಿದ ಮಠ ಇಲ್ಲಿಯೇ ಇದೆ. ಸೋಮನಾಥನ ಮಂದಿರ ವೇರಾವಳದಿಂದ ಮೂರು ಮೈಲು ದೂರ

ದಲ್ಲಿದೆ. ಇಲ್ಲಿರುವ ಸೂರ್ಯಮಂದಿರವೂ ನೋಡ ತಕ್ಕದ್ದಾಗಿದೆ.

೩,೬೭೨ ಅಡಿ ಎತ್ತರವಿರುವ ಗಿರನಾರ ಗುಡ್ಡ ವನ್ನು ಹತ್ತಲು ೪,೦೦೦ಕ್ಕಿಂತಲೂ ಹೆಚ್ಚು ಪಾವಟಿಗೆಗಳಿವೆ. ಈ ಪರ್ವತದ ಮೇಲೆ ಹಿಂದು ಮತ್ತು ಜೈನರ ಗುಡಿಗಳಿವೆ.

ಸುದಾಮಪುರಿ (ಪೋರಬಂದರ)ಯಲ್ಲಿ ಶ್ರೀ ಕೃಷ್ಣನ ಮಿತ್ರ ಸುದಾಮನ ಗುಡಿಯಿದೆ. ಮಹಾ-ತ್ಮಾ ಗಾಂಧಿಯವರು ಹುಟ್ಟಿದ್ದು ಈ ಊರಿನಲ್ಲಿ. ಅವರು ಹುಟ್ಟಿದ ಮನೆಯನ್ನು ಸರಕಾರವು ರಾಷ್ಟ್ರೀಯ ಸ್ಮಾರಕವೆಂದು ಕಾಯ್ದಿರಿಸಿದೆ. ಈ ಮನೆಯ ಮಗ್ಗುಲಲ್ಲಿ ಗಾಂಧೀಜಿಯವರ ವಯಸ್ಸಿನಷ್ಟು ಅಂದರೆ ೮೦ ಅಡಿ ಎತ್ತರದ ಒಂದು ಹೊಸ ಕಟ್ಟಡ ಕಟ್ಟಿದ್ದು ಅದರಲ್ಲಿ ಗಾಂಧೀಜಿಯವರ ಚಿತ್ರಗಳ ಪ್ರದರ್ಶನವಿದೆ. ಸೌರಾಷ್ಟ್ರದ ರಾಜಧಾನಿ ರಾಜಕೋಟ, ಸಾಂಸ್ಕೃತಿಕ ಕೇಂದ್ರ ಭಾವನಗರ, ಆಡಂಬರದ ಜಾಮನಗರ, ಹಳೆಯ ಕಾಲದ ಅವಶೇಷಗಳಿರುವ ಧುಮಲಿ, ವಲ್ಲಭಿಪುರ, ಜುನಾಗಡ ಮುಂತಾದ ಶಹರಗಳು ಪ್ರೇಕ್ಷಣೀಯವಾಗಿವೆ.

ಸೌರಾಷ್ಟ್ರದಲ್ಲೀಗ ಶಿಕ್ಷಣ ಪ್ರಸಾರ ಭರದಿಂದ ನಡೆದಿದ್ದು ೨,೪೮೬ ಪ್ರಾಥಮಿಕ ಶಾಲೆಗಳು, ೯೮ ಮಾಧ್ಯಮಿಕ ಶಾಲೆಗಳು, ೬ ಕಾಲೇಜುಗಳು, ೪ ಟ್ರೇನಿಂಗ ಕಾಲೇಜುಗಳು, ೧೦ ಸಂಸ್ಕೃತ ಪಾಠಶಾಲೆಗಳು, ೧೩ ಬಾಲಮಂದಿರಗಳು ಇವೆ. ೩ ಲಕ್ಷಕ್ಕಿಂತ ಹೆಚ್ಚಿಗೆ ವಿದ್ಯಾರ್ಥಿಗಳಿದ್ದಾರೆ.



## ಗೊತ್ತಿದ್ದರೆ ಹೇಳಿ !

ಬರ್ಲಿನ್ ನಗರದಲ್ಲಿರುವ ಪ್ರತಿಯೊಂದು ಬೆಕ್ಕಿಗೂ ಅದರ ಕುತ್ತಿಗೆಯಲ್ಲಿ ಅದರ ಲಾಯಸನ್ಸ್ ನಂಬರ ಇರುವ ಪಟ್ಟಿ ಇರಬೇಕು ಎಂಬ ನಿಯಮವಿದೆ.

ಬಹುಶಃ ಜಪಾನೀ ಮನುಷ್ಯ ತನ್ನ ತಂದೆಯ ಧಂದೆಯನ್ನೆ ಮುಂದುವರಿಸಿಕೊಂಡು ಹೋಗುತ್ತಾನೆ.

ಫಿನ್ ಮತ್ತು ನಾರ್ವೇಜಿಯನ್ ಜನರಲ್ಲಿ ಬಹಳಷ್ಟು ಸ್ತ್ರೀಯರು ಕ್ಷೌರಕೆಲಸ ಮಾಡುತ್ತಾರೆ.

ಸ್ವೀಡನ್ನಿನಲ್ಲಿ ಖಾಸಗಿ ಬ್ಯಾಂಕಿನ ಪಾಲುದಾರರು ಸ್ವೀಡಿಶ್ ಜನರೇ ಇರಬೇಕೆಂದು ಕಾಯದೆಯಿದೆ.

ಆಸ್ಟ್ರಿಯದಲ್ಲಿ ಪ್ರತಿಯೊಬ್ಬ ಪೋಲೀಸನಿಗೂ ಈಸಲು ಮತ್ತು ದೋಣಿ ನಡೆಸಲು ಬರಬೇಕು, ಅದರಂತೆ ತಂತಿಯಂತ್ರದ ಜ್ಞಾನವೂ ಇರಬೇಕು ಎಂದು ನಿಯಮವಿದೆ.

ಅಮೇರಿಕೆಯ ಶಿಕಾಗೊ ನಗರದ ೧೫೩ ಸ್ತ್ರೀಯರಲ್ಲಿ ಪ್ರತಿಯೊಬ್ಬರ ಬಳಿಯೂ ೩೦ ಲಕ್ಷ ರೂ. ಗಳ ಸಂಪತ್ತಿದೆ.

ಫ್ರಾನ್ಸಿನಲ್ಲಿಯ ಮ್ಯಾಡಂ ವೇಲಿ ಎಂಬಾಕೆಗೆ ಗಂಡಸರಂತೆ ಮೀಸೆ-ಗಡ್ಡಗಳಿವೆ. ಅವಳು ಅವನ್ನು ಬೋಳಿಸಿಕೊಳ್ಳುವದಿಲ್ಲ. ಹಾಗೆಯೆ ಬೆಳೆಸುತ್ತಿದ್ದಾಳೆ.

# ಜ್ಞಾನ-ವಿಜ್ಞಾನ ಕೋಶ

ಸಂಗ್ರಾಹಕರು: ರಾ. ನ. ಮುಳಗಿ

## ವಿಶ್ವದ ಪ್ರಮುಖ ಭಾಷೆಗಳು

ವಿಶ್ವದಲ್ಲಿ ಮಾತನಾಡುವ ಹಾಗೂ ಬರೆಯಲ್ಪಡುವ ಭಾಷೆಗಳು ೨,೭೯೬ ಎಂದು ಫ್ರೆಂಚ್ ಅಕ್ಯಾಡೆಮಿಯು ಲೆಕ್ಕ ಮಾಡಿದೆ. ಬರಿಯ ಮಾತನಾಡುವ, ಆದರೆ ಲಿಪಿಗಳಿಲ್ಲದ, ಭಾಷೆಗಳನ್ನು ಲೆಕ್ಕಕ್ಕೆ ತೆಗೆದುಕೊಂಡಿಲ್ಲ.

ಇಂಗ್ಲಿಷ್ ಭಾಷೆಯನ್ನು ೨೭ ಕೋಟಿ ಜನರು ಆಡುತ್ತಾರೆ. ಇವರಲ್ಲಿ ಅಮೇರಿಕೆಯ ಸಂಯುಕ್ತ ಸಂಸ್ಥಾನಗಳಲ್ಲಿ ೧೫ ಕೋಟಿ, ೬ ಲಕ್ಷ ಜನರೂ, ಲೈಬೇರಿಯಾದಲ್ಲಿ (ಪಶ್ಚಿಮ ಆಫ್ರಿಕೆಯಲ್ಲಿದೆ) ೧೦ ಲಕ್ಷ ಜನರೂ, ಗ್ರೇಟ ಬ್ರಿಟನ್ ಹಾಗೂ ಕಾಮನ್ವೆಲ್ತದಲ್ಲಿ ೧೧ ಕೋಟಿ, ೮೫ ಲಕ್ಷ ಜನರೂ ಇರುವರು.

೫೦ ಕೋಟಿ ಜನರು ಚೀನೀ ಹಾಗೂ ತಜ್ಜನ್ಯ ಭಾಷೆಗಳನ್ನು ಆಡುತ್ತಾರೆ.

ರಶಿಯನ್ ಭಾಷೆಯನ್ನು ೧೬ ಕೋಟಿ, ೬೦ ಲಕ್ಷ ಜನರಾಡುತ್ತಾರೆ.

ಸ್ಪ್ಯಾನಿಶ್ ಭಾಷೆಯನ್ನಾಡುವವರ ಸಂಖ್ಯೆಯು ೧೦ ಕೋಟಿ, ೩೦ ಲಕ್ಷ.

ಆಫ್ರಿಕೆಯ ಗುಂಪಿನ ಭಾಷೆಗಳನ್ನು ೯ ಕೋಟಿ, ೩೦ ಲಕ್ಷ ಜನರಾಡುತ್ತಾರೆ.

ನಂತರ ಇವು ಬರುತ್ತವೆ:

| | | | | |
|---|---|---|---|---|
| ಜಪಾನಿ | ೯ | ಕೋಟಿ, | ೭೦ | ಲಕ್ಷ |
| ಜರ್ಮನ್ | ೭ | ,, | ೮೦ | ,, |
| ಫ್ರೆಂಚ್ | ೬ | ,, | ೮೦ | ,, |
| ಪೋರ್ತುಗೀಜ | ೪ | ,, | ೯೦ | ,, |
| ಇಟಾಲಿಯನ್ | ೪ | ,, | ೪೦ | ,, |
| ಜಾವಾನೀಸ | ೪ | ,, | ೨೦ | ,, |
| ಪೋಲಿಶ್ | ೩ | ,, | ೨೦ | ,, |
| ಅರೇಬಿಕ್ | ೨ | ,, | ೯೦ | ,, |

ಭಾರತದ ರಾಜ್ಯಘಟನೆಯಲ್ಲಿ ಮಾನ್ಯ ಮಾಡಲ್ಪಟ್ಟ ೧೪ ಭಾರತೀಯ ಭಾಷೆಗಳನ್ನಾಡುವವರ ಸಂಖ್ಯೆಯು ೩೨,೩೯,೭೨,೬೦೭. ಆಯಾ ಭಾಷೆಗಳನ್ನಾಡುವವರ ಸಂಖ್ಯೆಯು ಇಂತಿದೆ:

| | | |
|---|---|---|
| ೧. | ಹಿಂದಿ, ಉರ್ದು ಮತ್ತು ಹಿಂದುಸ್ತಾನಿ | ೧೪,೯೩,೭೪,೪೧೩ |
| ೨. | ತೆಲುಗು | ೩,೨೯,೯೯,೯೧೬ |
| ೩. | ಮರಾಠಿ | ೨,೭೦,೪೯,೫೨೨ |
| ೪. | ತಮಿಳು | ೨,೬೫,೪೬,೭೬೪ |
| ೫. | ಬಂಗಾಲಿ | ೨,೫೧,೨೧,೬೭೪ |
| ೬. | ಗುಜರಾತಿ | ೧,೬೩,೧೦,೭೭೧ |
| ೭. | ಕನ್ನಡ | ೧,೪೪,೭೧,೭೬೪ |
| ೮. | ಮಲೆಯಾಳಿ | ೧,೩೩,೮೦,೧೦೯ |
| ೯. | ಉಡಿಯಾ | ೧,೩೧,೫೩,೯೦೯ |
| ೧೦. | ಅಸ್ಸಾಮಿ | ೪೯,೮೮,೨೨೬ |
| ೧೧. | ಪಂಜಾಬಿ | ೫,೬೯,೮೯೮ |
| ೧೨. | ಸಂಸ್ಕೃತ | ೫೫೫ |

ವಿಶ್ವಕ್ಕೊಂದು ಭಾಷೆಯಿರಬೇಕೆಂಬ

ಪ್ರಯತ್ನವು ಕಳೆದ ಶತಮಾನದ ಕೊನೆಯಿಂದಲೂ ನಡೆದಿದೆ. ಅತ್ಯಂತ ಸುಲಭವಾದ ಹಾಗೂ ಎಲ್ಲರಿಗೂ ಬೇಗನೆ ಬರುವ ಭಾಷೆಗಳನ್ನು ಕೆಲವರು ಶೋಧಿಸಿದ್ದಾರೆ. ಇವುಗಳಲ್ಲಿ "ವೋಲಾಪಕ್" ಮತ್ತು "ಎಸ್ಪ-ರ್‍ಯಾಂಟೋ" ಎಂಬುವು ಮುಖ್ಯವಾದವು. ಈ ದಿಸೆಯಲ್ಲಿ ಇನ್ನೂ ಪ್ರಯತ್ನವು ನಡೆದಿದೆ.

*

## ಸಾಗರವು ಮಾನವನ ಉಗ್ರಾಣ

ಸಾಗರವು ಇಡೀ ಮಾನವಕೋಟಿಗೆ ಸೇರಿದೆ. ನೆಲವು ಮಾತ್ರ ಅನೇಕ ರಾಷ್ಟ್ರಗಳಲ್ಲಿ ಹರಿದು ಹಂಚಿ ಹೋಗಿದೆ. ತೀರದ ಸಮೀಪದಲ್ಲಿಯ ಕೆಲವೇ ಮೈಲು ನೀರಿನ ಮೇಲೆ ಸ್ಥಳೀಯ ಸರಕಾರಗಳು ಅಧಿಕಾರ ನಡೆಸುತ್ತಿವೆ. ಒಟ್ಟು ಜಲಪ್ರದೇಶದ ಮುಂದೆ ಇದು ಏನೂ ಅಲ್ಲ, ಧೂಳೀಕಣ. ೧೩ ಕೋಟಿ ೯೦ ಲಕ್ಷ ಚದುರು ಮೈಲುಗಳಷ್ಟು, ಎಂದರೆ ಒಟ್ಟು ನೆಲದ ಸುಮಾರು ೨॥ ಪಟ್ಟು, ಸಾಗರ ಪ್ರದೇಶವು ಹಬ್ಬಿದೆ. ಸಾಗರದ ಒಟ್ಟು ಗಾತ್ರ ೩೨ ಕೋಟಿ ೪೦ ಲಕ್ಷ ಘನ ಮೈಲುಗಳು.

ಆಹಾರದ ಹಾಗೂ ಖನಿಜಗಳ ಈ ಮಹಾ ಉಗ್ರಾಣದ ಉಪಯೋಗದ ಯೋಗ್ಯ ಪ್ರಾರಂಭವು ಇನ್ನೂ ಆಗಿಯೇ ಇಲ್ಲ. ವಿಶ್ವಕ್ಕೆ ಹತ್ತುವ ಒಟ್ಟು ಆಹಾರದಲ್ಲಿ ೧% ಮಾತ್ರವನ್ನು ಜನರು ವರುಣನ ರಾಜ್ಯದಿಂದ ಪಡೆಯುತ್ತಿದ್ದಾರೆ.

ಪ್ರತಿಯೊಂದು ಟನ್ನು ಸಮುದ್ರದ ನೀರಿನಲ್ಲಿಯೂ ಮುಕ್ಕಾಲು ಗ್ರೇನ್ ಚಿನ್ನವಿದೆ. ಎಲ್ಲ ಸಮುದ್ರ ಸಾಗರಗಳ ನೀರಿನಲ್ಲಿಯ ಚಿನ್ನವನ್ನು ದೊರಕಿಸಿದರೆ ನಮ್ಮಲ್ಲಿಯ ಪ್ರತಿಯೊಬ್ಬರಿಗೂ ಸರಾಸರಿ ೭೭,೦೦೦ ಪೌಂಡು ಸುವರ್ಣವು ಸಿಗುವುದು. ದುರ್ದೈವದ ಸಂಗತಿಯೇನೆಂದರೆ ಇದನ್ನು ದೊರಕಿಸುವ ವೆಚ್ಚವು ಬಂಗಾರದ ಬೆಲೆಗಿಂತ ಹೆಚ್ಚಾಗುವದು. ಚಿನ್ನವನ್ನುಳಿದರೆ ಲಾಭದಾಯಕವಾದ ಇತರ ಲೋಹಗಳೂ ಅಲ್ಲಿವೆ.

ಪ್ರತಿಯೊಂದು ಘನಮೈಲು ಸಮುದ್ರದ ನೀರಿನಲ್ಲಿ ೨೨೫ ಟನ್ ಫಾಸ್ಪರಸ್, ೭೫೦ ಟನ್ ನೈಟ್ರೋಜನ್ ಹಾಗೂ ೨೦ ಲಕ್ಷ ಟನ್ ಪೋಟ್ಯಾಸಿಯಂ ದೊರೆಯುತ್ತವೆ. ಇವು ಮೂರೂ ಉತ್ತಮ ಗೊಬ್ಬರಗಳು.

ವಿಜ್ಞಾನಿಗಳು ಸಮುದ್ರದ ಪ್ರತಿಯೊಂದು ಚದುರ ಮೈಲಿಯಲ್ಲಿ ೧೩ ಸಾವಿರ ಟನ್ ಸಸ್ಯವರ್ಗವು ಪ್ರತಿವರ್ಷ ಜನಿಸುವುದೆಂದು ಲೆಕ್ಕ ಮಾಡಿದ್ದಾರೆ. ಇದು ಭೂಮಿಯ ಮೇಲಿನ ಬೆಳೆಯ ಸುಮಾರು [illegible] ಪಟ್ಟಾಗುತ್ತದೆ. ಸಂಯುಕ್ತರಾಷ್ಟ್ರ ಸಂಘವು ಸಾಗರದ ಉಪಯೋಗದ ಕಾರ್ಯವನ್ನು ಕೈಕೊಂಡಿದೆ.

ಒಂದು ಘನಮೈಲು ಸಮುದ್ರದ ನೀರಿನಲ್ಲಿ ಸುಮಾರು ೪ ಲಕ್ಷ ಟನ್ ಮಾಗ್ನೀಸಿಯಂ ಲೋಹವಿದೆ. ೧೯೪೧ ರಲ್ಲಿ ಇದನ್ನು ರಾಸಾಯನಿಕವಾಗಿ ಬೇರ್ಪಡಿಸಲಾಯಿತು. ಇದರ ಫಲವಾಗಿ ಕಳೆದ ಯುದ್ಧದಲ್ಲಿ ವಿಮಾನಗಳ ಸಂಖ್ಯೆಯನ್ನು ಬೆಳೆಸಲು ಸಾಧ್ಯವಾಯಿತು. ಒಂದು ವಿಮಾನಕ್ಕೆ ಸಾಧಾರಣವಾಗಿ ಅರ್ಧ ಟನ್ ಮಾಗ್ನೀಸಿಯಂ ಬೇಕಾಗುವುದರಿಂದ, ಈ ಲೋಹವು ಸಮುದ್ರದಿಂದ ದೊರೆತುದು ತುಂಬ ಸಹಾಯವಾಯಿತು.

*

## ಮಾನವ ದೇಹದ ವೈಚಿತ್ರ್ಯ

೧೪೦ ಪೌಂಡು ತೂಕವಿರುವ ಒಬ್ಬನ ದೇಹವನ್ನು ರಾಸಾಯನಿಕವಾಗಿ ವಿಭಜಿಸಿದರೆ ಏನು ದೊರೆಯುತ್ತದೆ?

೨,೨೦೦ ಬೆಂಕಿಪೆಟ್ಟಿಗೆ ಕಡ್ಡಿಗಳ ತುದಿಗಿರುವಷ್ಟು ಫಾಸ್ಫರಸ್; ಸಬಕಾರದ ೭ ದೊಡ್ಡ ವಡೆಗಳಿಗಾಗುವಷ್ಟು ಕೊಬ್ಬು; ೧೦ ಗ್ಯಾಲನ್ (೨॥ ಚಿಮಣಿ ಎಣ್ಣೆ ಡಬ್ಬಿಗಳು) ಪಿಪಾಯಿಯು ತುಂಬುವಷ್ಟು ನೀರು; ೨ ಇಂಚು ಉದ್ದ

ಮೊಳೆಗಾಗುವಷ್ಟು ಕಬ್ಬಿಣ; ೧ ಸಣ್ಣ ಡಬ್ಬಿಯು ತುಂಬುವಷ್ಟು ಗಂಧಕದ ಗುಳಿಗೆಗಳು. ಈ ವಸ್ತುಗಳ ಪೇಟೆಯ ಬೆಲೆಯೆಷ್ಟು? ಬಹಳ ಕಡಿಮೆ.

ಈ ಮುಖ್ಯ ವಸ್ತುಗಳಲ್ಲದೆ ಅತ್ಯಲ್ಪ ಪ್ರಮಾಣದ ಸಾದಾಪ್ರತಿಯ ಕೆಲವು ರಾಸಾಯನಿಕ ವಸ್ತುಗಳೂ ಉಪ್ಪೂ ಮಾನವದೇಹದಲ್ಲಿವೆ.

ಇಂತಹ ಬೆಲೆಬಾಳದ ವಸ್ತುಗಳಿಂದ ಬೆಲೆ ಕಟ್ಟಲಾಗದ ದೇಹವು ನಿರ್ಮಿತವಾಗಿದೆ. ಆದ್ದರಿಂದಲೇ ಇದನ್ನು ಅತ್ಯಂತ ಆಶ್ಚರ್ಯಕರವಾದ ವಿಚಿತ್ರ ಯಂತ್ರವೆಂದು ಕರೆಯಲಾಗುತ್ತದೆ.

ಇದು ಸವೆದುಹೋಗಿ ಏನಿಲ್ಲದಂತಾಗುವ ಯಂತ್ರವಲ್ಲ. ತನ್ನನ್ನು ತಾನೇ ಸರಿಪಡಿಸಿ ಕೊಳ್ಳಬಲ್ಲ ಯಂತ್ರವಿದು. ವಿನಾಶಕಾರಿಯಾದ ಕ್ರಿಮಿಗಳನ್ನು ಇದು ತಾನಾಗಿಯೇ ನಾಶಪಡಿಸಬಲ್ಲದು.

ಇದು ಸುಸ್ಥಿತಿಯಲ್ಲಿ ಇರಬಲ್ಲ ಬರಿಯ ಯಂತ್ರವಲ್ಲ. ಕ್ರಮಕ್ರಮವಾಗಿ ಬೆಳೆದು ದೊಡ್ಡದಾಗಬಲ್ಲ ಯಂತ್ರ. ದೇಹವು ಬೆಳೆಯುವಂತೆ ಇದರ ಬುದ್ಧಿಶಕ್ತಿಯೂ ಬೆಳೆಯುತ್ತ ಹೋಗುತ್ತದೆ. ಎರಡನೆಯದಕ್ಕೆ ಮಾತ್ರ ಮಿತಿಯಿಲ್ಲ. ಮೊದಲನೆಯದಕ್ಕೆ ಮಿತಿಯಿರುವುದು.

ಇದು ಬರಿಯ ಬೆಳೆಯುವ ಯಂತ್ರವಲ್ಲ. ಮಕ್ಕಳೆಂಬ ತನ್ನಂತಹ ಇತರ ಯಂತ್ರಗಳನ್ನು ಸಹ ಇದು ತಯಾರಿಸಬಲ್ಲುದು.

*

## ಹಾರಾಡುವ ತಟ್ಟೆಗಳು

ವಾಯುಮಂಡಲದಲ್ಲಿ ಪ್ರಕಾಶಮಾನವಾಗಿ ಹಾರಾಡುವ ತಟ್ಟೆಗಳು ಕಳೆದ ಹತ್ತು ವರ್ಷಗಳಿಂದ ಅಪರೂಪವಾಗಿ ಕಾಣಬರುತ್ತಿವೆ. ಇವನ್ನು "ಫ್ಲಾಯಿಂಗ್ ಸಾಸರ್ಸ್" ಎಂದು ಕರೆಯುತ್ತಾರೆ. ಕೆಲವು ವರ್ಷಗಳ ಹಿಂದೆ, ಮುಖ್ಯವಾಗಿ ಅಮೇರಿಕೆಯಲ್ಲಿ, ಇವುಗಳ ಬಗ್ಗೆ ಊಹಾಪೋಹಗಳು ವಿಶೇಷವಾಗಿ ಸಾಗಿದ್ದವು. ಸಾಮಾನ್ಯ ಜನತೆಯ ಕುತೂಹಲವು ಇದರಿಂದ ಮೇರೆ ತಪ್ಪಿತು. ವಿಜ್ಞಾನಿಗಳನೇಕರು ಇದರ ಬಗ್ಗೆ. ವಿಶೇಷ ಪರಿಶ್ರಮವನ್ನು ವಹಿಸಿ, ಸತ್ಯಸಂಗತಿಯನ್ನು ಕಂಡುಹಿಡಿಯಲು ಹೆಣಗಿದರು. ಅವರ ನಿಶ್ಚಿತ ಅಭಿಪ್ರಾಯವು ಹೋದ ವರ್ಷ ಹೊರಬಿದ್ದಿತು. ಇದರ ಫಲವಾಗಿ ವೇಗದಿಂದ ಸಾಗುವ ಅತ್ಯಂತ ಪ್ರಕಾಶಮಾನವಾದ ಈ ತಟ್ಟೆಗಳಿಗೆ ಸತ್ಯಸೃಷ್ಟಿಯಲ್ಲಿ ಸ್ಥಾನವಿಲ್ಲವೆಂಬ ಅಂಶವು ಹೊರಬಿದ್ದಿತು. ವಿಶ್ವ-ಕಿರಣಗಳ ವಿಶೇಷತರದ ಪರಿಣಾಮವಾಗಿಯೂ ವಾಯುಮಂಡಲದಲ್ಲಿಯ ವಿಶೇಷ ಬಗೆಯ ಕ್ಷಣಿಕ ಮಾರ್ಪಾಟುಗಳ ಪರಿಣಾಮವಾಗಿಯೂ ಈ ತಟ್ಟೆಗಳು ಗೋಚರಿಸುತ್ತವೆ. ಈ ಮೊದಲು ಇವೇಕೆ ಕಾಣಬರಲಿಲ್ಲವೆಂಬುದರ ಕಾರಣ ವಿನ್ನೂ ತಿಳಿದುಬಂದಿಲ್ಲ. ಈ ಬಗ್ಗೆ ಹಾರ್ವರ್ಡ್ದಲ್ಲಿ ಜ್ಯೋತಿರ್ಭೌತಶಾಸ್ತ್ರದ ಪ್ರಾಧ್ಯಾಪಕರಾದ ಡಾ॥ ಮೆನ್‌ಝೆಲ್ಲರು ನುಡಿಯುತ್ತಾ 'ಇವುಗಳ ಅಸ್ತಿತ್ವವು "ಕಾಮನಬಿಲ್ಲಿನ ಅಸ್ತಿತ್ವದಷ್ಟೇ ಸತ್ಯವಾದುದು" ಎಂದು ಸಾರಿದ್ದಾರೆ.

---

ಓದಿನಿಂದ ಮನುಷ್ಯ ಪರಿಪೂರ್ಣನಾಗುತ್ತಾನೆ, ಚರ್ಚೆಯಿಂದ ಪ್ರತ್ಯುತ್ಪನ್ನಮತಿಯಾಗುತ್ತಾನೆ ಮತ್ತು ಬರಹದಿಂದ ಸ್ಫುಟವಿಚಾರದವನಾಗುತ್ತಾನೆ.

—ಬೇಕನ್.



# ನಾನು ಓದಿ ಮೆಚ್ಚಿದ್ದು

ದ. ರಾ. ಬೇಂದ್ರೆಯವರ " ನಿರಾಭರಣ ಸುಂದರಿ "

. . . ಪದ್ಮನ ಚಿತ್ತಲೋಕದಲ್ಲಿ ಕಾಲನ ಹೆಜ್ಜೆಗುರುತು ಇರಲೇ ಇಲ್ಲ. ಅವನು ಬಣ್ಣ-ಕುಂಚಗಳನ್ನು ಉಪಯೋಗಿಸುತ್ತಿದ್ದುದು ನಿದ್ದೆಹೋದವನು ಉಸಿರಾಡಿಸಿದಂತೆ, ಪ್ರಕೃತಿಗತ ಕರ್ವರ್ವೆಂದು ; ಅವನ ರೂಪವಿಮರ್ಶೆಯು ನಾಡಿಸ್ಪಂದನದಂತೆ ; ಅವನ ತೃಪ್ತಿಯು ಆರೋಗ್ಯವಂತನ ರುಧಿರಾಭಿಸರಣದಂತೆ ; ಅವನು ತೀಡುವದು, ತಿದ್ದುವದು ಪಚನಕ್ರಿಯೆಯಂತೆ ; ಅವನು ಚಿತ್ರವನ್ನು ಕಾಣುತ್ತಿದ್ದುದು ಚಂದ್ರಸೂರ್ಯರ ಬೆಳಕಿನಲ್ಲಲ್ಲ, ಚಿತ್ತದ ಆಕಾಶದಲ್ಲಿ, ಬುದ್ಧಿಯ ಪ್ರಕಾಶದಲ್ಲಿ. ಸ್ಫಟಕವು ತಾನು ತಾನೇ ನುಣುಪುಗೊಳ್ಳುತ್ತ ಮುಂದಿದ್ದ ಒಡವೆಯನ್ನು ಮೂಡಿಸಿ ತೋರಿಸಬೇಕೆಂದು ಹವಣಿಸುತ್ತಿರುವಂತೆ ಅವನ ಕರ್ಮ-ಕೌಶಲ್ಯವೆಲ್ಲವೂ ರೂಪನಿಷ್ಪತ್ತಿಯಲ್ಲಿ ತಲ್ಲೀನವಾಗಿತ್ತು. ಇರುಳ-ಮುಸುಕು ಮುಗಿಲನ್ನೆಯಿಂದ ಜಾರುತ್ತಿತ್ತು. ಅವನಿಗೆ ಅದರ ಅರಿವಿರಲಿಲ್ಲ. ಹಿಂದೆ ತಪ್ಪಿಯಾದರೂ ಅವನು ಹೊರಳಿದರೆ ಮಾತನಾಡಿಸಬೇಕೆಂದು ಅವಳು ಕಾದಿದ್ದಳು. ಅವನಿಗೆ ಅವಳ ಅರಿವಿರಲಿಲ್ಲ. ಚಿತ್ರವು ಚಿತ್ರಿಕನನ್ನೇ ನುಂಗಿದಂತಿತ್ತು. ಅವನಿಗೆ ತನ್ನರಿವೂ ಇರಲಿಲ್ಲ."

ಆಯ್ದವರು : ಪಿ. ಡಿ. ಕುಲಕರ್ಣಿ

ಶಿವರಾಮ ಕಾರಂತರ " ಮರಳಿಮಣ್ಣಿಗೆ "

ಹಾಗೆಯೇ ನಗುತ್ತ ರಾಮು ಪಿಟೀಲನ್ನು ಎತ್ತಿಹಿಡಿದು ಕಮಾನನ್ನು ಒಂದೆರಡು ಬಾರಿ ತಂತಿಗಳ ಮೇಲೆ ಎಳೆದನು, ಕೈಸೆಳೆದನು, ಎಳೆದನು ; ತಿಕ್ಕಿದನು, ತೀಡಿದನು. ಆ ಕೈ-ನೋಟವೇ ಕಾಣುವಂಥದಿತ್ತು. . . . . . .

ಕ್ರಮೇಣ ಸವಿನಾದವು ಅವನ ಪಿಟೀಲಿನ ತಂತಿಗಳಿಂದ ಹನಿಹನಿಯಾಗಿ ಮೇಲೆ ಸಿಡಿಯುತ್ತಿತ್ತು. ಕಲ್ಲಿನ ಮೇಲೆ ಉರುಳುವ ಅಬ್ಬಿಯಂತೆ ಅದೂ ಉರುಳಿ, ಚೆಲ್ಲಿ ನಗುತ್ತಿತ್ತು. ಅದೇ ಬೆಳೆಬೆಳೆದು ತೆರೆಯಾಗಿ ಹರಡುತ್ತ ಹೋಯಿತು. ನಗುವಿನದೊಂದು ಚಿಲುಮೆ ಎಲ್ಲೊ ಒಸರಿ, ಉಕ್ಕಿ ಪಾತ್ರ ಹಿಡಿಸಲಾರದೆ ಹರಿಯುವ ತೊರೆಯಂತೆ ಅವನ ಗಾನ ಸೂಸುತ್ತಿತ್ತು.

ಅಷ್ಟೆಲ್ಲ ಹರಿದು, ವಿಸ್ತರಿಸಿ, ಉಕ್ಕಿ, ನಕ್ಕು ಒಮ್ಮೆಗೇ ಶಾಂತವಾಯಿತು. ಅಗ ಸೆರೆಯಲ್ಲಿ ಸಿಲುಕಿದ ತೆರೆ ನೀರಿನಂತೆ, ದನಿಯು ಕುಗ್ಗಿತು. ರಾಗಲಹರಿಯು ಶಾಂತವಾಯಿತು. ನಗುವಿನ ಗರ್ಭವು ಏನೋ ನೋವನ್ನು ಅದುಮಿ ಹಿಡಿದಂತೆ ಕಾಣುತ್ತಿತ್ತು.

ಮರುಕ್ಷಣ ಅವನ ಕೈಯು ಕೋಪದಿಂದ ಕುಲುಕಿದಂತಾಯಿತು. ಸೆರೆಯಾದ ವೇದನೆಯೆಲ್ಲವೂ ಬಹುಮುಖವಾಗಿ ಉರಿಯ ನಾಲಿಗೆಯಂತೆ ಹೊರಬಿದ್ದು ಬಾಳನ್ನು ಸುಟ್ಟಂತೆ, ರಾಗಲಹರಿಗಳು, ಎಣಿಸಲಾರದ ಮೇಳಗಳಾಗಿ ಸಿಡಿದು ಚಿಮ್ಮಿದವು. ಹೀಗೆ ಸ್ಫೋಟನಗೊಂಡ ಬಳಿಕ, ಸಾವು ಜೀವವನ್ನು ನುಂಗಿದಂತೆ ಒಂದೇ ಒಂದು ನೀಳವಾದ ರಾಗಾಲಾಪನವು ಗಾನಕ್ಕೆ ಕೊನೆಯನ್ನು ತಂದಿತು.

ಆಯ್ದವರು : ರಮಾಕಾಂತ ಕದರಮಂಡಲಗಿ

ಕೆ. ವ್ಹಿ. ಅಯ್ಯರರ " ಶಾಂತಲಾ "

ಶಾಂತಲೆಯ ಹೃದಯ ಮಿಡಿಯಿತು. ಲಕ್ಷ್ಮಿಯ ವೀಣೆ ನುಡಿಯಿತು. . . . ದೇವನ ಸಮ್ಮುಖದಲ್ಲಿ, ಭಕ್ತಿಯ ಆವೇಶದಲ್ಲಿ ಶಾಂತಲೆ ಆನಂದನೃತ್ಯವನ್ನು ಮಾಡುತ್ತಿದ್ದಾಳೆ. ಸ್ವರ್ಣಲತೆಯಂತಿರುವ ದೇವಿಯ ದೇಹ ತೂಗುತ್ತಿದೆ, ಬಳುಕುತ್ತಿದೆ ; ಹಕ್ಕಿಗಿಂತ ಹಗುರವಾಗಿದೆ. ದೇವದೇವನ ಪೂಜೆಗಾಗಿ ಶಾಂತಲೆ ಪುಷ್ಪೋದ್ಯಾನಕ್ಕೆ ಬಂದಿದ್ದಾಳೆ. ನವವಿಕಸಿತ ಕುಸುಮಗಳನ್ನು ಆಯ್ದುಆಯ್ದು ಸಂಗ್ರಹಿಸುತ್ತಾಳೆ. ವಿಕಸಿಸುತ್ತಿರುವ ಕಮಲಗಳನ್ನು ಸಂಗ್ರಹಿಸುತ್ತ, ಭೃಂಗಗಳು ಬಂದು ಎರಗಿದರೆ, ತಾನೂ ಅವುಗಳಲ್ಲಿ ಒಂದು ಭೃಂಗಿಯಾಗಿ, ಹೂವಿಂದ ಹೂವಿಗೆ ಅವುಗಳೊಂದಿಗೆ ಹಾರಿ ಹೂಗಳನ್ನು ದುಂಬಿಗಳು ಮುಟ್ಟದಂತೆ ನಿವಾರಿಸುತ್ತ, ಅವುಗಳನ್ನು ಶೇಖರಿಸುತ್ತಾಳೆ. ಶೇಖರಿಸಿದ ಪುಷ್ಪಗಳನ್ನು ದೇವಾಲಯಕ್ಕೆ ತರುತ್ತಾಳೆ. ಪರಮ ಭಕ್ತಿಯಿಂದ ದೇವನನ್ನು ಪುಷ್ಪಗಳಿಂದ ಅರ್ಚಿಸುತ್ತಾಳೆ. ಧೂಪದೀಪಗಳನ್ನು ಬೆಳಗುತ್ತಾಳೆ. ಆನಂದನೃತ್ಯ ಮಾಡುತ್ತಾಳೆ. ತನ್ನ ಆತ್ಮವನ್ನೇ ನಿವೇದಿಸಿಕೊಳ್ಳುತ್ತಾಳೆ.

ಆಯ್ದವರು : ಕು. ಲೀಲಾವತಿ ಜೋಶಿ

ವಿ. ಕೃ. ಗೋಕಾಕರ " ಸಮುದ್ರಯಾನ "

ವಿಷ್ಣು ತೂಣಗೊಂಡ. ಇಲ್ಲಿ ನಿಂತು ಕಾಲಪುರುಷನ ಗರ್ಭದೊಳಗಿನ ಸೂಕ್ಷ್ಮ ಚಲನವಲನಗಳನ್ನು ಕಣ್ಣಾರೆ ಕಾಣುತ್ತಿರುವಂತೆ ಅವನಿಗೆ ಭಾಸವಾಯಿತು. ಇದು ಒಂದು ದೇಶವಾದ ದ್ವೀಪವಲ್ಲ; ಒಂದು ಹಡಗ. ಕಡಲಿನಲ್ಲಿ ಪಯಣ ಬೆಳೆಸುವ ಹಡಗವಲ್ಲ; ಕಾಲ ಸಮುದ್ರದಲ್ಲಿ ಮುಂದುವರಿಯುತ್ತಿರುವ ಹಡಗ. ಈ ಕಲ್ಪನೆಯ ಸತ್ಯವನ್ನು ತೋರಿಸಿಕೊಡಲೋ ಏನೋ ಎಂಬಂತೆ ಇಡೀ ದ್ವೀಪವೇ ಇಲ್ಲಿ ಸಮುದ್ರದಲ್ಲಿ ತೇಲುವ ಒಂದು ಹಡಗದಂತೆ ಕಾಣುತ್ತಿತ್ತು. ಕಾಲೋದಧಿಯಲ್ಲಿ ಶಿಲಾಯುಗವನ್ನು ದಾಟಿ, ಬ್ರಿಟನ್ನರ ಸ್ವಾತಂತ್ರ್ಯದ ಯುಗವನ್ನು ಮೀರಿ, ರೋಮನ್ನರನ್ನು ಸ್ವಾಗತಿಸಿ, ಆಂಗ್ಲರನ್ನು ಬರಮಾಡಿಕೊಂಡು, ನಾರ್ಮನ್ನರ ಪದತಲದಲ್ಲಿ ಬಿದ್ದು ಈ ಹಡಗ ಮುಂದೆ ಸಾಗಿತ್ತು. ಕೆಲವು ಕಾಲದ ಮೇಲೆ ಅದರ ದೈವ ತೆರೆಯಿತು. ಜಗತ್ತಿನ ಮೂಲೆಮೂಲೆಗೆ ಬ್ರಿಟನ್ನಿನ ನಾವಿಕರು ತಮ್ಮ ರಾಜ್ಯಗಳನ್ನು ಸ್ಥಾಪಿಸಿದರು.

ಬೇರೆ ಬೇರೆ ದೇಶಗಳಲ್ಲೆಲ್ಲ ಬ್ರಿಟನ್ನಿನ ಕೀರ್ತಿ ಹಬ್ಬಿತು. ಈಗ ಜಗತ್ತಿನ ಇನ್ನೊಂದು ದಿಶೆಯಲ್ಲಿ ಬ್ರಿಟನ್ನಿನ ಅಂಕಿತದಲ್ಲಿದ್ದ ಭಾರತದ ಇಬ್ಬರು ತರುಣರು ಬಂದು ಕಾಲೋದಧಿಯಲ್ಲಿ ಸಾಗಿದ ಈ ಹಡಗದ—ಸಮುದ್ರದಲ್ಲಿ ಹಡಗದಂತಿರುವ ಈ ದ್ವೀಪದ—ಗತಿಯನ್ನೂ ಹೊಳವನ್ನೂ ನಿರೀಕ್ಷಿಸುತ್ತಿದ್ದರು. ಇಂತೆಯೇ ಎಷ್ಟು ಯುಗಗಳ ವರೆಗೆ ಪಯಣ ? ಒಮ್ಮೆ ಕಾಲೋದಧಿಯು ಈ ಯಾನಪಾತ್ರವನ್ನು ನುಂಗಿ ಬಿಡಬಹುದು. ಒಮ್ಮೆ ಯುಗಯುಗಾದಿಯಿಂದ ಈ ದ್ವೀಪದ ಸುತ್ತಲೂ ಅಪ್ಪಳಿಸುತ್ತಿರುವ ಈ ಸಮುದ್ರವು ಅದನ್ನು ಮತ್ತೆ ತನ್ನ ಅನಂತಗರ್ಭದಲ್ಲಿ ಮುಚ್ಚಿ ಬಿಡಬಹುದು. ಕಾಲರಾಜನ ನೌಕಾಬಲದಲ್ಲಿದ್ದ ಪ್ರತಿಯೊಂದು ಹಡಗಕ್ಕೂ ಅದರದರ ದೈವವಿದೆ. ಬ್ರಿಟನ್ ಎಂಬ ಈ ಹಡಗ ಅನೇಕ ಶತಮಾನಗಳ ವರೆಗೆ ಅಜ್ಞಾತವಾಗಿತ್ತು. ನಡುವೆ ಒಮ್ಮೆ ಅದರ ದೈವ ತೆರೆದು ಜಗತ್ತಿನ ಕಣ್ಣನ್ನೇ ಅದು ಕುಕ್ಕಿತು. ಆದರೆ ಬ್ರಿಟನ್ನಿನ ಸಾಮ್ರಾಜ್ಯದ ಮೇಲೆ ಸೂರ್ಯನೇ ಮುಳುಗುವದಿಲ್ಲ ವೆಂದು ಬ್ರಿಟನ್ನರು ಜಂಭ ಕೊಚ್ಚಿದಾಗ ಆ ಹಡಗವೇ ಮುಳುಗುವದೋ ? ನೌಕಾ ಬಲದಲ್ಲಿಯ ಮತ್ತಾವ ಹಡಗ ಮುಂದುವರಿಯುವದೋ ಕಂಡವರಾರು ? . . .

ಆಯ್ದವರು : ಪ್ರಲ್ಹಾದ ಕಾಥೋಟಿ

ಪು. ತಿ. ನರಸಿಂಹಾಚಾರ್ಯರ " ಈಚಲು ಮರದ ಕೆಳಗೆ "

ಈ ಇರುಳು ಸಹ ಒಂದು ಛಾಯೆಯೇ ಇರಬಹುದೋ? ನಿಜವಾಗಿ ಸೂರ್ಯ ನಮ್ಮ ಕಾಲಿನ ಕೆಳಗೆ ಭೂಮಿಯ ಅತ್ತಕಡೆ ಹೊಳೆಯುತ್ತಿರುವಾಗ ಭೂಮಿ ತನ್ನ ಹಿಂದೆ ನಮ್ಮ ಕಡೆಗೆ ಎಸೆಯುತ್ತಿರುವ ಮಹತ್ತಾದ ನೆರಳಲ್ಲವೆ ಈ ಇರುಳೆಂಬ ಪದಾರ್ಥ; ಈ ಪ್ರಚ್ಛಾಯೆ ಎಷ್ಟೊಂದು ಜನವನ್ನು ಮೋಹಗೊಳಿಸಿದೆ, ಮೋಸಪಡಿಸಿದೆ; ಇದನ್ನು ದೇವತೆ ಎಂದವರೆಷ್ಟು ಜನ. ವೇದದ ಋಷಿಗಳಿಂದ ವಾಲ್ಮೀಕಿಯ ವರೆಗೆ ಇದನ್ನು ನುತಿಸಿರುವರೆಷ್ಟು ಮಂದಿ. ಆದರೆ ಇದು ಬರಿಯ ನೆರಳು. ಅದಕ್ಕೆಯೇ ಇದು ನಮ್ಮ ನೆರಳನ್ನೆಲ್ಲಾ ನುಂಗಲು ಸಮರ್ಥವಾಯಿತು. ಇದರಂಚಿನ ತಾರೆಗಳು ಎಷ್ಟು ರಮ್ಯವಾಗಿವೆ! ಇವುಗಳನ್ನು ನಮಗೆ ತೋರಿಸಿಕೊಡಬೇಕೆಂದೇ ಸೂರ್ಯ ಈ ನೆರಳಿನ ' ಟಾರ್ಚ ' ನ್ನು ಅಂತರಿಕ್ಷಕ್ಕೆ ಈ ರೀತಿ ಎಸೆದಿದ್ದಾನೊ? ಈಗ ನಾನೂ ಈ ಸ್ಥಿತಿಯ ಸ್ನಿಗ್ಧಛಾಯೆಯಲ್ಲಿ ನನ್ನಾತ್ಮ ನನ್ನಅಹಂಕಾರದ ಮೂಲಕ ಚೆಲ್ಲುವ ಎಲ್ಲಾ ತರದ ನೆರಳುಗಳಿಂದಲೂ ಬಿಡುಗಡೆಯನ್ನು ಪಡೆದು ಸುಖಿಯಾಗಿದ್ದೇನೆ. ಇಹದಲ್ಲೇ ದೇವತೆಗಳಾಗಬೇಕಾದರೆ-ಎಂದರೆ ಛಾಯಾವಿಮುಕ್ತರಾಗಬೇಕಾದರೆ- ನಿಮಗೆ ಇದಕ್ಕಿಂತ ಬೇರೆ ಉಪಾಯವಿದೆಯೆ?

ಈ ಅಭಾವವೆಂಬ ಪದಾರ್ಥ-ಎಷ್ಟೊಂದು ಸದ್ ಭಾವಪೂರಿತವಾಗಿದೆ!

ಆಯ್ದವರು : ಕು. ಗೌರಿ ಕುರ್ತಕೋಟಿ

ಸೂಚನೆ : ಓದುಗರು ತಾವು ಮೆಚ್ಚಿದ ಸುಂದರ ಪ್ಯಾರಾಗಳನ್ನು ಬರೆದು ಕಳಿಸಿದರೆ ಆಯ್ದು ಪ್ರಕಟಿಸಲಾಗುವದು.

# ನಾನೊಮ್ಮೆ ದೆವ್ವ ಆಗಿದ್ದೆ!

"ರಾವ್ ಬಹಾದ್ದೂರ" ರಿಂದ

ನನ್ನ ಜೀವನದ ಅತಿ ಮೋಜಿನ ಘಟನೆ ಜರುಗಿದ್ದು ನಾನು ಅಪ್ಪಾರಾಯನ ಭೂತವಾದಾಗ. ಮಾತ್ರ, ಅದು ಆಗ ಅಷ್ಟು ಮೋಜಿನದಾಗಿ ನನಗೆ ಅನಿಸಲಿಲ್ಲ. ಯಾಕಂದರೆ ನನ್ನ ಹೆಂಡತಿ ಆಗ ಮೂರ್ಛೆಹೋಗಿದ್ದಳು; ಮತ್ತು ಸ್ವತಃ ನಾನು ಮಾಂತ್ರಿಕ ಜಮಾಲ ಸಾಹೇಬನ ಪೆಟ್ಟಿನ ರುಚಿ ನೋಡುವಲ್ಲಿಯ ವರೆಗೆ ಬಂದು ನಿಂತಿತ್ತು ಪ್ರಕರಣ. ಅದು ತಪ್ಪಿ, ನನ್ನ ಹೆಂಡತಿಗೆ ಪ್ರಜ್ಞೆ ಬಂದ ಮೇಲೆಯೇ ನನಗೆ ಘಟನೆಯು ಒಳ್ಳೇ ಮೋಜಿನದೆನಿಸಹತ್ತಿತು.

ಈ ಅಪ್ಪಾರಾಯ ಅಥಣಿಯಲ್ಲಿ ನನ್ನ ಅಣ್ಣ ಹೊಸದಾಗಿ ಹಿಡಿದಿದ್ದ ಬಾಡಿಗೆ ಮನೆಯ ಹಿಂದಿನ ಮಾಲಿಕ. ಅವನು ಸತ್ತು ಕೆಲವು ವರ್ಷಗಳಾಗಿದ್ದವು. ಆದರೆ ಅಥಣಿಯಲ್ಲಿ ನನ್ನ ಅಣ್ಣ ಮತ್ತು ಅವರ ಗೆಳೆಯ ಗುರುನಾಥರಾಯರನ್ನು ಬಿಟ್ಟರೆ ಎಲ್ಲರೂ ಅಪ್ಪಾರಾಯನು ಭೂತವಾಗಿ ಇನ್ನೂ ಆ ಮನೆಯಲ್ಲಿ ಧ್ವಜ ಹಾಕಿದ್ದಾನೆಂದು ನಂಬಿದ್ದರು. ಆ ಮನೆಯಲ್ಲಿ ಬಾಡಿಗೆಗೆ ಇದ್ದ ಒಬ್ಬರ ಕೈಯಿಂದ ಅಪ್ಪಾರಾಯ ಬಾವಿಯ ಹಗ್ಗ ಕಸಿದುಕೊಂಡಿದ್ದನಂತೆ. ಇನ್ನೊಮ್ಮೆ ಮನೆಯೊಳಗೆ ಮಲಗಿದ್ದವರನ್ನು ಪಲಂಗ ಸಹಿತ ಭಾವಿ ಕಟ್ಟೆಯಲ್ಲಿ ತಂದಿರಿಸಿದ್ದನಂತೆ. ಈ ಕಥೆಗಳನ್ನು ಮನೆಗೆ ಬಂದು ಸೇರಿದೊಡನೆ ನೆರೆಹೊರೆಯವರೂ ಅದೇ ಊರಲ್ಲಿದ್ದ ನನ್ನ ಅತ್ತಿಗೆಯ ತೌರು ಮನೆಯವರೂ ಹೇಳಿದ್ದರು. ಆದರೆ ನಮ್ಮಣ್ಣ ಭೂತಗಳನ್ನು ನಂಬುವವನಲ್ಲ. ಮನೆಗಳ ಬರಗಾಲದ ಕಾಲದಲ್ಲಿ ಇಷ್ಟು ಒಳ್ಳೆಯ ಮನೆ ಹತ್ತು ರೂಪಾಯಿ ಬಾಡಿಗೆಗೆ ಸಿಗುವಾಗ, ಅಪ್ಪಾರಾಯನೇ ಯಾಕೆ, ಅವನ ಅಪ್ಪ ಅಜ್ಜಂದಿರ ಭೂತಗಳಿದ್ದರೂ ಇರಲೊಲ್ಲಪೇಕೆ, ಎಂದು ಅವನು ಹೇಳಿದನು. ಇದೆಲ್ಲ ನನಗೆ ಗೊತ್ತಾದದ್ದು ಆ ಮೇಲೆ. ಅಂದರೆ ನಾನು ಭೂತವಾದ ಮೇಲೆ.



ನನ್ನ ಮದುವೆ ಅದೇ ಆಗಿತ್ತು. ಆದರೆ ಹೆಂಡತಿಯ ಮುಖ ಸರಿಯಾಗಿ ನೋಡುವ ಮೊದಲೇ ನನ್ನ ರಜೆಯೂ ಮುಗಿಯಿತು. ರಜೆ ಬೆಳೆಸಲು ಒಪ್ಪದಿದ್ದ ನನ್ನ ಮೇಲಧಿಕಾರಿಗಳನ್ನು ಶಪಿಸುತ್ತ ನಾನು ಬಾಸಿಂಗ ಇಳಿಸಿದವನೇ ಕೆಲಸದ ಮೇಲೆ ಹಾಜರಾಗಲು ಹುಬ್ಬಳ್ಳಿಗೆ ಹೋಗಬೇಕಾಯಿತು.

ನನ್ನವಳು ಅಥಣಿಯಲ್ಲಿ ಅದೇ ಹೊಸದಾಗಿ ಹಿಡಿದ ನಮ್ಮಣ್ಣನ ಮನೆಯಲ್ಲಿರಬೇಕೆಂದಾಯಿತು. ನನ್ನನ್ನು ಕೂಡಲೇ ಹೈದರಾಬಾದ ಕರ್ನಾಟಕಕ್ಕೆ ಸಂಚಾರಕ್ಕೆ ಹೊತ್ತುಹಾಕಿದರು.

ಒಳಗಿನ ರೋಷ, ಹೊರಗಿನ ಶ್ರಮ ಸೇರಿ ನನಗೆ ಕೆಟ್ಟ ಜ್ವರ ಬಂತು. ಬಹಳ ನಿತ್ರಾಣನಾದೆ. ಗದ್ವಾಲದಲ್ಲಿ ರಾಜವೈದ್ಯನೆಂದು ಹೇಳಿಕೊಳ್ಳುವವರೊಬ್ಬರು ಔಷಧ ಕೊಟ್ಟು ಜ್ವರ ಇಳಿಸಿದರು. ಆದರೆ ಹುಬ್ಬಳ್ಳಿಗೆ ಮರಳುತ್ತಲೇ ಅದು ಪುನಃ ನಾನಿದ್ದೇನೆ ಎಂದಿತು. ನಾನು ಹಾಸಿಗೆ ಹಿಡಿದೆ. ರಾಜವೈದ್ಯರ ಗುಳಿಗೆಯ ಮಹಿಮೆ ಬೇರೆ ವಿಶ್ವರೂಪ ತೋರಿಸಿತು. ಬಾಯಿ ರುಚಿಯಿಲ್ಲ, ದನಿ ಕುಗ್ಗಿ ಹೋಯಿತು, ಹಲ್ಲಿನ ವಸಡಿಗಳು ಬಾತು ರಕ್ತ ಸೋರಲಾರಂಭಿಸಿತು. ಒಟ್ಟಿನ ಮೇಲೆ ನನ್ನ ಆಕೃತಿ ಸ್ವಲ್ಪ ಅಂಜಿಕೆ ಬರುವಂತೆಯೇ ಆಗಿತ್ತು.

ಡಾಕ್ಟರರು ತಾತ್ಪೂರ್ತಿಕವಾಗಿ ಜ್ವರ ಇಳಿಯಲು ಔಷಧ ಕೊಟ್ಟು ಹವೆ ಬದಲಿಸಲು ಸೂಚಿಸಿದರು. ಅಂದೇ ಅಥಣಿಯಿಂದ ನಮ್ಮಣ್ಣನ ಪತ್ರವೂ ಬಂದಿತು, ಹೊಸದಾಗಿ ಹಿಡಿದ ಅಪ್ಪಾರಾಯನ ಮನೆಯಲ್ಲಿ ಅದೇ ದಿನ ಒಕ್ಕಲಾಗಿದ್ದೇವೆಂತ. ಮೇಲಿನವರು ಈ ಸಲ ರಜೆಯನ್ನು ದಯಪಾಲಿಸಿದರು. ನಾನು ಅಥಣಿಯಲ್ಲಿ ಅಣ್ಣನ ಮನೆಗೆ ಹೋಗಲು ನಿರ್ಧರಿಸಿ ಒಂದು ಕಾರ್ಡು ಬರೆದುಹಾಕಿ ಮರುದಿನ ಹೊರಟೆ.

ಸಾಯಂಕಾಲ ನಾಲ್ಕು ಗಂಟೆಗೆ ನಾನು ಅಥಣಿಯಲ್ಲಿಳಿದೆ. ಬಸ್ ಪ್ರವಾಸದ ಪ್ರಯಾಸದಿಂದ ನನಗೆ ಜ್ವರ ಮರುಕಳಿಸಿತ್ತು. ನನ್ನನ್ನು ಕರೆದೊಯ್ಯಲು ಸ್ಟ್ಯಾಂಡಿಗೆ ಯಾರೂ ಬಾರದ್ದನ್ನು ನೋಡಿ ಅದು ಇನ್ನಷ್ಟು ಏರಿತು. ಹಾಸಿಗೆ ಹೊರಿಸಿಕೊಂಡು ಹೇಗೋ ಮನೆ ತಲಪಿದರೆ ಅಲ್ಲಿ ಬಾಗಲಿಗೆ ಕೀಲಿ ಹಾಕಿದ್ದನ್ನು ಕಂಡೆ. ಇದು ಕಾವು ಇಳಿಸಲು ಏನೂ ನೆರವಾಗಲಿಲ್ಲ!

ನಾನು ಒಳಗೊಳಗೇ ಕುದಿಯುತ್ತ ಹಾಸಿಗೆಯನ್ನು ಹೊರಗೆ ಪಡಸಾಲೆಯಲ್ಲಿ ಉರುಳಿಸಿ ಬಿದ್ದುಕೊಂಡೆ. ಸಂಜೆಯ ಹೊಬಿಸಿಲು ಪಡಸಾಲೆಯಲ್ಲೆಲ್ಲ ಬಿದ್ದಿತ್ತು. ಜ್ವರಸಂತಪ್ತನಾಗಿದ್ದ ನನಗೆ ಅದನ್ನು ತಾಳುವದಾಗಲಿಲ್ಲ. ನನ್ನ ಹೆಂಡತಿಯ ಮೇಲೆ ನನಗೆ ವಿಪರೀತ ಸಿಟ್ಟು ಬಂದಿತ್ತು. "ಜಡ್ಡಾಗಿದೆ, ಬರುತ್ತೇನೆ ಅಂತ ಕಾಗದ ಬರೆದಿದ್ದೆ, ಆದರೂ ಇವಳಿಗೆ ಸಹಿತ ನನ್ನ ಹೆಣ ನೋಡಬೇಕೆಂತ ಅನಿಸಲಿಲ್ಲ. ಎಲ್ಲಿಯೋ ಮೆರೆಯಲಿಕ್ಕೆ ಹೋಗಿದ್ದಾಳೆ!" ಎಂದು ರೇಗಿದೆ.

ಸಂಸ್ಕೃತ ಮತ್ತು ಇಂಗ್ಲೀಷಿನಲ್ಲಿನ ಸ್ತ್ರೀಯರನ್ನು ನಿಂದಿಸುವ ವಾಕ್ಯಗಳನ್ನೆಲ್ಲ ಜ್ಞಾಪಿಸಿಕೊಂಡೆ. ನನ್ನ ಪತ್ರ ಮುಟ್ಟಿರಲಿಕ್ಕಿಲ್ಲ ಎಂಬ ವಿಚಾರ ಕೂಡ ತಲೆಯಲ್ಲಿ ಸುಳಿಯಲಿಲ್ಲ. ಜ್ವರ ಬಂದರೂ ಅಡ್ಡಿಯಿಲ್ಲ, ಹೆಂಡತಿಯ ಮುಖ ನೋಡಲು ಸಿಗುವದಲ್ಲ, ಎಂದಿದ್ದ ನನಗೆ ಅವಳ ಅಪರಾಧ ಅಕ್ಷಮ್ಯವೆನಿಸಿತ್ತು. ನಾನು ಸತ್ತೇ ಹೋಗಿದ್ದರೆ ಒಳಿತಿತ್ತು. ಆಗ ಇವಳಿಗೆ ಬುದ್ಧಿ ಬರುತ್ತಿತ್ತು! ಎಂದುಕೊಂಡೆ.

ಆಗ ನನಗೊಂದು ವಿಚಾರ ಬಂತು. ಈ ಕೀಲಿ ನಮ್ಮ ಮನೆತನದ ಹಳೇ ಮಿತ್ರ. ಅದರ ಮೊಳೆ ಒತ್ತಿದರೆ ಕೀಲಿಕೈ ಇಲ್ಲದೆಯೇ ಅದು ತೆರೆಯುತ್ತಿತ್ತೆಂದು ನನಗೆ ಗೊತ್ತಿತ್ತು. ನಾನು ಎದ್ದು ಈ ಅಲೀಬಾಬನ ಮಂತ್ರ ಉಪಯೋಗಿಸಿ ಕೀಲಿ ತೆಗೆದು ವಿಶಾಲವಾದ ನಡುಮನೆಯ ಒಂದು ಮೂಲೆಯಲ್ಲಿ ಹಾಸಿಗೆ ಹಾಕಿ ಮಲಗಿದೆ. ಆಗ ನನ್ನ ಕಾಯ್ದ ತಲೆಗೂ ಒಂದು ಕಿಡಿಗೇಡಿ ಕುಚೇಷ್ಟೆ ಹೊಳೆಯಿತು. ಇವರಿಗೆ ಬುದ್ಧಿ ಕಲಿಸುತ್ತೇನೆ, ಎಂದು ಎದ್ದು ಹಿತ್ತಿಲ ಬಾಗಿಲು ತೆರೆದಿಟ್ಟು ಹೊರಗೆ ಬಂದು ನಡುಮನೆಯ ಬಾಗಿಲು ಮುಚ್ಚಿ ಮೊದಲಿದ್ದಂತೆ ಕೀಲಿ ಹಾಕಿ ಹಿತ್ತಲ ಬಾಗಿಲಿನಿಂದ ಒಳಹೊಕ್ಕು ಅಗಳಿ ಜಡಿದು ನಡುಮನೆಗೆ ಬಂದು ಮಲಗಿದೆ. ಸ್ವಲ್ಪ ಹೆದರಲಿ ಎಂದಿಷ್ಟೇ ನನ್ನ ಉದ್ದೇಶವಿತ್ತು. ಈ ಮನೆಯ ದೆವ್ವನ ಸುದ್ದಿ ನನಗೆ ಗೊತ್ತಿದ್ದಿಲ್ಲ.

ಕಣ್ಣಿಗೆ ಜೊಂಪು ಹತ್ತಿತು. ಪೂರ್ಣ ನಿದ್ರೆಯೂ ಅಲ್ಲ, ಪೂರ್ಣ ಎಚ್ಚರವೂ ಅಲ್ಲ. ಜ್ವರ ವಿಪರೀತ ಏರಿರಬೇಕು. ಹೊತ್ತಿನ ಧ್ಯಾಸವಿಲ್ಲ. ಕಣ್ಣುಮುಚ್ಚಿಕೊಂಡು ಎಷ್ಟು ಹೊತ್ತು

ಬಿದ್ದಿದ್ದೆನೋ. ಹೊರಗೆ ಹೆಜ್ಜೆಯ ಸಪ್ಪಳ, ಮಾತಿನ ಗುಣುಗುಣು. ಕಣ್ಣು ತೆರೆದೆ. ಮಬ್ಬುಗತ್ತಲೆ. "ದೆವ್ವನ ಮನೆ ಅಂದರೆ ಕೇಳಲಿಲ್ಲ. ಈಗ ನೋಡು, ಮೂರು ಸಂಜೆ ಹೊತ್ತಿಗೆ ಮನೆಯೊಳಗೆ ಅಪ್ಪಾರಾಯ ನೆರಳುತ್ತಾನೆ . . . "

ಮಾತಾಡುತ್ತಿದ್ದವರು ನನ್ನ ಹಿರಿಯಣ್ಣನ ಹೆಂಡತಿಯ ತಮ್ಮ ಮತ್ತು ನನ್ನ ತಮ್ಮ. ಹೆದರಿಕೆಯಿಂದ ಈ ಶೂರರ ಗಂಟಲಾರಿತ್ತು. ನನಗೆ ಬಗೆಹರಿಯಲಿಲ್ಲ. ಈ ಅಪ್ಪಾರಾಯ ಯಾರಿರಬಹುದು? ದೆವ್ವನ ಮನೆಯಲ್ಲಿ ಅವನೇಕೆ ನರಳಬೇಕು? ಲಕ್ಷಣ ಚೆನ್ನಾಗಿಲ್ಲ. ಕರೆಯೋಣೆಂದರೆ ದನಿ ಬಿದ್ದು ಹೋಗಿದೆ. ಅವರ ಲಕ್ಷ್ಯ ಸೆಳೆಯಲು ಕೆಮ್ಮಿದೆ. ಅದರಿಂದ ಅವರು ಮತ್ತಷ್ಟು ಕಂಗಾಲಾಗಿರಬೇಕು. "ಹೆಂಗಸರು ಬಂದು ದೀಪ ಹಚ್ಚಲಿ. ಆ ಮೇಲೆ ನೋಡೋಣಂತೆ" ಎಂದು ಆ ಗಂಡಸರು ಅಲ್ಲಿಂದ ಜಾರಿಬಿಟ್ಟರು.

ಮತ್ತೆ ತಂದ್ರಿ. ಭೂತಗಳ ಕನಸು. ಯಾವದೋ ಸದ್ದು ಕೇಳಿ ಬೆಚ್ಚಿಬಿದ್ದೆ. ಹೆಂಗಸರ ದನಿ. ಮಕ್ಕಳ ಅಳು. ಕಗ್ಗತ್ತಲೆಯಲ್ಲಿ ಏನೂ ಕಾಣಿಸದು.

"ಸೀತಾಬಾಯಿ, ಬಾಗಲಾ ತೆರೆದು ದೀಪಾ ಹಚ್ಚು." ಅಣ್ಣನ ಹೆಂಡತಿಯ ದನಿ. ನನ್ನ ಹೆಂಡತಿಗೆ ಆಜ್ಞೆ. ಸೀತಾಬಾಯಿ ಕೀಲಿಕೈಹಾಕಿ ತಿರುಗಿಸಿದ ಸದ್ದು ಕೇಳಿತು. ಹೆಂಡತಿಯ ಸಾಮೀಪ್ಯ ನನಗೆ ಕೆಮ್ಮು ಬರಿಸಿತು.

"ಒಳಗೆ ಯಾರೋ ಕೆಮ್ಮತಾರ" ನನ್ನ ಹೆಂಡತಿ ಗಾಬರಿಯ ದನಿಯಲ್ಲಿ ಹೇಳಿದಳು. ಮುಚ್ಚಿದ ಮನೆಯಲ್ಲಿ ಮುಚ್ಚಂಜೆಯಲ್ಲಿ ಕೆಮ್ಮು! "ಈಗಲೇ ಬಾಗಲಾ ತೆರೀಬ್ಯಾಡ. ದೆವ್ವನ ಮನೆ ಅಂತ ಇದೇ ಈಗ ನಮ್ಮವ್ವ ಹೇಳಿದಳಲ್ಲ. ಇವರದೂ ದುಡುಕು ಬಹಳ. ಗೊತ್ತಿದ್ದೂ ಯಾಕೆ ಈ ಸುಟ್ಟ ದೆವ್ವನ ಮನಿ ಹಿಡೀಬೇಕಾಗಿತ್ತು? ತಡೀ, ಗಂಡಸರು ಬರಲಿ." ಅತ್ತಿಗೆಯ ದನಿ.

ನನ್ನ ತುಂಟತನ ದೀರ್ಘಕ್ಕೆ ಹೋಗುವಂತೆ ಅನಿಸಿತು. ಮಕ್ಕಳು ಅಳಹತ್ತಿದವು. ಇತ್ತ ನೀರಡಿಕೆಯಿಂದ ನನಗೆ ಪ್ರಾಣ ಹೋಗಲಿಕ್ಕಾಗಿತ್ತು. "ಬಾಗಲಾ ತೆರೀರಿ ಬಾಗಲಾ" ಎಂದು ಸರ್ವಶಕ್ತಿಯಿಂದ ಕೂಗಿದೆ. ಆದರೆ ನನ್ನ ದನಿ ನನಗೆ ಕೂಡ ಕೇಳಿಸದಷ್ಟು ಬಿದ್ದುಹೋಗಿತ್ತು.

ಅಷ್ಟರಲ್ಲಿ ನನ್ನ ತಮ್ಮ ಬಂದ. ಮಕ್ಕಳ ಆರ್ಭಟ ನಡೆದಿತ್ತು. ಗಂಡಸರು ಬಂದದ್ದು ಕಂಡು ಧೈರ್ಯದಿಂದ ನನ್ನಾಕೆ ಬಾಗಿಲು ದೂಡಿ ತೆರೆದಳು. ಅತ್ತಿಗೆ ಅಂದರು: "ಬಾಗಿಲ ಬಳಿಯಲ್ಲೇ ಕಂದೀಲು ಕಡ್ಡಿಪೆಟ್ಟಿಗೆ ಇಟ್ಟೇನಿ. ಮೊದಲು ದೀಪಾ ಹಚ್ಚು."

ಸೀತಾಬಾಯಿ ಕೈಯಾಡಿಸಿದ್ದು ಕಂದೀಲಿನ ಕರಕರ ಸಪ್ಪಳದಿಂದ ತಿಳಿಯಿತು. "ಕಡ್ಡೀಪೆಟ್ಟಿಗೆ ಇಲ್ಲವಲ್ಲಾ" ಎಂದಳವಳು.

"ಕಂದೀಲಿನ ಹತ್ತರನೇ ಇಟ್ಟಿದ್ದೆ. ಇಷ್ಟರಾಗ ಎಲ್ಲಿ ಹೋಗುತ್ತದೆ?"

"ಕಂದೀಲಿನ ಹತ್ತರ ಇಲ್ಲೇ ಇಲ್ಲ."

ಕಡ್ಡೀಪೆಟ್ಟಿಗೆ ಅಲ್ಲಿರಲಿಲ್ಲವೆಂಬುದು ಸುಳ್ಳಲ್ಲ. ಯಾಕಂದರೆ ನಾನು ಮಂಗಚೇಷ್ಟೆಯ ಅಂಗವಾಗಿ ಅದನ್ನು ತಂದು ಇಟ್ಟುಕೊಂಡಿದ್ದೆ. ಇವರು ಒದ್ದಾಡುವದು ನೋಡಿ ಕನಿಕರದಿಂದ ಮತ್ತು ನೀರಿನ ಅವಸರದಿಂದ ಅದನ್ನು ತೆಗೆದು ಒಗೆದೆ.

ನನ್ನ ಹೆಂಡತಿಗೆ ಅದು ಬಡಿದಿರಬೇಕು. "ಅವ್ವಯ್ಯಾ ದೆವ್ವ" ಎಂದು ಚಿಟ್ಟನೆ ಚೀರಿ ಪಡಸಾಲೆಗೆ ಜಿಗಿದದ್ದು ಕೇಳಿತು. ಅನಂತರ ನಡೆದದ್ದು ಸ್ಮೃತಿಪಟಲದಲ್ಲಿ ಎಂದೂ ಅಳಿಯದಂತೆ ಕೆತ್ತಿದೆ. "ಏನು ಏನಾಯಿತು?" . . . "ಬವಳಿ ಬಂದು ಬಿದ್ದಾಳ ಕಾಣತದ." . . . "ಹಾದು." "ಗಾಳಿ ಹಾಕಿರಿ." . . . "ಏನು ಬಂತವ್ವಾ, ಇವರಿಗೆ ಈ ದೆವ್ವನ ಮನಿ ಬಿಟ್ಟರೆ ಬ್ಯಾರೆ ಮನೀನೇ ಸಿಗಲಿಲ್ಲೇನು? ದೆವ್ವನ ಮನಿ ಅಂತ ನಮ್ಮ ತವರುಮನಿಯವರು ಹೇಳಿದ್ದರಂತೆ ಮೊದಲೇ. ಗೊತ್ತಿದ್ದೂ ಯಾಕ ಹಿಡಿಯಬೇಕಿತ್ತು ಇವರು ಈ ಮನಿ?"

ನನ್ನ ತಮ್ಮ, "ಹೌದು, ಅರ್ಧಾ ತಾಸು ಮುಂಚೆ ನಾ ಇಲ್ಲಿ ಬಂದಿದ್ದೆ. ಒಳಗ ನೆರಳುವದು ಕೆಮ್ಮುವದು ಕೇಳಿತು. ಊರೊಳಗೆ

ಎಲ್ಲಾರೂ ಹೇಳ್ತಾರೆ, ಅಪ್ಪಾರಾಯ ದೆವ್ವ ಆಗಿ ಇಲ್ಲೆ ಇಪ್ಪಾನಂತ. ಆ ಗುರುನಾಥರಾಯನ ಮಾತು ಕೇಳಿ ನಮ್ಮಣ್ಣ ಬಲಿಬಿದ್ದ, ತೀರಿತು," ಎಂದು ಹೆಂಗಸರ ಹೆದರಿಕೆಗೆ ಪುಟ ಕೊಟ್ಟ.

ಗದ್ದಲ ಕೇಳಿ ನೆರೆಹೊರೆಯವರು ಸೇರಿದರು. ನಡುಮನೆಯೊಳಗೆ ಕಾಲಿಡುವ ಬಂಟರು ಯಾರೂ ಇಲ್ಲ. ಎಲ್ಲರೂ ಅಪ್ಪಾರಾಯನ ಪ್ರತಾಪವನ್ನು ಪರಿಪರಿಯಾಗಿ ಬಣ್ಣಿಸುವವರೇ. ಬಾವಿಯ ಹಗ್ಗ ಕಸಿದುಕೊಂಡದ್ದು, ಶಿರಸ್ತೆದಾರ ಸಹಿತ ಮಂಚದ ಸ್ಥಾನಾಂತರ, ಅಮಾವಾಸ್ಯೆ ರಾತ್ರಿ ಕಂಪೌಂಡಿನೊಳಗಿನ ಅಶ್ವತ್ಥವೃಕ್ಷದ ಮೇಲೊಂದು, ಮನೆಯ ಛತ್ತಿನ ಮೇಲೊಂದು, ಕಾಲಿಟ್ಟು ನಿಂತ ದೆವ್ವ



ಗುರುನಾಥರಾಯರ ಭೂತದರ್ಶನ

ವನ್ನು ಸ್ವಂತ ಕಣ್ಣಿನಿಂದ ನೋಡಿದವರು ಹೇಳಿದ್ದನ್ನು ಕೇಳಿದವರು ತಮಗೆ ತಿಳಿಸಿದ ಸಂಗತಿ, ಇನ್ನೂ ಏನೇನೋ ದೆವ್ವಮಹಾತ್ಮೆ ಹೇಳುವ ಕೇಳುವ ಗದ್ದಲದಲ್ಲಿ ಮೂರ್ಛೆ ಹೋದ ನನ್ನವಳನ್ನಾಗಲಿ ಕೂಗುವ ಮಕ್ಕಳನ್ನಾಗಲಿ ಕೇಳುವವರಾರು ?

ನಾನೇ ಅಪ್ಪಾರಾಯನಾಗಿದ್ದೇನೆಂದು ನನಗೀಗ ಖಾತ್ರಿಯಾಗಿತ್ತು. ನಾನು ದೆವ್ವವಲ್ಲ ಎಂದು ತೋರಿಸಿ ಭಯನಿವಾರಣೆ ಮಾಡಿ ಒಂದು ಗುಟುಕು ನೀರು ದೊರಕಿಸಿದರೆ ಸಾಕೆಂದು ನಾನು ಕೆಮ್ಮುತ್ತ ನರಳುತ್ತ ಏಳಲು ಹವಣಿಸಿದೆ. ಆದರೆ ಏನೂ ಚೈತನ್ಯ ಉಳಿದಿರಲಿಲ್ಲ. ತಲೆ ತಿರುಗಿ ಹಾಸಿಗೆಯ ಮೇಲೆ ಬಿದ್ದೆ. ಇದರ ಸದ್ದು ಗೊಂದಲವನ್ನು ಮತ್ತಷ್ಟು ಹೆಚ್ಚಿಸಿತು.

ಅಷ್ಟರಲ್ಲಿ ಗುರುನಾಥರಾಯರ ಸವಾರಿ ಆ ದಾರಿಯಾಗಿ ಬಂತು. ಸಮಾಚಾರ ತಿಳಿದು ಅವರು, "ದೆವ್ವ ! ಎಲ್ಲೀ ದೆವ್ವ ! ಒಳಗೆ ಹೋಗಿ ನಾನೇ ನೋಡುತ್ತೇನೆ" ಎಂದು ಕಂದೀಲು ಹಿಡಿದು ಒಳಹೊಕ್ಕರು. ಕೆಲವರು ಅವರನ್ನು ತಡೆದರು. "ಬೇಡ ಗುರುರಾವ್. ಇದು ಸಾಧಾರಣ ಭೂತ ಅಲ್ಲ. ಸುಮ್ಮನೆ ನಿಂದಿರ್ರಿ. ಮಾಂತ್ರಿಕ ಜಮಾಲ ಸಾಬನ್ನ ಕರೀಲಿಕ್ಕ ಕಳಿಸೇವಿ" ಅಂದರು. ಕೆಲವರು ಅವರ ಧೈರ್ಯವನ್ನು ಕೊಂಡಾಡದಿರಲಿಲ್ಲ.

ಗುರುರಾಯರು ಅವರನ್ನು ಲೆಕ್ಕಿಸದೆ ಒಳಗೆ ಬಂದು ಕಂದೀಲಿನ ಬೆಳಕು ಹಾಯಿಸಿ ನನ್ನ ಕಡೆ ದೃಷ್ಟಿಬೀರಿದರು. ನಾನು ಬದುಕಿದೆನೆಂದುಕೊಂಡು ಕೈಯೆತ್ತಿ ಬಾಯಿಗೊಯ್ದು "ನೀರು, ನೀರು" ಎಂದು ಕೂಗಿದೆ. ದನಿ ಬರಲಿಲ್ಲ. ಆದರೆ ಇದರ ಫಲ ಅನಿರೀಕ್ಷಿತವಾಯಿತು.

"ಎಲಾ ಇವನ!" ಅಂದರು ಗುರುನಾಥರಾಯರು. ಅವರ ದಿಟ್ಟತನ ಅರ್ಧಕ್ಕಿಳಿದು ಹೋಗಿತ್ತೆಂದು ಅವರ ದನಿಯೇ ಹೇಳುತ್ತಿತ್ತು. ಆದರೂ, "ಅಪ್ಪಾರಾಯಾ! ಸತ್ತು ಮೂರು ವರ್ಷವಾದರೂ ಮನಿ ಆಶಾ ತೀರಲಿಲ್ಲ ನಿನಗೆ. ಆವತ್ತು ಸಾಯುವಾಗಲೂ ಕಂಬಳಿ ಹೊದ್ದು ಹಿಂಗೇ ನೀರು ನೀರು ಅನ್ನುತ್ತ ಇದೇ ಮೂಲ್ಯಾಗ ಬಿದ್ದುಕೊಂಡು ಕೂಗತಿದ್ದಿ. ಇನ್ನೂ ನಿನಗೆ ನೀರು ಸಿಕ್ಕಿಲ್ಲ? ಅಸಾಧ್ಯ ದೆವ್ವ ನೀನು. ನಾನು ಇಂದಿನ ತನಕಾ ನಂಬಿದ್ದಿಲ್ಲ. ಒಳ್ಳೇದು. ಹಂಗೇ ಬಿದ್ದಿರು. ಜಮಾಲಸಾಬ ಬರಲಿ. ನಿನಗ ನೀರು ಕುಡಿಸ್ತಾನ" ಎಂದವರೇ ಅಲ್ಲಿಂದ ಕಾಲುಕಿತ್ತರು. ಆಗ ನಾನು ನಿಜವಾಗಿ ಭೂತವೋ ಏನೋ ಎಂದು ನನಗೇ ಅನುಮಾನ ಬರುವಂತಾಯಿತು ! ಮತ್ತು ಜಮಾಲಸಾಬನ ಸುದ್ದಿ ಕೇಳಿದಾಗಂತೂ ನಿಜವಾದ ಭೂತಕ್ಕೆ ಆಗಬಹುದಾದಂತೆ ನನಗೂ ನಡುಕವುಂಟಾಯಿತು. ಈ

ಜಮಾಲಸಾಬನ ವಿಚಾರ ನಾನು ಹಿಂದೆ ಕೇಳಿದ್ದೆ. ಅವನು ಭೂತಗಳಿಗೆ ಕೊಡುವ ಚಪ್ಪಲಿಯೇಟು ಗಳು ಪ್ರಸಿದ್ಧವಾಗಿದ್ದವು. ಸತ್ತು ಭೂತವಾದವ ರಿಗೇ ಅವನ ಅಂಜಿಕೆಯಿತ್ತು ; ಜೀವಂತ ಭೂತ ನಾಗಿದ್ದ ನನ್ನ ಪಾಡೇನು? ಬಾಗಿಲು ಕೀಲಿಯಿಕ್ಕಿ ಒಳಗೆ ಮಲಗುವ ದುರ್ಬುದ್ಧಿ ನನಗೇಕೆ ಬಂತೋ ಅಂದುಕೊಂಡೆ. ಹಾಗೆ ಮಾಡಿದರೂ ಕಡ್ಡಿಪೆಟ್ಟಿಗೆ ತೆಗೆದಿಡುವ ಕೆಲಸ ಯಾಕೆ ಬೇಕಿತ್ತು? ತೆಗೆದಿ ಟ್ಟರೂ ಭೂತದ ಸುದ್ದಿ ಮಾತಾಡುತ್ತಿದ್ದ ಇವಳ ಮೇಲೇಕೆ ಒಗೆಯಬೇಕಿತ್ತು? ನನ್ನ ಕೋಪವೆಲ್ಲ ಈಗ ಪಶ್ಚಾತ್ತಾಪದಲ್ಲಿ ಪರಿವರ್ತನೆ ಹೊಂದಿತ್ತು. ಬ್ರಾಹ್ಮಣರು ಪಶ್ಚಾತ್‌ಬುದ್ಧಿಗಳಂತೆ. ನನ್ನದೂ ಹಾಗೇ ಆಗಿತ್ತು. ಗದ್ವಾಲದಲ್ಲಿ ತಣ್ಣೀರು ಕುಡಿ ಯದಿದ್ದರೆ . . ರೆ . . . ಇತ್ಯಾದಿ, ಅನಂತ —ರೆಗಳು ಸುಳಿದುಹೋದವು. ಅನಂತರ ನನಗೆ ದೇವರ ನೆನಪಾಯಿತು. ಒಂದಲ್ಲ ಎರಡಲ್ಲ, ಹಿಂಡು ದೇವರು. ಐದು ನಿಮಿಷಗಳಲ್ಲಿ ಎಷ್ಟು ದೇವರನ್ನು ಧ್ಯಾನಿಸಬಹುದೋ ಅಷ್ಟನ್ನೂ ಪ್ರಾರ್ಥಿಸಿದೆ.

ಹೊರಗೆ "ಜಮಾಲಸಾಬ ಬಂದ" ಎಂದು ಯಾರೋ ಅಂದರು ಆಗಂತೂ ನನಗೆ ನಾನು ರಾಮು ಆಗಿರದೆ ಅಪ್ಪಾರಾಯನ ಭೂತವಾಗಿದ್ದ ರೇನೆ ಒಳ್ಳೇದಿತ್ತು ಅನಿಸಿತು. ಭೂತವಾಗಿದ್ದರೆ ಮಾಂತ್ರಿಕನ ಸುದ್ದಿ ಕೇಳಿದೊಡನೆ ಓಡಿಹೋಗ ಬಹುದಿತ್ತು. ಈ ಜೀವಂತ ಭೂತಕ್ಕೆ ಕದಲ ಲಿಕ್ಕೂ ಬರುವದಿಲ್ಲ. "ರಾಘವೇಂದ್ರ ಗುರುವೇ, ಕಾಪಾಡು. ಭೂತಪ್ರೇತ ಪಿಶಾಚಾದಿ ಪೀಡಾ ತಸ್ಯ ನಿವಾರ್ಯತೇ'' ಎಂದು ಏಕೋಭಾವದಿಂದ ಜಪಿಸಿದೆ. ನನ್ನ ಮೈ ಬೆವತುಹೋಗಿತ್ತು.

ಪುಣ್ಯ ಗಟ್ಟಿಯಿತ್ತು. ಅಥವಾ ಗುರುಕೃಪೆ ಯಿತ್ತು ಅನ್ನಿ. ಬಂದವ ಜಮಾಲಸಾಬ ಆಗಿರದೆ ನಮ್ಮಣ್ಣನೇ ಆಗಿದ್ದ. ಅವನನ್ನು ಸುತ್ತಲೂ ಟೀಕಾಸ್ತ್ರಗಳು ಸ್ವಾಗತಿಸಿದವು. ಬಾಡಿಗೆ ಸೋವಿ ಯೆಂದು ದೆವ್ವದ ಮನೆ ಗಂಟು ಹಾಕಿಕೊಂಡ ದ್ದನ್ನು ಏಕಕಂಠದಿಂದ ಎಲ್ಲರೂ ಜರೆಯಲಾರಂಭಿ ಸಿದರು.

ನನ್ನ ಅಣ್ಣ ಅಷ್ಟು ಸರಳವಾಗಿ ಹೆದರುವವ ನಲ್ಲ. ಅವನು, ನಿಂತಿದ್ದ ನೆರೆಮನೆಯವನ ಕೈ ಯಿಂದ ಕಂದೀಲು ಕಸಿದುಕೊಂಡು "ಇದೆಂಥಾ ಭೂತವೋ ನೋಡಿಯೇ ಬಿಡುತ್ತೇನೆ" ಎಂದು ಒಳಗೆ ನುಗ್ಗಿದನು. ಅತ್ತಿಗೆ ಅವನನ್ನು ತಡೆ ಯಲು ಯತ್ನಿಸದಿರಲಿಲ್ಲ. ನಿಂತವರು ಗುರು ನಾಥರಾಯರ ಪುರಾವೆಯನ್ನೂ ಹಾಜರು ಮಾಡಿ ಎಚ್ಚರಿಕೆ ಕೊಟ್ಟರು. ನಮ್ಮಣ್ಣ ಒಂದನ್ನೂ ಲೆಕ್ಕಿಸದೆ ನನ್ನ ಬಳಿ ಬಂದು, "ಯಾರು?'' ಎಂದ.

"ನಾನು, ರಾಮು, ಜ್ವರ, ನೀರು, ಭೂತ ಅಲ್ಲ'' ಎಂದು ಏನೇನೋ ಹಲುಬಿದೆ. ಅವ ನಿಗೂ ದನಿಯ ಗುರುತು ಹತ್ತಲಿಲ್ಲ. ಆದರೆ ಜಡ್ಡಿನಿಂದ ತೀರ ವಿಕೃತವಾಗಿದ್ದರೂ ನನ್ನ ಮುಖದ ಗುರುತು ಹತ್ತದಿರಲಿಲ್ಲ. "ರಾಮು? ಏನಾಗಿದೆ? ಯಾವಾಗ ಬಂದಿ? " ಎಂದು ಕೇಳಿದ.



ನಾನು ನನ್ನ ಅವ್ಯಕ್ತ ನಾದದಿಂದ ಏನೇನೋ ಹೇಳಿದೆ. ಎಷ್ಟು ಅರ್ಥವಾಯಿತೋ ಎಷ್ಟು ಇಲ್ಲವೋ. ಅಂತೂ ನಮ್ಮಣ್ಣ ತಿಳಿದುಕೊಂಡ. "ಭೂತವಂತೆ ಭೂತ!" ಅವನು ಆರ್ಭಟಿ ಸಿದ. ''ಜ್ವರ ಬಂದು ರಾಮು ಮಲಗಿದ್ದಾನೆ. ಒಂದು ಗುಟುಕು ನೀರು ಕೊಡದೆ ಭೂತ ಅಂತ

ಎಲ್ಲಾರೂ ಹೊರಗೆ ನಿಂತಾರ. ಹುಚ್ಚು ಮಂದೀ ಮಾತು ಕೇಳಿ ಜಮಾಲಸಾಬನ್ನ ಕರಸಿ ಹೊಡಿಸಿ ಬಿಟ್ಟಿದ್ದರೆ ನನ್ನ ತಮ್ಮನ ಗತಿ ಏನಾಗತ್ತಿತ್ತೋ! ದೇವರು ಉಳಿಸಿದ. ನಡೀರಿನ್ನು ಒಂದು ಪಾಟಗ ನೀರು ಕಾಸಿ ತರ್ರಿ.'' ಅಷ್ಟರಲ್ಲಿ ಸೇರಿದ 'ಹುಚ್ಚು' ಮಂದಿ ಬಹಳ ಮಟ್ಟಿಗೆ ಕಣ್ಮರೆಯಾಗಿದ್ದರು. ನೆರೆಮನೆಯ ಗೋದೂಬಾಯರೊಬ್ಬರು ಹೋಗುತ್ತ: "ಅಪ್ಪಾರಾಯ ನಿಮ್ಮ ಮೈದುನನ ರೂಪ ಧರಿಸಿ ಬಂದಿರಬಹುದು. ನೋಡಿಕೋರಿ" ಎಂದು ಅತ್ತಿಗೆಗ ಎಚ್ಚರಿಕೆ ಕೊಡಲು ಮರೆಯಲಿಲ್ಲ.

ನನ್ನ ಹೆಂಡತಿ ಆ ಮೊದಲೇ ಚೇತರಿಸಿಕೊಂಡಿದ್ದಳು. ಅತ್ತಿಗೆ ಆ ಸಂದರ್ಭದಲ್ಲಿ ಅತಿಶಯವಾದ ಇಂಗಿತಜ್ಞತೆಯನ್ನು ಪ್ರದರ್ಶಿಸಿದರೆಂದು ಕೃತಜ್ಞತೆಯಿಂದ ಸ್ಮರಿಸಬೇಕಾಗಿದೆ. ಅವರು ನೀರು ಕಾಸಿ ನನ್ನ ಹೆಂಡತಿಯ ಕೈಲೇ ಕಳಿಸಿದರು. ನಾನು ನೀರು ತೆಗೆದುಕೊಂಡು ಕೆಳಗಿಟ್ಟು ಮೆಲ್ಲಗೆ ಅವಳ ಕೈಹಿಡಿದು, "ಇದು ಅಪ್ಪಾರಾಯ ಅಲ್ಲ, ನಿನ್ನ ಕೈಹಿಡಿದ ಭೂತ" ಅಂದೆ.

"ಸಾಕು ಬಿಡಿ ಚೇಷ್ಟೆ" ಎಂದಳವಳು.



## ಇಂಥವರೂ ಇದ್ದಾರೆ !

ನಮ್ಮ ಮನಸ್ಸು ಅತಿ ವಿಚಿತ್ರವಾದದ್ದು, ಅದರ ಆಘಾತಕ್ಕೆ ಸಿಕ್ಕಬಳಿಕ ಅದರಂತೆ ನಡೆದುಕೊಳ್ಳದಿದ್ದರೆ ಶಾಂತಿ ಸಮಾಧಾನಗಳೇ ಹಾರಿಹೋಗುವವು. ಮನಸ್ಸು ಹೇಳುವದು ಒಳ್ಳೆಯದೆ ಇರಲಿ, ಕೆಟ್ಟದ್ದೆ ಇರಲಿ ಈ ಮಾತು ಸತ್ಯ

ಇಂಗ್ಲಂಡದ ಎಸೆಕ್ಸದಲ್ಲಿ ಇರುವ ಓರ್ವ ವೃದ್ಧ ಗೃಹಸ್ಥನ ಕಥೆ ಇದು. ೬೩ ವರ್ಷಗಳ ಹಿಂದೆ ಆವನೊಮ್ಮೆ ಟ್ರಾಮಿನಲ್ಲಿ ತಿಕಿಟಿಲ್ಲದೆ ಪುಕ್ಕಟೆ ಪ್ರವಾಸ ಮಾಡಿದ್ದ. ಆದರೆ ಆತನ ಪಾಪಭೀರು ಮನಸ್ಸಿಗೆ ಈ ಅನ್ಯಾಯದ ಕೃತಿ ತುಂಬ ಹತ್ತಿತು. ೬೩ ವರ್ಷದ ನಂತರ ಈ ಮುದುಕ ಆ ಟ್ರಾಮು ಕಂಪನಿಗೆ ಎರಡು ಪೆನ್ಸ್ ಕಳಿಸಿಕೊಟ್ಟ.

*

೧೯೩೯ರಲ್ಲಿ ಓರ್ವ ಸ್ಕಾಟಿಶ್ ಮನುಷ್ಯನು ಕಾನಡಾದಲ್ಲಿ ಸಂಚಾರಕ್ಕಾಗಿ ಹೋಗಿದ್ದ. ಆಗ ಆತ ಮೇಲಿಂದ ಮೇಲೆ ಪೋಸ್ಟಾಫೀಸಿಗೆ ಹೋಗುತ್ತಿದ್ದ. ಜನರಿಗೆ ತಾತ್ಪೂರ್ತಿಕ ಉಪಯೋಗಕ್ಕಾಗಿ ಇರಲಿ ಎಂದು ಪೋಸ್ಟಾಫೀಸುಗಳಲ್ಲಿ ಮಶಿಯಿಟ್ಟಿರುತ್ತಾರೆ. ಈ ಮನುಷ್ಯ ಅನೇಕಾನೇಕ ಸಲ ಆ ಮಶಿಯನ್ನು ಉಪಯೋಗಿಸಿದ್ದನು. ಕೆಲ ದಿನಗಳ ನಂತರ ಅವನಿಗೆ ತಾನು ಪರರಾಷ್ಟ್ರದ ಸಾರ್ವಜನಿಕ ಸೊತ್ತನ್ನು ಮಿತಿಮೀರಿ ಉಪಯೋಗಿಸಿದೆ ಎನಿಸಿತು. ಪರರಾಷ್ಟ್ರದ ಋಣದಲ್ಲಿ ತಾನೇಕೆ ಇರಬೇಕು ಎಂದು ಆತ ಕಾನಡಾ ಸರಕಾರದ ಪೋಸ್ಟಮಾಸ್ಟರ ಜನರಲ್ಲರಿಗೆ ■ ಪೆನ್ಸ ಕಳಿಸಿ "ಪೋಸ್ಟಾಫೀಸಿನಲ್ಲಿಯ ಮಶಿ ದೌತಿಯಲ್ಲಿ ೨೩,೦೦೦ ಸಲ ಲೆಕ್ಕಣಿಕೆ ಅದ್ದಿ ಉಪಯೋಗಿಸಿದ ಬೆಲೆ ಕಳಿಸಿದ್ದೇನೆ'' ಎಂದು ಪತ್ರ ಬರೆದ.



ದಿ. ಸಿದ್ಧಪ್ಪನವರು



ದಿ. ಚೆನ್ನಪ್ಪನವರು



ಶ್ರೀ ನೀಲಕಂಠಪ್ಪನವರು

**ಬಂಡವಳವಿದ್ದಿಲ್ಲ, ಆದರೆ ಧೈರ್ಯವಿತ್ತು, ಬುದ್ಧಿಯಿತ್ತು; ಅದನ್ನು ಕಮ್ಮಾರಬಂಧುಗಳು ಉಪಯೋಗಿಸಿದರು**

# 'ಸಿದ್ಧೇಶ್ವರ'ವನ್ನು ಕಟ್ಟಿದ ಧೀರರು

ಬರೆದವರು: **ಆರ್. ಬಿ. ಕುಲಕರ್ಣಿ**

"ಸಿದ್ಧೇಶ್ವರ ತಿಜೋರಿ"ಯನ್ನು ಕರ್ನಾಟಕದಲ್ಲಿ ಯಾರು ಕೇಳಿಲ್ಲ? ಭದ್ರತೆಯೆಂದರೆ ಸಿದ್ಧೇಶ್ವರ, ಸಿದ್ಧೇಶ್ವರ ಎಂದರೆ ಭದ್ರತೆ ಎಂದು ಈ ತಿಜೋರಿಗಳಿಗೆ ಕೀರ್ತಿ ಬಂದುಬಿಟ್ಟದೆ. ಆದರೆ ಹುಬ್ಬಳ್ಳಿಯ ಸಿದ್ಧೇಶ್ವರ ಕಂಪನಿಯನ್ನು ಕಟ್ಟಿದ ಕಮ್ಮಾರ ಬಂಧುಗಳ ಸಾಹಸ ಕಥೆ ಮಾತ್ರ ಜನರಿಗೆ ಗೊತ್ತಿಲ್ಲ. ಕೈಯಲ್ಲಿ ಕಾಸಿಲ್ಲದಿದ್ದರೂ ಕರ್ನಾಟಕದಲ್ಲಿ ಉದ್ದಿಮೆಗಳನ್ನು ಕಟ್ಟಬೇಕೆಂಬ ತರುಣರಿಗೆ ಸಿದ್ಧೇಶ್ವರದ ಕಥೆ ಸ್ಫೂರ್ತಿಯನ್ನು ಕೊಡುವದು ಖಂಡಿತ.

ಸಿದ್ಧಪ್ಪ ಕಮ್ಮಾರ, ಚೆನ್ನಪ್ಪ ಕಮ್ಮಾರ, ಮತ್ತು ನೀಲಕಂಠಪ್ಪ ಕಮ್ಮಾರ ಈ ಮೂವರು ಅಣ್ಣ ತಮ್ಮಂದಿರು ಸಿದ್ಧೇಶ್ವರ ಕಂಪನಿಯನ್ನು ಅಕ್ಷರಶಃ "ಸ್ವಂತ ಕೈಯಿಂದ" ಕಟ್ಟಿದರು. ಅವರ ಪ್ರಾಮಾಣಿಕತೆ, ಪರಿಶ್ರಮ, ದೂರದೃಷ್ಟಿಗಳು, ೧೯೧೪ರಲ್ಲಿ ಒಂದು ಸಾದಾ ಕಮ್ಮಾರಸಾಲೆಯಾಗಿದ್ದದನ್ನು ಇಂದು ಕರ್ನಾಟಕದ ಪ್ರಥಮ ಶ್ರೇಣಿಯ ತಿಜೋರಿ ಉದ್ದಿಮೆಯಾಗಿ ಮಾಡಿದವು.

ಈ ಮೂವರು ಬಂಧುಗಳಿಗೆ ಸಿದ್ಧೇಶ್ವರ ತಿಜೋರಿ ಕಂಪನಿ ಕಟ್ಟಲು ಇದ್ದ ಅನುಕೂಲಗಳನ್ನು ನೋಡಿರಿ. ಅವರಿಗೆ ಹುಬ್ಬಳ್ಳಿ ಬೊಮ್ಮಾಪುರ ಓಣಿಯಲ್ಲಿ ಅಜ್ಜಮುತ್ತಜ್ಜರಿಂದ ಬಂದ

ರಂಟೆಕುಂಟಿ ದುರಸ್ತಿ ಮಾಡುವ ಒಂದು ಸಾದಾ ಕಮ್ಮಾರಸಾಲೆಯಿತ್ತು. ಆದರೆ ಅದರಿಂದ ಹೊಟ್ಟೆ ತುಂಬುವದು ಸಾಧ್ಯವಿದ್ದಿಲ್ಲ. ಹಿರಿಯಣ್ಣ ಸಿದ್ಧಪ್ಪನವರು ಮನೆಕಟ್ಟಿಸುವ ಮಕಾದಮರಾಗಿ, ನಡುವಿನ ಚೆನ್ನಪ್ಪನವರು ರೇಲ್ವೆ ವರ್ಕಶಾಪಿನಲ್ಲಿ ಕಮ್ಮಾರರಾಗಿ, ಮೂರನೆಯ ನೀಲಕಂಠಪ್ಪನವರು ಬಡಗಿಯಾಗಿ ದುಡಿದು ಜೀವನ ಸಾಗಿಸುತ್ತಿದ್ದರು. ಚೆನ್ನಪ್ಪನವರು ೧೯೦೧ ರಲ್ಲಿ ದಿನಕ್ಕೆ ಒಂದೂವರೆ ಆಣೆ ಸಂಬಳದ ಮೇಲೆ ರೇಲ್ವೆಯಲ್ಲಿ ಕೆಲಸಕ್ಕೆ ಸೇರಿದರೆಂಬುದರ ಮೇಲೆ ಈ ಕುಟುಂಬದ ಸಾಂಪತ್ತಿಕ ಸ್ಥಿತಿಯನ್ನು ಊಹಿಸಬಹುದು. ಕಮ್ಮಾರಸಾಲೆ ಆಗ ಅವರ ಉಪಕಸುಬಿನ ಸ್ಥಾನಕ್ಕೆ ಇಳಿದಿತ್ತು. ಅವರ ವಿದ್ಯೆ ಕನ್ನಡ ಆರನೆ ಇಯತ್ತೆಗಿಂತ ಮೇಲೆ ಹೋಗಿರಲಿಲ್ಲ.

ಇವರೇ ಸಿದ್ಧೇಶ್ವರ ಕಂಪನಿಯನ್ನು ಸ್ಥಾಪಿಸಿದರೆಂದರೆ ನೀವು ನಂಬುವದು ಕಷ್ಟ. ಆದರೆ ಅವರೊಳಗೆ ಈ ಉದ್ದಿಮೆಯ ಸ್ಥಾಪನೆಗೆ ಬೇಕಾದ ಮೂರು ಮುಖ್ಯ ಗುಣಗಳು ಸುಪ್ತವಾಗಿದ್ದವು. ಸಿದ್ಧಪ್ಪನವರು ಒಳ್ಳೇ ವ್ಯವಹಾರ ಮತ್ತು ಸಂಘಟನ ನಿಪುಣರು; ಚೆನ್ನಪ್ಪನವರು "ಆರನೇಯತ್ತಾ ಗ್ರಾಜುಯೇಟ" ರಾದರೂ ಅವರಿಗೆ ಗಣಿತ ನೈಪುಣ್ಯ ಮತ್ತು ಒಂದು ಯಂತ್ರವನ್ನು ಕಂಡೊಡನೆ ಅದರ ಒಳಗುಟ್ಟನ್ನು ತಿಳಿದುಕೊಳ್ಳುವ ವೈಜ್ಞಾನಿಕ ಕುಶಾಗ್ರಬುದ್ಧಿ ಇವು ಇದ್ದವು; ಅದು ವರ್ಕಶಾಪಿನ ನೌಕರಿಯಿಂದ ಪುಟಗೊಂಡಿತ್ತು; ನೀಲಕಂಠಪ್ಪನವರಲ್ಲಿ ಚಿತ್ರ ಮತ್ತು ಪ್ಲ್ಯಾನ್ ರಚಿಸುವ ಕಲೆಯಿತ್ತು. ಈ ಕೌಶಲಗಳು ಯೋಗ್ಯ ಸಂದರ್ಭವನ್ನೇ ಕಾಯುತ್ತಿದ್ದವು.

ಆ ಸಂದರ್ಭ ೧೯೧೪ ರ ಮಹಾಯುದ್ಧದಿಂದ ಒದಗಿತು. ಆಗ ಹೆಚ್ಚಾಗಿ ವಿದೇಶಗಳಿಂದ ಬರುತ್ತಿದ್ದ ತಿಜೋರಿ ಮೊದಲಾದ ಭದ್ರತೆಯ ಸಾಮಗ್ರಿಗಳ ಪೂರೈಕೆ ನಿಂತುಹೋಯಿತು. ಹಳೇ ತಿಜೋರಿಗಳನ್ನು ದುರಸ್ತಿ ಮಾಡಿ ಕೆಲಸ ಸಾಗಿಸಬೇಕಾಯಿತು. ಶ್ರೀಮಂತರಲ್ಲಿದ್ದ ಇಂಥ ತಿಜೋರಿಗಳು ಕಮ್ಮಾರ ಬಂಧುಗಳ ಕಮ್ಮಾರಸಾಲೆಗೆ ಬರತೊಡಗಿದವು. ದಿನದ ಕಾಯಂ ಕೆಲಸ ಮುಗಿಸಿ ಬಂದ ಮೇಲೆ ಸಂಜೆಯಲ್ಲಿ ಕಮ್ಮಾರ ಬಂಧುಗಳು ತಿಜೋರಿಗಳನ್ನು ದುರಸ್ತಿ ಮಾಡುತ್ತಿದ್ದರು. ಆಗ ಅವರಿಗೆ ತಿಜೋರಿಗಳ ರಚನೆಯ ಒಳಹೊರಗುಗಳೆಲ್ಲ ತಿಳಿದವು. ಸಂಗಡಲೇ ದೊಡ್ಡ ದೊಡ್ಡ ಇಂಜನಿಯರರ ಪ್ಲಾನುಗಳ ಪ್ರಕಾರ ರಚಿಸಲ್ಪಟ್ಟಿದ್ದ ಈ ತಿಜೋರಿಗಳಲ್ಲಿದ್ದ ದೋಷಗಳೂ ಚೆನ್ನಪ್ಪನವರ ಯಂತ್ರಕುಶಲ ಬುದ್ಧಿಗೆ ಕಾಣಿಸದಿರಲಿಲ್ಲ. ಮುಖ್ಯವಾಗಿ ಅವುಗಳ ಬೀಗ (ಕೀಲಿ) ದ ವ್ಯವಸ್ಥೆಗಳು ಸರಿಯಾಗಿದ್ದಿಲ್ಲೆಂದೂ ಅದರಿಂದ ತಿಜೋರಿ ಮುರಿಯುವವರಿಗೆ ಸುಲಭವಾಗುವದೆಂದೂ ಅವರಿಗನಿಸಿತು. ಅವರು ತಮ್ಮಲ್ಲಿದ್ದ ಸಾಮಾನುಗಳಿಂದಲೇ ಮೊದಲಿಗಿಂತ ಭದ್ರವಾದ ಕೀಲಿಗಳನ್ನು ತಿಜೋರಿಗಳಿಗೆ ಜೋಡಿಸಿಕೊಟ್ಟರು. ಅವರದು ಒಣ ದುರಭಿಮಾನವಾಗಿದ್ದಿಲ್ಲ. ಅವರಲ್ಲಿ ತಿಜೋರಿ ದುರಸ್ತಿಮಾಡಿಸಿಕೊಂಡ ಪ್ರತಿಯೊಬ್ಬನೂ ಅವರ ಕೆಲಸಕ್ಕೆ ಮೆಚ್ಚುತ್ತಿದ್ದನು.

ಗಿರಾಕಿಗಳ ಈ ಸಂಪ್ರೀತಿಯೇ ಸಿದ್ಧೇಶ್ವರ ಕಂಪನಿಯ ಸ್ಥಾಪನೆಗೆ ಹಾಗೂ ಉತ್ಕರ್ಷಕ್ಕೆ ತಳಹದಿಯಾಯಿತು. ನಿಜವಾಗಿ ಕೇಳಿದರೆ ಸಿದ್ಧೇಶ್ವರ ಕಂಪನಿಯನ್ನು ಕಮ್ಮಾರ ಬಂಧುಗಳ ಅಂದಿನ ಕಮ್ಮಾರಸಾಲೆಯ ಗಿರಾಕಿಗಳೇ ಸಂಘಟಿಸಿದರು ಎನ್ನಬೇಕು. ಅದಕ್ಕೆ ಸ್ಫೂರ್ತಿಕೊಟ್ಟವರು ಒಬ್ಬ ಗಿರಾಕಿ; ಹೆಸರಿಟ್ಟವರೂ ಅವರೇ; ಸಿದ್ಧೇಶ್ವರದ ಸ್ವಂತ ತಿಜೋರಿಗಳನ್ನು ಮೊದಲುಕೊಂಡವರೂ ಅವರ ರಿಪೇರಿ ಗಿರಾಕಿಗಳೇ.

ಧಾರವಾಡದ ದೊಡ್ಡ ವ್ಯಾಪಾರಿಗಳಾದ ಕೋಟೂರ ಶಾಂತವೀರಪ್ಪನವರು ಕಮ್ಮಾರ ಬಂಧುಗಳಲ್ಲಿ ತಮ್ಮ ತಿಜೋರಿಗಳನ್ನು ದುರಸ್ತಿ ಮಾಡಿಸಿಕೊಂಡವರಲ್ಲಿ ಒಬ್ಬರಾಗಿದ್ದರು. ಅವರಿಗೆ ಇವರ ಕೆಲಸ ಎಷ್ಟು ಮೆಚ್ಚಿಕೆಯಾಯಿತೆಂದರೆ ನೀವೇ ಏಕೆ ತಿಜೋರಿಗಳನ್ನು ಮಾಡಬಾರದೆಂದು ಕೇಳಿದರು. ಕಮ್ಮಾರ ಬಂಧುಗಳ ತಲೆಯಲ್ಲಿಯೂ ಅದೇ ವಿಚಾರ ಸುಳಿಯುತ್ತಿತ್ತು. ಶಾಂತವೀರಪ್ಪನವರು ಅವರಿಗೆ ತಾವೇ ಒಂದು ತಿಜೋರಿಗೆ ಆರ್ಡರು ಕೊಟ್ಟರು. ಕಮ್ಮಾರ ಬಂಧುಗಳ ಕುಲದೇವತೆಯಾದ ಸೊಲ್ಲಾಪುರದ ಸಿದ್ಧರಾಮೇಶ್ವರ ದೇವರ ಚಿತ್ರವನ್ನು ರಿಪೇರಿಮಾಡಿದ ತಿಜೋ

ರಿಗಳಿಗೆ ಹಚ್ಚಿ ಕಳಿಸುತ್ತಿದ್ದದ್ದನ್ನು ನೋಡಿ ಸಿದ್ಧೇಶ್ವರ ಕಂಪನಿಯೆಂಬ ಹೆಸರನ್ನೂ ಶ್ರೀ ಕೋಟೂರರೇ ಸೂಚಿಸಿದರು. ಬೇಕಾದ ಉಕ್ಕಿನ ತಗಡು ಮೊದಲಾದ ಕಚ್ಚಾ ಮಾಲುಗಳನ್ನು ಪೂರೈಸುವ ಅಂಗಡಿಗೆ ತಾವೇ ಜಾಮೀನಾಗಿ ಉದ್ದರಿ ಕೊಡಿಸಿದರು. ಕಮ್ಮಾರ ಬಂಧುಗಳು ಮಿತವ್ಯಯದಿಂದ ಸ್ವಲ್ಪ ಹಣವನ್ನು ಉಳಿಸಿಕೊಂಡಿದ್ದುದು ಮೂಲಧನವಾಯಿತು.

ಅಂತೂ ಸಿದ್ಧೇಶ್ವರರ ಮೊದಲನೇ ತಿಜೋರಿ ೧೯೧೮ರಲ್ಲಿ ಹೊರಬಂದು ಶಾಂತವೀರಪ್ಪನವರ ಧನಲಕ್ಷ್ಮಿಗೆ ಆಶ್ರಯವಾಯಿತು. ಮುಂದಿನ ಎರಡು ತಿಜೋರಿಗಳನ್ನು ರಿಪೇರಿ ಗಿರಾಕಿಗಳಾದ ಹುಬ್ಬಳ್ಳಿಯ ತಾಮ್ರಹಿತ್ತಾಳಿ ವ್ಯಾಪಾರಿಗಳಾದ ದೇವೇಂದ್ರಪ್ಪ ದೇಶಮಾನ್ಯರೂ ಸರಾಫರಾದ ಬಿಕ್ಕಪ್ಪ ರೇವಣಕರರೂ ಆರ್ಡರು ಕೊಟ್ಟು ಮಾಡಿಸಿದರು. ತಿಜೋರಿಗಳಂಥ ಮಹತ್ವದ ವಸ್ತುವನ್ನು "ಗಾಂವಠಿ" ಕಮ್ಮಾರರಿಂದ ಮಾಡಿಸಿಕೊಳ್ಳುವ ಧೈರ್ಯಬರಬೇಕಾದರೆ ಈ ಗಿರಾಕಿಗಳಿಗೆ ಕಮ್ಮಾರ ಬಂಧುಗಳ ನೈಪುಣ್ಯ, ಪ್ರಾಮಾಣಿಕತೆಗಳ ಮೇಲೆ ಎಂಥ ಅಪಾರ ವಿಶ್ವಾಸವಿರಬೇಕೆಂದು ಊಹಿಸಬಹುದು.

ಮೂವರೂ ಬಂಧುಗಳು ಸಿದ್ಧೇಶ್ವರ ಕಂಪನಿಯನ್ನು ಊರ್ಜಿತಕ್ಕೆ ತಂದೇ ತೀರುವೆವೆಂದು ದುಡಿದರು. ಎಲ್ಲ ಕೆಲಸವು ಕೈಯಿಂದಲೇ ಆಗಬೇಕಿತ್ತು. ಯಂತ್ರಸೌಕರ್ಯ ಅವರಿಗೆ ಸಿಗುವಂತಿರಲಿಲ್ಲ. ಮಧ್ಯರಾತ್ರಿಯ ವರೆಗೂ ಶ್ರಮಿಸುವ ಪಾಳಿ ಬರುತ್ತಿತ್ತು. ಅವರಲ್ಲಿ ಬಂಡವಳ ಬಲವಿರಲಿಲ್ಲ. ಬೆವರಿನ ಬಲವೇ ಅವರ ಯಂತ್ರಬಲ; ಮೂವರು ಬಂಧುಗಳ ಎಂದೂ ಕದಡದ ಐಕ್ಯಮತ್ಯವೇ ಬಂಡವಳ. ಅಂದಿನ ಕಠಿನ ದಿನಗಳನ್ನು ಸ್ಮರಿಸಿಕೊಂಡು ನೀಲಕಂಠಪ್ಪನವರು ಇಂದಿಗೂ ಅಭಿಮಾನಪಡುತ್ತಾರೆ. ಆ ಬೆವರು ತಮಗೆ ತುಂಬ ಪಾಠ ಕಲಿಸಿತೆಂದು ಅವರನ್ನುತ್ತಾರೆ. ತಿಜೋರಿ ಹಾಗು ಕಬ್ಬಿಣದ ಇತರ ಫರ್ನಿಚರುಗಳ ತಗಡು ಕತ್ತರಿಸುವದರಿಂದಾರಂಭಿಸಿ ಸಿದ್ಧ ಸರಕಿನ ಮಾರಾಟದ ವರೆಗಿನ ಪ್ರತಿಯೊಂದು ಕೆಲಸವು ತಮಗೆ ಪ್ರತಿಯೊಬ್ಬರಿಗೂ ಕರತಲಾಮಲಕವಾಯಿತು. ಯಾವುದಕ್ಕೂ ಪರಾವಲಂಬನೆಯ ಅಗತ್ಯ ಬೀಳಲಿಲ್ಲೆಂದು ಅವರು ಹೇಳುತ್ತಾರೆ.

ಸ್ವಂತ ವ್ಯವಹಾರ ಪ್ರಾರಂಭಿಸಿದೆವೆಂದು ಚೆನ್ನಪ್ಪನವರು ರೇಲ್ವೇ ನೌಕರಿ ಬಿಡಲಿಲ್ಲ. ಅಲ್ಲಿ ಸಿಗುತ್ತಿದ್ದ ಸಂಬಳದ ಆಕರ್ಷಣೆ ಈಗ ಅವರಿಗೆ ಇತ್ತೆಂದಲ್ಲ. ಆದರೆ ವರ್ಕಶಾಪಿನಲ್ಲಿ ಸಿಗುವ ಅನೇಕ ತರದ ಯಂತ್ರತಂತ್ರಗಳ ಅನುಭವ ಬೇರೆ ಕಡೆ ಸಿಗಬಲ್ಲದೆ? ಸಿದ್ಧೇಶ್ವರ ಸ್ಥಾಪಿಸಲ್ಪಟ್ಟು ಹದಿನೇಳು ವರ್ಷಗಳ ವರೆಗೂ ಅವರು ರೇಲ್ವೆ ನೌಕರಿಯನ್ನು ಬಿಡಲಿಲ್ಲ. ೧೯೩೫ ರಲ್ಲಿ ಅವರು ಕೊನೆಗೆ ಅದಕ್ಕೆ ಶರಣುಹೊಡೆದರು. ಆ ವರ್ಷ ಹಿರಿಯಣ್ಣ ಸಿದ್ದಪ್ಪನವರು ಕೈಲಾಸವಾಸಿಗಳಾದ್ದರಿಂದ ಚೆನ್ನಪ್ಪನವರು ಸಿದ್ಧೇಶ್ವರದ ನೇತೃತ್ವವನ್ನು ವಹಿಸಲೇಬೇಕಾಯಿತು.

ಚೆನ್ನಪ್ಪನವರು ರೇಲ್ವೆಯಲ್ಲಿ ಗಳಿಸಿದ ಅನುಭವವನ್ನು ಸಾರ್ಥಕ ಪಡಿಸಿಕೊಂಡರು. ೧೯೩೩-೩೪ ರ ವರೆಗೂ ಕೈಕೆಲಸದಿಂದ ನಡೆಯುತ್ತಿದ್ದ ಸಿದ್ಧೇಶ್ವರ ಕಾರಖಾನೆಗೆ ಚೆನ್ನಪ್ಪನವರು ಆ ವರ್ಷ ಸ್ವಹಸ್ತದಿಂದ ೫೦ ಟನ್ ಶಕ್ತಿಯ ತಗಡು ಕತ್ತರಿಸುವ ಮತ್ತು ರೋಲರ ಯಂತ್ರಗಳನ್ನು ರಚಿಸಿದರು. ಈಗ ಈ ಕಾರ್ಯಗಳಿಗೆ ಹೊಸ ವಿದ್ಯುತ್‌ಚಾಲಿತ ಜರ್ಮನ್ ಯಂತ್ರಗಳನ್ನು ಹಾಕಲಾಗಿದೆ. ಆದರೆ ಚೆನ್ನಪ್ಪನವರ ಸ್ವಹಸ್ತ ನಿರ್ಮಿತ ಯಂತ್ರಗಳು ೨೨ ವರ್ಷಗಳ ಮೇಲೆ ಇಂದಿಗೂ ಕೆಲಸ ಕೊಡುತ್ತಿವೆ. ಚೆನ್ನಪ್ಪನವರ ಯಂತ್ರವಿದ್ಯೆ ಚಿಲ್ಲರೆ ಮಟ್ಟದ್ದಾಗಿರಲಿಲ್ಲ.

ಈ ಬಂಧುಗಳ ಪ್ರಾಮಾಣಿಕ ಪರಿಶ್ರಮ ಬೇಗನೆ ಫಲದಾಯಕವಾಯಿತು. ಸಿದ್ಧೇಶ್ವರ ತಿಜೋರಿ ಕೊಂಡವರು ಬೇರೆ ತಿಜೋರಿಗೆ ಮೆಚ್ಚುತ್ತಿರಲಿಲ್ಲ. ಕಂಪನಿ ಉತ್ಕರ್ಷಕ್ಕೆ ಬಂದಂತೆ ವಿಶಾಲತರ ಕಾರಖಾನೆ ಬೇಕಾಯಿತು. ೧೯೨೪ ರಲ್ಲಿ ಕಾರಖಾನೆ ಈಗಿನ ಸ್ಥಳಕ್ಕೆ ಬಂತು. ಈ ಪ್ರದೇಶದ ಮನೆಗಳು ದೆವ್ವದ ಮನೆಗಳೆಂದು ಪ್ರಸಿದ್ಧಿ ಬಿದ್ದು ಜನರು ಹೆದರಿ ಮನೆಬಿಟ್ಟು ಹೋಗಿದ್ದರು. ಕಮ್ಮಾರ ಬಂಧುಗಳು ದೆವ್ವಗಳನ್ನು ಲೆಕ್ಕಿಸುವವ

ರಲ್ಲ. ತಾವಿಲ್ಲಿ ಬಂದಂದಿನಿಂದ ಒಂದು ದೆವ್ವವೂ ಮುಖತೋರಿಸಿಲ್ಲೆಂದು ನೀಲಪ್ಪಣ್ಣನವರು ನಸುನಗೆಯಿಂದ ಹೇಳುತ್ತಾರೆ. ಇದೀಗ ಬಂಕಾಪುರ ಚೌಕಿಯಲ್ಲಿ ಹೊಸ ಕಾರಖಾನೆಯನ್ನು ಕಟ್ಟಲಾಗುತ್ತಿದೆ.

ಪ್ರಸಿದ್ಧ ಕಂಪನಿಗಳ ತಿಜೋರಿಗಳಿಗಿಂತ ಸಿದ್ಧೇಶ್ವರದವು ತುಟ್ಟಿಯಾಗಿದ್ದರೂ ಅವೇಕೆ ಜನಪ್ರಿಯವಾಗಿವೆ ? ಸಿದ್ಧೇಶ್ವರದವರು ಹೊಸ ಕಲ್ಪನೆಗಳಿಂದ ತಿಜೋರಿಗಳ ರಚನೆಯನ್ನು ಸುಧಾರಿಸಿದ್ದಾರೆ. ಅವರ ಕೀಲಿಗಳು ಹೆಚ್ಚು ಭದ್ರವಾಗಿವೆ. ಇತರ ತಿಜೋರಿಗಳನ್ನು ಆರು ತಗಡುಗಳಿಂದ ನಿರ್ಮಿಸುತ್ತಿದ್ದರೆ ಇವರು ಮೂರೇ ತಗಡುಗಳಿಂದ ಪೂರೈಸುತ್ತಾರೆ. ಇದರಿಂದ ಸಂದುಗಳು ಕಡಿಮೆಯಾಗಿ ತಿಜೋರಿಗಳಲ್ಲಿ ದುರಸ್ತಿಯ ಅಗತ್ಯ ಉಳಿಯುವದಿಲ್ಲ; ಭದ್ರತೆಯೂ ಹೆಚ್ಚುತ್ತದೆ. ೧೯೩೧ ರಲ್ಲಿ ಹುಬ್ಬಳ್ಳಿಯ ಔದ್ಯೋಗಿಕ ಪ್ರದರ್ಶನದಲ್ಲಿ ಸಿದ್ಧೇಶ್ವರ ತಿಜೋರಿಗಳಿಗೆ ಬಹುಮಾನ ಬಂತು. ಅನಂತರ ಬಳ್ಳಾರಿ ಮೊದಲಾದ ಕಡೆಗಳಲ್ಲಿ ಅಗ್ನಿಸ್ತಂಭಕ (ಫಾಯರ ಪ್ರೂಫ) ಪರೀಕ್ಷೆಯಲ್ಲಿ ಅದು ಉತ್ತೀರ್ಣವಾಯಿತು.

ಸಿದ್ಧೇಶ್ವರದ ಉತ್ಕರ್ಷವನ್ನು ಕೆಲವೇ ಅಂಕೆಸಂಖ್ಯೆಗಳಿಂದ ಸಿದ್ಧಪಡಿಸಬಹುದು. ಕೈಯಲ್ಲಿ ಏನೂ ಇಲ್ಲದೆ ಪ್ರಾರಂಭವಾದ ಅದರ ಬಂಡವಳ ಇಂದು ರೂ. ೬ ಲಕ್ಷಕ್ಕೇರಿದೆ. ಮೊದಲು ಕೇವಲ ತಿಜೋರಿಗಳನ್ನು ತಯಾರಿಸುತ್ತಿದ್ದರೆ ಈಗ ಸ್ಟ್ರಾಂಗ್ ರೂಂ, ಖುರ್ಚಿ, ಮೇಜು, ಕಪಾಟು ಮೊದಲಾದ ಬಹುವಿಧ ಕಬ್ಬಿಣದ ಫರ್ನಿಚರುಗಳು ಹೊರಬೀಳುತ್ತಿವೆ. ಪ್ರಾರಂಭದಲ್ಲಿ ವರ್ಷಕ್ಕೆ ೮–೧೦ ತಿಜೋರಿ ತಯಾರಾಗುವಲ್ಲಿ ಇಂದು ೪೦೦ ತಿಜೋರಿಗಳನ್ನೊಳಗೊಂಡು ಒಟ್ಟು ೩,೨೦೦ ರಷ್ಟು ವಿವಿಧ ವಸ್ತುಗಳು ಸಿದ್ಧವಾಗುತ್ತವೆ. ಮೊದಲು ತಿಜೋರಿ ಒಂದಕ್ಕೆ ಬಹಳವಾದರೆ ರೂ. ೧೫೦ ಇದ್ದರೆ ಈಗ ರೂ. ೫,೦೦೦ ವರೆಗಿನವೂ ಇವೆ. ೪ ಕೆಲಸಗಾರರಿದ್ದಲ್ಲಿ ಇಂದು ೨೫೦ ಕೆಲಸಗಾರರಿದ್ದಾರೆ. ಹೈದರಾಬಾದ, ಕೊಲ್ಹಾಪುರ, ಹುಬ್ಬಳ್ಳಿಗಳಲ್ಲಿ ಅದರ ಶಾಖಾ ಕಚೇರಿಗಳೂ ದಾವಣಗೆರೆ, ತಿಪಟೂರು, ಸಾಂಗಲಿ, ಶಿರಸಿಗಳಲ್ಲಿ ಏಜನ್ಸಿಗಳೂ ಇವೆ. ಇಂದು ಗುಜರಾಥದಿಂದಾರಂಭಿಸಿ ಕೇರಳದ ವರೆಗೆ ಇಡೀ ಪಶ್ಚಿಮ ಭಾರತದಲ್ಲಿ ಸಿದ್ಧೇಶ್ವರದ ಸಂಪ್ರೀತ ಗ್ರಾಹಕರಿದ್ದಾರೆ. ಈ ಗ್ರಾಹಕವರ್ಗವನ್ನು ಗ್ರಾಹಕರೇ ಕಟ್ಟಿದ್ದಾರೆನ್ನಬಹುದು.

ಸ್ವತಃ ಕೆಲಸಗಾರರಾದ ಸಿದ್ಧೇಶ್ವರದ ಒಡೆಯರು ಜರ್ಮನಿಯ ಕ್ರುಪ್ಸರಂತೆ ತಮ್ಮ ಕಾರಖಾನೆಗೆ ಬೇಕಾದ ಯಂತ್ರಚಾಲಕ ವರ್ಗವನ್ನು ತಾವೇ ತರಬೇತು ಮಾಡುತ್ತಿದ್ದಾರೆ. ಹುಡುಗರನ್ನು ಕೆಲಸಕ್ಕೆ ತೆಗೆದುಕೊಂಡು ಅವರಿಗೆ ಕೆಲಸ ಕಲಿಸಲಾಗುತ್ತದೆ. ಇಲ್ಲಿ ಕಲಿತ ಕೆಲವರು ಸ್ವಂತ ಕಾರಖಾನೆಗಳನ್ನು ಕಟ್ಟಿಕೊಂಡದ್ದಿದೆ. ಸಿದ್ಧೇಶ್ವರದವರ ಸಂಬಳ ಪ್ರಮಾಣ ಉಳಿದೆಡೆಗಿಂತ ಹೆಚ್ಚಾಗಿರುವದರಿಂದ ( ದಿನಕ್ಕೆ ೫ ರೂಪಾಯಿ ವರೆಗೂ ಸಂಬಳ ಪಡೆಯುವವರಿದ್ದಾರೆ ) ಅವರಿಗೆ ಕೂಲಿಕಾರ ಅಸಂತುಷ್ಟಿ ಎಂದೂ ಎದುರಾಗಿಲ್ಲ. ಔಷಧ ಸಹಾಯ, ಪ್ರಾವಿಡೆಂಟ ಫಂಡ್, ವಿಮಾ ಮೊದಲಾದ ಸೌಕರ್ಯಗಳನ್ನು ಅವರಿಗೆ ಒದಗಿಸಲಾಗಿದ್ದೆ

ವ್ಯಾಪಾರಿ ಸ್ಪರ್ಧೆ ಮೊದಲಾದ ಸುಖ ಕಷ್ಟಗಳ ಬಗ್ಗೆ ನಾನು ಶ್ರೀ ನೀಲಕಂಠಪ್ಪನವರನ್ನು ವಿಚಾರಿಸಿದೆ. " ಸ್ಪರ್ಧೆಯ ಅಂಜಿಕೆಯೇ ನಮಗಿಲ್ಲ. ಬಂದ ಆರ್ಡರುಗಳನ್ನೇ ಪೂರೈಸಲು ಸಾಧ್ಯವಾಗುವದಿಲ್ಲ. ಕಚ್ಚಾ ಮಾಲಿನ ಕೊರತೆಯದೇ ದೊಡ್ಡ ಸಮಸ್ಯೆ. ವರ್ಷಕ್ಕೆ ನಾವು ಉಪಯೋಗಿಸುವ ೨೨೦ ಟನ್ ಉಕ್ಕು ಕಬ್ಬಿಣಗಳಲ್ಲಿ ೭೮ ಟನ್ ಮಾತ್ರ ಸರಕಾರಿ ಕೋಟಾದಿಂದ ಬರುತ್ತದೆ. ಕೋಟಾ ಹೆಚ್ಚಿಸಲು ಕಳಿಸಿದ ಅರ್ಜಿಗಳೆಲ್ಲ ನಿರರ್ಥಕವಾಗುತ್ತಿವೆ. ಇದಲ್ಲದಿದ್ದರೆ ಕಾರಖಾನೆ ಇನ್ನಷ್ಟು ಬೆಳೆಯಬಹುದಾಗಿತ್ತು " ಎಂದರವರು.

ಚಿಕ್ಕ ಮತ್ತು ಮಧ್ಯಮ ಉದ್ದಿಮೆಗಳಿಗೆ ಪ್ರೋತ್ಸಾಹ ನೀಡುವೆನೆಂಬ ಸರಕಾರದ ಈ ವರ್ತನೆ ತುಸು ವಿಚಿತ್ರವಾಗಿಲ್ಲವೆ?

ಸಿದ್ಧೇಶ್ವರದ ಸಾಹಸದಲ್ಲಿ ನಿಮ್ಮ ಸಿಹಿ-ಕಹಿ

ನೆನಪುಗಳೇನು? ಎಂದು ಕೇಳಿದರೆ ನೀಲಕಂಠಪ್ಪನವರು, "ನೆನಪುಗಳೆಲ್ಲ ಸಿಹಿಯೇ ಇವೆ. ಯತ್ನ ಪೂರ್ವಕ, ಪ್ರಾಮಾಣಿಕತೆಯಿಂದ ದುಡಿದರೆ ಬಸವಣ್ಣನವರಂದಂತೆ 'ಕಾಯಕವೇ ಕೈಲಾಸ' ವಾಗುವದೆಂಬುದು ನನ್ನ ಸವಿಯಾದ ಅನುಭವ. ಕಹಿ ನೆನಪೆಂದರೆ ಒಂದೇ. ನಮ್ಮ ಇಬ್ಬರು ಅಣ್ಣಂದಿರು ನಮ್ಮನ್ನುಬಿಟ್ಟು ಹೋದರೆಂಬದೇ ಅದು." (ಸಿದ್ಧಪ್ಪನವರು ೧೯೩೫ ರಲ್ಲಿ, ಚೆನ್ನಪ್ಪನವರು ೧೯೫೩ ರಲ್ಲಿ ಕೈಲಾಸವಾಸಿಗಳಾದರು) ನೀಲಕಂಠಪ್ಪನವರ ಸರಳ ವೇಷಭೂಷೆ, ಋಜುವಾದ, ನಿರಹಂಕಾರಿ ವರ್ತನೆ 'ಕಾಯಕದ ಕೈಲಾಸ' ಕ್ಕೆ ತಕ್ಕಂತಿದೆ.

ಅವರಿಗೆ ವಯಸ್ಸು ೫೫ ಮಿಕ್ಕಿದೆ. ಆದರೂ ಅವರು ಶಕ್ತರಾಗಿಯೇ ಇದ್ದಾರೆ. ದಿವಂಗತ ಸಿದ್ದಪ್ಪ ಹಾಗು ಚೆನ್ನಪ್ಪನವರ ಮೂವರು ಮಕ್ಕಳು ಹೈಸ್ಕೂಲು ಮುಗಿಸಿದವರು ಆಗಲೇ ಸಿದ್ಧೇಶ್ವರದ ವಿವಿಧ ವ್ಯವಹಾರಗಳಲ್ಲಿ ಅನುಭವ ಪಡೆಯುತ್ತಿದ್ದಾರೆ. ನೀಲಪ್ಪನವರ ಮಕ್ಕಳಿನ್ನೂ ಸಾಲೆಯ ವಯಸ್ಸಿನವರು. ಈ ಎರಡನೆ ಪೀಳಿಗೆ ಸಿದ್ಧೇಶ್ವರದ ಮುಂದಿನ ಕರ್ಣಧಾರರು.

ಸಿದ್ಧೇಶ್ವರ ಈಗ ಈ ಮೂವರು ಬಂಧುಗಳ ಕುಟುಂಬಗಳ ಪಾಲುಗಾರಿಕೆಯಿಂದ ನಡೆಯುತ್ತಿದ್ದರೂ ಮೂರು ಕುಟುಂಬಗಳು ಇನ್ನೂ ಒಂದಾಗಿಯೇ ಇದ್ದು ಸಿದ್ಧಪ್ಪನವರ ಕಾಲದ ಒಗ್ಗಟ್ಟನ್ನು ಅನೂಚಾನವಾಗಿ ಕಾಯ್ದುಕೊಂಡಿವೆ. ಈ ಐಕಮತ್ಯವೇ ಸಿದ್ಧೇಶ್ವರವನ್ನು ಎತ್ತಿ ಹಿಡಿದಿರುವ ಕಬ್ಬಿಣದ ಕಂಬವಾಗಿದೆ.

ಹೀಗಿದೆ ೩೮ ವರ್ಷಗಳ ಹಿಂದೆ ಮೂವರು ಅಣ್ಣತಮ್ಮಂದಿರು ಬರಿಗೈಯಿಂದ ಪ್ರಾರಂಭಿಸಿ ಬೆಳಸಿದ ಸಿದ್ಧೇಶ್ವರದ ಕಥೆ.



ಬ್ರಿಟಿಶ ಸಿಂಹದ ಬಾಲ ತಿರುವಿದ ಅಭಿಮನ್ಯು

# ಕರ್ನಲ ನಾಸರ ಯಾರು?

ಇಷ್ಟು ಕಡಿಮೆ ವಯಸ್ಸಿನಲ್ಲಿ, ಇಷ್ಟು ದುರ್ಬಲ ದೇಶದ ಪ್ರತಿನಿಧಿಯೊಬ್ಬನು ಜಗತ್ತಿನ ಪ್ರಬಲರಲ್ಲಿ ಪ್ರಬಲ ರಾಷ್ಟ್ರಗಳನ್ನು ಇಷ್ಟು ದೊಡ್ಡ ಗೊಂದಲದಲ್ಲಿ ಕೆಡಹಿದ್ದು ಇತಿಹಾಸದಲ್ಲೇ ವಿರಳವೆನ್ನಬಹುದು. ಇಜಿಪ್ತದ ಅಧ್ಯಕ್ಷ ಗಮಾಲ ಅಬ್ದುಲ್ ನಾಸರರ ವಯಸ್ಸು ಬರಿ ೩೮; ಅವರ ದೇಶದ ಜನಸಂಖ್ಯೆ ಎರಡು ಕೋಟಿಗಿಂತ ಕಡಿಮೆ; ಅದರ ಪುರಾತನ ಇತಿಹಾಸ ಉಜ್ವಲವಾಗಿದ್ದರೂ ಹಲವು ಶತಮಾನಗಳಿಂದ ಅದು ಅತಿ ದುರ್ಬಲ ರಾಜ್ಯವಾಗಿ ಪರಕೀಯರ ಸೂತ್ರದ ಗೊಂಬೆಯಾಗಿತ್ತು. ಇಂಥ ದೇಶವಿಂದು ಸುಯೇಜ ಕಾಲುವೆಯನ್ನು ರಾಷ್ಟ್ರೀಕರಿಸಿ ಬ್ರಿಟಿಶ ಸಿಂಹದ ಬಾಲ ತಿರುವಿ, ಫ್ರೆಂಚ ಗಿಡುಗನ ರೆಕ್ಕೆ ಹರಿದು ಜಗತ್ತನ್ನು ಯುದ್ಧ-ಶಾಂತಿಗಳ ಸೀಮಾರೇಖೆಯ ಮೇಲೆ ನಿಲ್ಲಿಸಿದ್ದರೆ ಅದು ನಾಸರರ ಕೈವಾಡ.

ನಾಸರರ ಕೃತಿಗಳು ಕಟ್ಟಕಡೆಗೆ ಅವರ ದೇಶಕ್ಕೆ ಲಾಭ ತರುವವೋ ದುರ್ದೈವಕ್ಕೆ ಬಾಗಿಲು ತೆರೆಯುವವೋ ಹೇಳಲಾಸಲ್ಲ. ಆದರೆ ಅವರ ಹಿಂದೆ ಇಂದು ಇಜಿಪ್ತ ರಾಷ್ಟ್ರ ಹಿಂದೆಂದೂ ಇಲ್ಲದಷ್ಟು ಒಗ್ಗಟ್ಟಾಗಿದೆ. ತನ್ನ ಹಕ್ಕಿನ ರಕ್ಷಣೆಗಾಗಿ ತಮ್ಮ ದೇಶ "ಕೊನೆಯ ನೆತ್ತರ ಹನಿ ತೀರುವ ವರೆಗೂ" ಹೋರುವದೆಂದು ಅವರು ವೀರಕಹಳೆ ಊದಿದ್ದಾರೆ. ಈ ಹೆಗ್ಗಳಿಕೆಯ ವಾಸ್ತವಿಕತೆಯ ಬಗ್ಗೆ ಸಂಶಯಪಡಬೇಕಾದ್ದಿಲ್ಲ.

ನಾಲ್ಕೇ ವರ್ಷಗಳ ಹಿಂದೆ ಅಜ್ಞಾತ ಕಾಲ್ದಳದ ಅಧಿಕಾರಿಯಾಗಿದ್ದರು ನಾಸರರು. ಅವರು ಈ ನಾಲ್ಕು ವರ್ಷಗಳಲ್ಲಿ ಮಾಡಿದ್ದನ್ನು ನೋಡಿರಿ: ಅವರು ಒಂದು ಕ್ರಾಂತಿಯೆಬ್ಬಿಸಿದರು; ಒಬ್ಬ ಅರಸನನ್ನು ದೇಶಾಂತರ ಅಟ್ಟಿದರು; ಒಬ್ಬ ಅಧ್ಯಕ್ಷನನ್ನು ಗದ್ದುಗೆಗೇರಿಸಿದರು, ಮತ್ತು ಅವನನ್ನು ಕೆಳಗುರುಳಿಸಿ ಅಜ್ಞಾತವಾಸಕ್ಕೆ ಕಳಿಸಿ

ದರು; ತಮ್ಮ ದೇಶದಲ್ಲಿ ಹಲ ದಶಕಗಳಿಂದ ತಳವೂರಿದ್ದ ಬ್ರಿಟಿಶ ಸೈನ್ಯವನ್ನು ಹೊರಗೆ ಹಾಕಿದರು; ಉತ್ತರ ಆಫ್ರಿಕದ ಫ್ರೆಂಚ ಸಾಮ್ರಾಜ್ಯದಲ್ಲಿ ಕಲಮಲ ಎಬ್ಬಿಸಿದರು; ಕಡೆಗೀಗ ಸುಯೇಜ ಕಾಲುವೆಯನ್ನು ವಶಪಡಿಸಿಕೊಂಡು ಜಗತ್ತಿನ ಅತಿ ದೊಡ್ಡ ಜಲಮಾರ್ಗವನ್ನು ವಿದೇಶೀಯರ ಪ್ರಭುತ್ವದಿಂದ ಮುಕ್ತಮಾಡಿ ಪಾಶ್ಚಾತ್ಯ ರಾಷ್ಟ್ರಗಳನ್ನು ಶಂಖವಾದ್ಯ ಮಾಡಹಚ್ಚಿದರು.

ನಾಸರರು ಈ ಚಿಕ್ಕ ಅವಧಿಯಲ್ಲಿ ಬ್ರಿಟಿಶ ಸಾಮ್ರಾಜ್ಯವಾದಿಗಳಿಗೆ "ನೈಲ ತೀರದ ಹಿಟ್ಲರ" ರಾಗಿದ್ದಾರೆ; ಇಸ್ರೇಲದವರಿಗೆ "ದರೋಡೆಗಾರ" ನೆನಿಸಿದ್ದಾರೆ; ಫ್ರೆಂಚರಿಗೆ ''ಹುಟ್ಟಾ ಸುಳ್ಳುಗಾರ" ರಾಗಿದ್ದಾರೆ; ಅರಬರಿಗೆ ಮಾತ್ರ "ಜನೋದ್ಧಾರಕ" ರಾಗಿದ್ದಾರೆ.

೩೮ ವರ್ಷದ ನಾಸರರು ಅಲೆಗ್ಝಾಂಡ್ರಿಯದ ಒಬ್ಬ ಅಸಿಸ್ಟಂಟ ಪೋಸ್ಟ್‌ಮಾಸ್ತರನ ಮಗ. ಪ್ರಾರಂಭದಿಂದಲೂ ನಾಸರ ಸ್ವಲ್ಪ ಕಿಡಿಗೇಡಿ. ಒಮ್ಮೆ ಮನೆಯ ಹಿತ್ತಿಲಲ್ಲಿ ಅಗೆಯಬೇಡೆಂದು ತಂದೆ ಅಪ್ಪಣೆ ಕೊಟ್ಟಾಗ ಬಾಲಕ ನಾಸರ್ ತಂದೆಯನ್ನು ಕೆಡವಲು ಖೆಡ್ಡಾ ತೋಡಿದ್ದನಂತೆ! ರಾಜಕೀಯ ಸಭೆ ಮೆರವಣಿಗೆಗಳಲ್ಲಿ ಭಾಗ ವಹಿಸುವದು, ಕಠೋರ ವೃತ್ತಿಯ ಮಾಸ್ತರರ ವಿರುದ ವಿದ್ಯಾರ್ಥಿಗಳನ್ನು ಸಂಘಟಿಸುವದು, ಇಂಥ ''ಉಪದ್ವ್ಯಾಪ" ಗಳನ್ನು ಅವರು ನಡೆಸುತ್ತಿದ್ದರು. ರಾಷ್ಟ್ರೀಯ ಪಕ್ಷದಲ್ಲಿ ಬ್ರಿಟಿಶರ ವಿರುದ್ಧ ಬೀದಿಯ ಕಾಳಗಗಳಲ್ಲಿ ಅವರು ಹೋರಾಡಿದ್ದುಂಟು. ಈ "ಪೀಡಾ ಹುಡುಗ" ನನ್ನು ದಾರಿಗೆ ತರಲು ಸೈನಿಕ ಶಿಕ್ಷಣವೊಂದೇ ಉಪಾಯವೆಂದು ತಂದೆ ಮಿಲಿಟರಿ ವಿದ್ಯಾಲಯಕ್ಕೆ ಕಳಿಸಿದರು. ೨೦ನೇ ವಯಸ್ಸಿನಲ್ಲಿ ಇವರು ಮಿಲಿಟರಿ ಪದವಿ ಸಂಪಾದಿಸಿದರು.

ಅವರ ಬಂಡುಗಾರ ಪ್ರವೃತ್ತಿ ಅಲ್ಲಿಯೂ ತಲೆಯೆತ್ತಿತು. ಮೇಲಧಿಕಾರಿಗಳು ದುಷ್ಟರಾಗಿದ್ದಲ್ಲಿ ಅವರ ವಿರುದ್ಧ ಕಿರಿ ಅಧಿಕಾರಿಗಳನ್ನು ಸಂಘಟಿಸಿದರು. ಇದೇ ಮುಂದೆ ಅವರನ್ನು ಅಧಿಕಾರಕ್ಕೆ ತಂದ "ಸ್ವತಂತ್ರ ಸೈನ್ಯಾಧಿಕಾರಿಗಳ ಚಳವಳಿ" ಯ ಬೀಜಾರೋಪಣ ಮಾಡಿತು.

ಎರಡನೇ ಮಹಾಯುದ್ಧದ ಮತ್ತು ಅನಂತರದ ಘಟನೆಗಳು ಅವರ ರಾಷ್ಟ್ರೀಯ ಸ್ವಾಭಿಮಾನಕ್ಕೆ ಬಲವಾದ ಪೆಟ್ಟುಕೊಟ್ಟು ಅವರನ್ನು ಕೊನೆಗೊಮ್ಮೆ ಬಹಿರಂಗ ಬಂಡಾಯಕ್ಕೆ ಪ್ರೇರಿಸಿದವು. ಎರಡನೇ ಮಹಾಯುದ್ಧದಲ್ಲಿ ಇಜಿಪ್ತ ಹೆಸರಿಗೇನೋ ತಟಸ್ಥವಾಗಿತ್ತು. ಆದರೆ ರೊಮೆಲ್ಲನ ಜರ್ಮನ್ ಸೈನ್ಯವು ಉತ್ತರ ಆಫ್ರಿಕೆಯಲ್ಲಿ ಮಿತ್ರರನ್ನು ಸೋಲಿಸುತ್ತ ಇಜಿಪ್ತದ ಗಡಿಗೆ ಬಂದಾಗ, ಸುಯೇಜ ಮೊದಲಾದೆಡೆ ಇದ್ದ ಬ್ರಿಟಿಶ "ರಕ್ಷಕ" ಸೈನ್ಯವು ಅರಸ ಫರೂಕರ ಅರಮನೆಯ ಮುಂದೆ ಟ್ಯಾಂಕುಗಳನ್ನು ತಂದು ನಿಲ್ಲಿಸಿತು. ಆಗಿದ್ದ ಮಂತ್ರಿಮಂಡಲವನ್ನು ಕಿತ್ತು ಹಾಕಿ ಬ್ರಿಟಿಶಪರವಾದ ಮಂತ್ರಿಮಂಡಲ ಸ್ಥಾಪಿಸಲು, ಫರೂಕರು ಬ್ರಿಟಿಶರ ಬಂದೂಕಿಗೆ ಹೆದರಿ ನಿರುಪಾಯರಾಗಿ ಒಪ್ಪಿದರು. ಈ ರಾಷ್ಟ್ರೀಯ ಅವಮಾನದ ವಾರ್ತೆ ನಾಸರರ ಹೃದಯದಲ್ಲಿ ಶಲ್ಯದಂತೆ ನಟ್ಟಿತು. ಆಗಲೇ ಅವರು ಇಜಿಪ್ತದಿಂದ ಬ್ರಿಟಿಶರನ್ನು ಹೊರದೂಡುವ ಮತ್ತು ಈ ಅವಮಾನದಲ್ಲಿ ನಿರ್ಲಜ್ಜೆಯಿಂದ ಸಹಕರಿಸಿದ ಫರೂಕ ಮತ್ತು ನಾಹಸಪಾಶಾರನ್ನು ಅಧಿಕಾರದಿಂದ ತಳ್ಳುವ ಪ್ರತಿಜ್ಞೆ ತೊಟ್ಟರು.

ಯುದ್ಧಾನಂತರದಲ್ಲಿ ಅರಬ ಜಗತ್ತಿನ ದೇಹದಲ್ಲಿ ಎದ್ದ ಬೊಕ್ಕೆಯಂತೆ ಇಸ್ರೇಲದ ಸ್ಥಾಪನೆ ಪಾಶ್ಚಾತ್ಯ ರಾಷ್ಟ್ರಗಳ ಬೆಂಬಲದಿಂದಾದಾಗ ನಾಸರರ ಪ್ರತಿಜ್ಞೆ ಮತ್ತೂ ದೃಢವಾಯಿತು. ಈ ಕ್ಷುಲ್ಲಕ ಇಸ್ರೇಲವು ಇಜಿಪ್ತವನ್ನೊಳಗೊಂಡು ಅಖಿಲ ಅರಬರ ಸೈನ್ಯಗಳನ್ನು ಮಣ್ಣುಮುಕ್ಕಿಸಿದ್ದರಿಂದಂತೂ ಅವರ ದೇಶಾಭಿಮಾನ ಸಹಿಸಲಾರದ ಕ್ಲೇಶವನ್ನುಂಡಿತು. ಈ ಸೋಲಿಗೆ ಮತ್ತೇನೂ ಕಾರಣವಾಗಿರದೆ ಇಜಿಪ್ತದ ರಾಜಕಾರಣಿ ಮತ್ತು ಸರಕಾರಿ ಅಧಿಕಾರಿಗಳ ದೇಶದ್ರೋಹಿ ಲಂಚಗುಳಿತನವೇ ಕಾರಣವಾಗಿತ್ತೆಂದು ಅವರು ಕಂಡುಕೊಂಡರು. ಅಧಿಕಾರಿ

ಗಳು ಹಣವನ್ನು ಎತ್ತಿಹಾಕಿ ಸೈನ್ಯಕ್ಕೆ ನಿಷ್ಪ್ರಯೋಜಕ ಶಸ್ತ್ರಾಸ್ತ್ರಗಳ ಪೂರೈಕೆ ಕಳಿಸುತ್ತಿದ್ದರು. ಇಸ್ರೇಲ ಗಡಿಯಲ್ಲಿ ಹೋರಾಡಿದ ಇಜಿಪ್ತದ ಸೈನ್ಯದಲ್ಲಿದ್ದು ಹಲವು ಕಲಿತನದ ಕಾಳಗಗಳ ನೇತೃತ್ವ ವಹಿಸಿದ ನಾಸರರಿಗೆ ಈ ಸೋಲಿನ ಗುಟ್ಟೆಲ್ಲ ಗೊತ್ತಿತ್ತು. ಈ ಅವಮಾನವು ಅವರ ಮನಸ್ಸನ್ನು ಕೊನೆಗೊಮ್ಮೆ ಗಟ್ಟಿಮಾಡಿತು. ಅವರು ಕೈರೋಕ್ಕೆ ಮರಳಿ ಹಳೆಯ ಕೊಳೆತ ವ್ಯವಸ್ಥೆಯನ್ನು ಕೊಚ್ಚಿ ಹಾಕುವ ಒಳಸಂಚನ್ನು ಯೋಜಿಸಿದರು. ಅವರ "ಸ್ವತಂತ್ರ ಸೈನ್ಯಾಧಿಕಾರಿ" ಗುಪ್ತಸಂಘದ ೮೦೦ ಸದಸ್ಯರು ಜುಲೈ ೨೨, ೧೯೫೨ ರಂದು ಕ್ರಾಂತಿಯಬ್ಬಿಸಿದರು. ಫರೂಕರು ದೇಶಭ್ರಷ್ಟರಾದರು; ನಾಹಸ ಪಾಶಾರು ಸ್ಥಾನಬದ್ಧರಾದರು.

ಚಳವಳಿಯ ನಾಯಕತ್ವ ಹೆಸರಿಗೆ ಜನರಲ್ ಮಹಮ್ಮದ ನಜೀಬರಿಗೆ ಒಪ್ಪಿಸಲ್ಪಟ್ಟಿದ್ದರೂ ನಿಜವಾಗಿ ಹಿನ್ನೆಲೆಯಲ್ಲಿದ್ದು ಆಳುತ್ತಿದ್ದವರು ನಾಸರರೇ. ನಜೀಬರು ನಿಜವಾದ ಸರ್ವಾಧಿಕಾರಿಯಾಗಲು ಹವಣಿಸಿ ಪ್ರತಿಗಾಮಿ "ಮುಸ್ಲಿಂ ಬಾಂಧವ್ಯ" ದೊಡನೆ ಒಳಸಂಚು ನಡೆಸಲೆಳಸಿ

## ನಾಸರರಿಗೆ ಹಿಂಸೆಯ ಹುಚ್ಚು

ಕರ್ನಲ್ ನಾಸರರು ಹುಚ್ಚು ಧೈರ್ಯದ ಕ್ರೂರ ಕ್ರಾಂತಿಕಾರಿಯೆಂದು ಪಾಶ್ಚಾತ್ಯರ ಪ್ರಚಾರದಿಂದ ಅನಿಸಿದರೂ ಅವರು ನಿಜವಾಗಿ ದಯಾಪರ ವ್ಯಕ್ತಿ. ಅರಸ ಫರೂಕರನ್ನು ಗಲ್ಲಿಗೇರಿಸಬೇಕೆಂದು ಕೆಲ ಕ್ರಾಂತಿಕಾರರು ೧೯೫೨ ರಲ್ಲಿ ಕೂಗೆಬ್ಬಿಸಿದಾಗ ನಾಸರರೇ ಅಡ್ಡಬಂದು ಫರೂಕರ ತಲೆ ಉಳಿಸಿದರು.

ನಾಸರರ ಆತ್ಮಕಥೆಯಾದ "ಕ್ರಾಂತಿಯ ತತ್ವಜ್ಞಾನ"ದಲ್ಲಿ ಅವರು ತಮಗೆ ಹಿಂಸೆಯಲ್ಲಿದ್ದ ವಿಶ್ವಾಸ ಹೇಗೆ ಹಾರಿಹೋಯಿತೆಂದು ಹೃದಯಸ್ಪರ್ಶಿಯಾಗಿ ಹೀಗೆ ಬಣ್ಣಿಸಿದ್ದಾರೆ:

"ಆಗ ದೇಶದ ಪ್ರಗತಿಗೆ ಮುಖ್ಯವಾಗಿ ಅಡ್ಡಿ ಬರುವವರೆಂದು ನಾನೆಣಿಸಿದ ಹಲವು ವ್ಯಕ್ತಿಗಳನ್ನು ಕೊಲೆ ಮಾಡುವದು ದೇಶೋದ್ಧಾರಕ್ಕೆ ಅತ್ಯಗತ್ಯವೆಂದು ನನ್ನ ಕಲ್ಪನೆಯಾಗಿತ್ತು. ಅರಸನನ್ನೂ ನಾವು ಪವಿತ್ರವೆಂದು ಭಾವಿಸಿದ್ದ ವಿಷಯಗಳನ್ನು ತುಚ್ಛೀಕರಿಸುತ್ತಿದ್ದ ಅವನ ಪರಿವಾರದ ಕೆಲವರನ್ನೂ ಕೊಲೆಮಾಡಿದರೆ ಹೇಗೆ? ಎಂದು ನಾನು ಯೋಚಿಸುತ್ತಿದ್ದೆ. ಹೀಗೆ ವಿಚಾರಿಸುತ್ತಿದ್ದವನು ನಾನೊಬ್ಬನೇ ಅಲ್ಲ. ನಾವು ಸೇರಿ ವಿಚಾರಿಸತೊಡಗಿದಾಗ ನಮ್ಮ ಯೋಚನೆಗಳು ಯೋಜನೆಗಳಾಗಿ ಮಾರ್ಪಡತೊಡಗಿದವು.

ಒಂದು ರಾತ್ರಿ ನಡೆದ ಘಟನೆಗಳು ನನ್ನ ಕನಸುಗಳ ದಿಶೆಯನ್ನೇ ಬದಲಿಸಿದವು. ನಾವು ಒಬ್ಬ ವ್ಯಕ್ತಿಯನ್ನಾರಿಸಿಕೊಂಡು ಅವನು ಭೂಮಿಯಲ್ಲಿ ಉಳಿಯಬಾರದೆಂದು ತೀರ್ಮಾನಿಸಿದೆವು. ಅವನು ರಾತ್ರಿ ಮನೆಗೆ ಮರಳುತ್ತಿರುವಾಗ ಅವನನ್ನು ಗುಂಡಿಕ್ಕಿ ಕೊಲ್ಲಬೇಕೆಂದಾಯಿತು. ನಾವು ವಿವರವಾಗಿ ಯೋಜನೆ ಹಾಕಿದೆವು.

ನಾನು ಅಭಿಯೋಗ ಮಾಡುವ ಗುಂಪಿನೊಡನೆ ಆ ರಾತ್ರಿ ಹೊರಟೆ. ಎಲ್ಲವೂ ನಾವು ಊಹಿಸಿದಂತೆಯೇ ಆಯಿತು. ಯಾವ ವಿಘ್ನವೂ ಒದಗಲಿಲ್ಲ. ಗೊತ್ತುಪಡಿಸಿಕೊಂಡ ಮನುಷ್ಯ ಬಂದೊಡನೆ ಅವನ ಕಡೆ ಗುಂಡುಗಳು ಹಾರಿದವು. ಅನಂತರ ಯೋಜಿಸಿದಂತೆ ನಾನು ಕಾರು ಹತ್ತಿ ಹೊರಟೆ.

ಆದರೆ ಅಷ್ಟರಲ್ಲಿ ಒಮ್ಮೆಲೇ ನನ್ನ ಕಿವಿಯಲ್ಲಿ ಗೋಳಾಟದ ಧ್ವನಿ ರಣರಣಿಸತೊಡಗಿತು. ಹೆಂಗಸೊಬ್ಬಳ ಅಳು, ಮಗುವಿನ ಚೀರಾಟ, ತ್ರಾಹಿ ತ್ರಾಹಿ ಎಂಬ ಕೂಗು.

ನಾನು ಉತ್ತೇಜಿತ ಚಿತ್ತದಿಂದ ಕಾರಿನಲ್ಲಿ ಧಾವಿಸಿದೆ. ಆದರೆ ವಿಚಿತ್ರ. ಆ ಕೂಗು, ಗೋಳಾಟ, ತ್ರಾಹಿ ತ್ರಾಹಿ ನನ್ನ ಕಿವಿಯಲ್ಲಿ ಧ್ವನಿಸುತ್ತಲೇ ಹೋಯಿತು. ಬಹು ದೂರ

ದಾಗ, ಅವರನ್ನು ಅಧಿಕಾರದಿಂದ ತಳ್ಳಿ "ಮುಸ್ಲಿಂ ಬಾಂಧವ್ಯ"ವನ್ನು ಹಣಿದು ತಾವೇ ನೇರವಾಗಿ ಅಧಿಕಾರ ವಹಿಸಿಕೊಂಡರು.

ನಾಸರರು ಅಧಿಕಾರಕ್ಕೆ ಬಂದ ಈ ನಾಲ್ಕು ವರ್ಷಗಳಲ್ಲಿ ಅವರು ಸಾಧಿಸಿದಂಥ ಕಾರ್ಯವನ್ನು ಮಧ್ಯಪೂರ್ವದ ಯಾವ ರಾಜಕಾರಣಿಯೂ ಅನೇಕ ಶತಮಾನಗಳಿಂದ ಸಾಧಿಸಿಲ್ಲ. ರಾಜಕಾರಣದಿಂದ ಲಾಭಹೊಡೆದು ಕೋಟ್ಯಂತರ ರೂಪಾಯಿ ಕೂಡಿಹಾಕುತ್ತಿದ್ದ ಲಾಭಬಡಕರನ್ನೂ ಅವರ ಬಲೆಗಳನ್ನೂ ನಾಸರರು ಪೂರ್ತಿಯಾಗಿ ನಿಗ್ರಹಿಸಿದರು. ನಾಲ್ಕು ಸಾವಿರ ವರ್ಷಗಳಿಂದ ಜಮೀನ್ದಾರರ ಕಾಲಕೆಳಗೆ ನಜುಗುಜ್ಜಾಗುತ್ತ ಬಂದ ರೈತರಿಗೆ ಅವರು ಭೂಮಿಯನ್ನು ಹಂಚಿ ಪ್ರತಿಗಾಮಿ ರಾಜಕಾರಣಿಗಳ ಪೋಷಕರಾದ ಜಮೀನ್ದಾರರನ್ನು ಬಗ್ಗುಬಡಿದರು. ಜಾತೀಯ ರಾಜಕಾರಣದ ಬಲಿಷ್ಠ ಆಧಾರವಾದ "ಮುಸ್ಲಿಂ ಬಾಂಧವ್ಯ" ವನ್ನು ಮುರಿದರು. ಸರಕಾರ ಹಾಗು ಸೈನ್ಯದಲ್ಲಿದ್ದ ಲಂಚಗುಳಿತನವನ್ನು ಹೇಳಹೆಸರಿಲ್ಲದಂತೆ ಮಾಡಿದರು. ಹೊಸ ರಾಜ್ಯಘಟನೆಯನ್ನು ರಚಿಸಿ ತಾವೇ ಪ್ರಥಮ

---

# ಹೇಗೆ ಬಿಟ್ಟಿತು ?

ಹೋದ ಮೇಲೂ ನನ್ನನ್ನು ಅದು ಬೆನ್ನಟ್ಟಿದಂತಿತ್ತು.

ನಾನು ಮನೆಗೆ ಬಂದು ಹಾಸಿಗೆಯ ಮೇಲೆ ಉರುಳಿದೆ. ನನ್ನ ಮನಸಿನಲ್ಲಿ ಅನಿರ್ವಚನೀಯ ಕೋಲಾಹಲವೆದ್ದಿತ್ತು. ಆ ಆರ್ತನಾದ ನನ್ನ ಕಿವಿಯಲ್ಲಿ ಮತ್ತೂ ನಿನದಿಸುತ್ತಿತ್ತು.

ಆ ರಾತ್ರಿ ನನಗೆ ನಿದ್ದೆ ಬರಲಿಲ್ಲ. ಸಿಗರೇಟಿನ ಮೇಲೆ ಸಿಗರೇಟು ಸೇದಿದೆ; ಆದರೆ ನನ್ನ ಚದರಿ ಹೋದ ವಿಚಾರಗಳನ್ನು ಹೊಂದಿಸಲಾಗಲಿಲ್ಲ.

ನಾನು ಮಾಡಿದ್ದು ಸರಿಯೇ? ನಾನು ಮನಃಪೂರ್ವಕವಾಗಿ ದೇಶಹಿತಕ್ಕಾಗಿ ಈ ಕೃತ್ಯ ಮಾಡಿದ್ದೇನೆಂದುಕೊಂಡೆ.

ಆದರೆ ಕೆಲ ಜನರನ್ನು ಇಲ್ಲದಂತೆ ಮಾಡಿದಾಕ್ಷಣ ದೇಶದ ಭಾಗ್ಯ ಬದಲಾದೀತೆ?

ಯಾವದು ಮುಖ್ಯ—ನಿರ್ನಾಮ ಮಾಡಬೇಕಾದವರನ್ನು ನಿರ್ನಾಮ ಮಾಡುವದೋ ಅಥವಾ ಮುಂದೆ ಬರಬೇಕಾದವರನ್ನು ಮುಂದೆ ತರುವದೊ? ಅಲ್ಲ; ಮುಂದೆ ಬರಬೇಕಾದವರನ್ನು ಮುಂದೆ ತರುವದೇ ಮುಖ್ಯ ಎಂದು ಅನಿಸಿತು.

ನಾನು ಹಾಸಿಗೆಯ ಮೇಲೆ ಹೊರಳಾಡುತ್ತ ನನ್ನನೇ ಕೇಳಿಕೊಂಡೆ: ಹಾಗಾದರೆ?

ಹಾಗಾದರೆ ಏನು? ಎಂದು ಪ್ರತಿಧ್ವನಿಸಿದಂತಾಯಿತು. ಈಗ ನಾನು ಮನಃಪೂರ್ವಕವಾಗಿ ಉತ್ತರವಿತ್ತೆ: ಹಾಗಾದರೆ ನಾವು ನಮ್ಮ ಈಗಿನ ರೀತಿಗಳನ್ನೇ ಬದಲಿಸಬೇಕು!

ಆಗ ನನಗೆ ಮನಶ್ಶಾಂತಿಯು ಅನುಭವವಾಯಿತು.

ಆದರೆ ಈ ಶಾಂತಿ ಬೇಗನೇ ನುಚ್ಚುನೂರಾಯಿತು. ಆ ಕ್ರಂದನ, ಆರ್ತನಾದ, ತ್ರಾಹಿತ್ರಾಹಿ ಮತ್ತೆ ಕಿವಿಯಲ್ಲಿ ಮರುದನಿಗೊಡತೊಡಗಿದವು. "ಆಹಾ, ಆ ಮನುಷ್ಯ ಸಾಯದಿದ್ದರೆ!" ಎಂಬ ಆಸೆ ನನ್ನಲ್ಲಿ ಮೂಡಿದ್ದು ನೋಡಿ ನಾನೇ ಆಚ್ಚರಿಗೊಂಡೆ.

ವಿಚಿತ್ರ. ಆಗ ನಸುಕಿನ ಹೊತ್ತು. ಅದೇ ಹಿಂದಿನ ಸಂಜೆ ಯಾವ ಮನುಷ್ಯ ಸಾಯಬೇಕೆಂದು ನಾನು ಆಶಿಸಿದ್ದೇನೋ ಅವನೇ ಬದುಕಲೆಂದು ಈಗ ಹಾರೈಸುತ್ತಿದ್ದೇನೆ. ಬೆಳಗಿನ ಪತ್ರಿಕೆಯನ್ನು ಕೊಳ್ಳಲು ನಾನು ಅವಸರದಿಂದ ಸಾಗಿದೆ. ನಾನು ಕೊಲ್ಲಲು ಯೋಜಿಸಿದ್ದ ಮನುಷ್ಯ ಮೃತ್ಯುಭಯದಿಂದ ಪಾರಾಗಿದ್ದಾನೆಂದು ಅದರಲ್ಲಿ ಓದಿದಾಗ ನನಗಾದ ಆನಂದವೆಷ್ಟು!''



ಅಧ್ಯಕ್ಷರಾಗಿ ಆರಿಸಿ ಬಂದರು. ಮತ್ಸರಗ್ರಸ್ತ ಅಮೇರಿಕನ್ "ಟೈಮ್" ಪತ್ರಿಕೆ ಕೂಡ ನಾಸರರ ಸರಕಾರ "ಹಿಂದೆಂದಿನ ಸರಕಾರಕ್ಕಿಂತಲೂ ಬಲಿಷ್ಠವೂ ಖಂಡಿತವಾಗಿ ಅತ್ಯಂತ ಪ್ರಾಮಾಣಿಕವೂ ಆದ'' ಸರಕಾರವೆಂದು ಒಪ್ಪಿದೆ. ನಾಸರರು ತಮ್ಮ ದೇಶ ಮತ್ತು ಅದರ ದರಿದ್ರ ಜನತೆಯ ಕಷ್ಟನಿವಾರಣೆಗಾಗಿ ಮನಃಪೂರ್ವಕ ಹಂಬಲಿಸುತ್ತಾರೆಂದೂ ಅದು ಒಪ್ಪಿಕೊಂಡಿದೆ.

ನಾಸರರ ವಿದೇಶ ನೀತಿ ಅವರ ಆಂತರಿಕ ನೀತಿಯಷ್ಟೇ ಪರಿಣಾಮಕರವಾಗಿದೆ. ಅವರು, ಸುಯೇಜ ಪ್ರದೇಶದಿಂದ ಬ್ರಿಟಿಶರು ಸೈನ್ಯ ಹಿಂತೆಗೆದುಕೊಳ್ಳುವಂತೆ ಮಾಡಿದರು. ಈ ವಿಜಯದಿಂದ ಇಡೀ ಅರಬ ಜಗತ್ತಿಗೆ ಮಾತ್ರವಲ್ಲ, ಬಿಳಿಯರ ದಬ್ಬಾಳಿಕೆಯ ರುಚಿಕಂಡ ಪ್ರತಿಯೊಂದು ಏಶಿಯದ ದೇಶಕ್ಕೂ ಅವರು ಕಣ್ಮಣಿಯಾಗಿದ್ದಾರೆ. ಬ್ರಿಟಿಶರು ಸುಯೇಜದಿಂದ ಹೊರಡುವಾಗ ನಾಸರರು ಮುಂದೆ ಒಳ್ಳೇ ಹುಡುಗನಾಗಬಹುದೆಂದು ನಿರೀಕ್ಷಿಸಿದ್ದರು. ಆದರೆ ಬಗದಾದ ಒಪ್ಪಂದದ ಮೂಲಕ ಅರಬ ಜಗತ್ತಿನಲ್ಲಿ ಮತ್ತೆ ತಳವೂರುವ ಪ್ರಯತ್ನವನ್ನು ಬ್ರಿಟಿಶರು ನಡೆಸಿದಾಗ ಭಾರತ, ಇಂಡೋನೇಶಿಯ, ಬರ್ಮಾಗಳ ಸಂಗಡ ಇಜಿಪ್ತವೂ ಪ್ರತಿಭಟಿಸಿತು. ನಾಸರರ ಮೇಲೆ ಪಾಶ್ಚಾತ್ಯರ ಒತ್ತಾಯ ಹೆಚ್ಚಾದಾಗ ನಾಸರರು ಪ್ರತಿಯಾಗಿ ಕಮ್ಯುನಿಸ್ಟರೊಡನೆ ಸಂಪರ್ಕ ಬೆಳಸುವ ಚಾಲನೆಮಾಡಿದರು. ಕಮ್ಯುನಿಸ್ಟ ಚೆಕೋಸ್ಲೊವೇಕಿಯದಿಂದ ಅವರು ಶಸ್ತ್ರಾಸ್ತ್ರ ಕೊಂಡಾಗ ಪಾಶ್ಚಾತ್ಯರು ದಿಗಿಲುಬಿದ್ದರು. ಇಜಿಪ್ತವನ್ನು ಪುನಃ ಓಲೈಸಬೇಕೆಂದು ಬ್ರಿಟಿಶರೂ ಅಮೇರಿಕನ್ನರೂ ಅಸ್ವಾನ ಅಣೆಕಟ್ಟು ಕಟ್ಟಲು ನೆರವಾಗುವದಾಗಿ ಸಾರಿದರು. ಆದರೆ ನೆರವಿನ ಕೊಡುಗೆ ಸ್ವೀಕರಿಸಿದರೂ ನಾಸರರು ಸಾಕಷ್ಟು "ಒಳ್ಳೇ ಹುಡುಗ"ನಾಗಲಿಲ್ಲ. ಅವರು ಬಗದಾದ ಒಪ್ಪಂದವನ್ನು ಮತ್ತೂ ವಿರೋಧಿಸಿದ್ದಲ್ಲದೆ ಅದನ್ನು ನಿರರ್ಥಕಗೊಳಿಸಲು ಅರಬ ಜಗತ್ತನ್ನು ಹುರಿದುಂಬಿಸಿದರು. ಸೇಡು ತೀರಿಸಲು ಅಸ್ವಾನ ಅಣೆಕಟ್ಟಿಗೆ ಕೊಡಮಾಡಿದ ಸಹಾಯವನ್ನು ಆಂಗ್ಲೊ ಅಮೇರಿಕನ್ನರು ಹಿಂತೆಗೆದುಕೊಂಡರು. ಅಸ್ವಾನ್ ಅಣೆಕಟ್ಟೇ ಇಜಿಪ್ತದ ಆರ್ಥಿಕ ಉದ್ಧಾರದ ಯೋಜನೆಗೆ ತಳಹದಿಯಾಗಿದೆ. ಅದು ಕೈಗೂಡದಿದ್ದರೆ ನಾಸರರ ಆಟ ನಿಂತುಹೋಗುವದೆಂದು ಅವರ ಎಣಿಕೆಯಿತ್ತು. ಆದರೆ ನಾಸರರು ಹೆದರಲಿಲ್ಲ. ಅವರು ಬ್ರಿಟಿಶ-ಫ್ರೆಂಚರ ಅಧೀನದಲ್ಲಿದ್ದ ಸುಯೇಜ ಕಾಲುವೆಯ ಕಂಪನಿಯನ್ನೇ ವಶಪಡಿಸಿಕೊಂಡರು. ಬ್ರಿಟಿಶ, ಫ್ರೆಂಚ ಅಮೇರಿಕನ್ನರಿಗೆ ಇದು ಎಷ್ಟು ಅನಿರೀಕ್ಷಿತವಾಗಿತ್ತೆಂದರೆ, ಅವರು ಸಾಮಾನ್ಯವಾಗಿ ಶಾಂತಿಕಾಲದಲ್ಲಿ ಯಾರ ಮೇಲೂ ಉಪಯೋಗಿಸದಿರುವ ಬೈಗಳನ್ನೆಲ್ಲ ನಾಸರರ ಮೇಲೆ ಪ್ರಯೋಗಿಸುತ್ತಿದ್ದಾರೆ.

ನಾಸರರ ಈ ಅಪೂರ್ವ ಧೈರ್ಯದ ಫಲವೇನೇ ಆಗಲಿ, ಅವರು ಮಧ್ಯಪೂರ್ವದಲ್ಲಿ ಇಂದು ಅಪ್ರತಿಮ ಮನುಷ್ಯರಾಗಿದ್ದಾರೆ. ಸುಯೇಜದ ಬಗ್ಗೆ ಕೊನೆಗೆ ಎರಡೂ ಪಕ್ಷಗಳು ಹಟ ಕಡಿಮೆ ಮಾಡಿ ಒಪ್ಪಂದಕ್ಕೆ ಬರಬೇಕಾದೀತು. ಆದರೆ ಮಧ್ಯಪೂರ್ವವು ಇನ್ನೆಂದಿಗೂ ಮೊದಲಿನಂತೆ ಇರದು. ಜಗತ್ತಿನ ಎಣ್ಣೆಯಲ್ಲಿ ಅರ್ಧವಾಸಿಯನ್ನು ತನ್ನ ಭೂಗರ್ಭದಲ್ಲಿಟ್ಟುಕೊಂಡ ಅರಬ ಜಗತ್ತಿಗೆ ತನ್ನ ಶಕ್ತಿಯ ಅರಿವನ್ನು ನಾಸರರು ಮಾಡಿಕೊಟ್ಟಿದ್ದಾರೆ.





ಬಣ್ಣಗಳು ನಮಗರಿಯದಂತೆ ನಮ್ಮ ಮೇಲೆ ಪ್ರಭಾವ ಬೀರುವವು.

# ಬಣ್ಣ ಬದಲಿಸಿ ಲಾಭ ಪಡೆಯಿರಿ!

ಬಣ್ಣಗಳು ನಮ್ಮ ಜೀವನದ ಮೇಲೆ ಆಶ್ಚರ್ಯಕರ ಪ್ರಭಾವ ಬೀರುತ್ತವೆಯೆಂಬ ಮಾತು ಬರಬರುತ್ತ ಸಂಶೋಧಕರಿಗೆ ಹೆಚ್ಚು ಹೆಚ್ಚು ಮನವರಿಕೆಯಾಗುತ್ತಿದೆ. ಈ ತಿಳಿವಳಿಕೆಯನ್ನು ಅವರೀಗ ಆಸ್ಪತ್ರೆಗಳಲ್ಲಿ ರೋಗಿಗಳ ಚಿಕಿತ್ಸೆಯಲ್ಲಿ, ಕಾರಖಾನೆ ಮತ್ತು ಕಚೇರಿಗಳಲ್ಲಿ ಕಾರ್ಯಕ್ಷಮತೆ ಹೆಚ್ಚಿಸುವದರಲ್ಲಿ ನಿಯೋಜಿಸುತ್ತಿದ್ದಾರೆ.

ಬಣ್ಣಗಳು ನಮ್ಮನ್ನು ಉತ್ತೇಜಿಸಬಲ್ಲವು ಹಾಗೆಯೆ ನಿರ್ವಿಣ್ಣಗೊಳಿಸಲೂ ಬಲ್ಲವು; ಅವುಗಳಿಂದ ಹಸಿವು ಹೆಚ್ಚಿಸಬಹುದು; ಕೆಲ ಬಣ್ಣಗಳಿಂದ ನಮಗೆ ಅಸ್ವಸ್ಥವೆನಿಸುವಂತೆ ಮಾಡಲು ಕೂಡ ಸಾಧ್ಯವಿದೆ.

ಅಮೇರಿಕದಲ್ಲಿ ನಡೆಸಿದ ಒಂದು ಪ್ರಯೋಗದಿಂದ ಬಣ್ಣಗಳು ನಮ್ಮ ಸ್ನಾಯುಕ್ರಿಯೆಯ ಮೇಲೆ ಪ್ರಭಾವ ಬೀರುವವೆಂದು ಸಿದ್ಧವಾಯಿತು. ಸಾಧಾರಣ ಬೆಳಕಿನಲ್ಲಿ ಒಂದು ಕಾರಖಾನೆಯ ಕೆಲಸಗಾರರು ಸರಾಸರಿ ೨೩ "ಘಟಕ"ದಷ್ಟು ಚಟುವಟಿಕೆ ಮಾಡುತ್ತಿದ್ದರು. ಆ ಕೋಣೆಯಲ್ಲಿ ನೀಲಿ ಬೆಳಕು ಹಾಕಿದರೆ ಅವರ ಚಟುವಟಿಕೆ ೨೪ ಘಟಕಗಳಿಗೇರಿತು; ಹಸುರು ಪ್ರಕಾಶದಲ್ಲಿ ಅದು ೨೮ ಕ್ಕೂ ಹಳದಿಯಲ್ಲಿ ೩೦ ಕ್ಕೂ ಏರಿತು; ಆದರೆ ಕಡುಗೆಂಪು ಬಣ್ಣದಲ್ಲಿ ಅವರ ಚಟುವಟಿಕೆ ೪೨ ಘಟಕಗಳ ಶಿಖರಕ್ಕೇರಿಬಿಟ್ಟಿತು. ಅಂದರೆ ಸಾಧಾರಣಕ್ಕಿಂತ ಸೇಕಡಾ ೬೦ ರಷ್ಟು ಹೆಚ್ಚು ಚಟುವಟಿಕೆಯಾಯಿತು. ಕೆಂಪಿನಂಥ ಉತ್ತೇಜಕ ಬಣ್ಣ ಬೇರೊಂದಿಲ್ಲ.

ಮನಸಿನ ಮೇಲೆ ಬಣ್ಣಗಳ ಪರಿಣಾಮವನ್ನು ವಿಜ್ಞಾನಿಗಳು ಬಹಳ ದಿನಗಳಿಂದ ಬಲ್ಲರು. ತೀವ್ರ ನಿರ್ವಿಣ್ಣತೆಯಿಂದ ಬಳಲುವ ಮನೋರೋಗಿಗಳನ್ನು ಕೆಂಪು ಬಣ್ಣ ಬಳಿದ ಕೋಣೆಗಳಲ್ಲಿ ಇರಿಸಿ ಶುಶ್ರೂಷೆ ಮಾಡಿದಾಗ ಶಾಶ್ವತವಾಗಿ ಗುಣವಾಗದಿದ್ದರೂ ಅವರಲ್ಲಿ ಹೊಸ ಉತ್ಸಾಹ ಮತ್ತು ಪ್ರಜ್ಞೆ ಉಂಟಾದದ್ದು ಕಂಡುಬಂದಿದೆ.

ನೀಲ ವರ್ಣದ ಗುಣ ತದ್ವಿರುದ್ಧವಾದದ್ದು. ಅದು ಮನಸ್ಸಿಗೆ ಶಾಂತಿ ಕೊಡುತ್ತದೆ. ಕಾರಣ, ಅದನ್ನು ಅತಿ ಉತ್ತೇಜಿತ ಮನಸ್ಸಿನ ರೋಗಿಗಳ ಚಿಕಿತ್ಸೆಯಲ್ಲಿ ಉಪಯೋಗಿಸುತ್ತಾರೆ.

ನಮ್ಮ ಅನೇಕ ಇಂದ್ರಿಯಗಳು ಬಣ್ಣಗಳಿಂದ ಪರಿಣಾಮ ಹೊಂದುವಂತೆ ಕಾಣುತ್ತದೆ. ಕೆಲ ಬಣ್ಣಗಳು ಉಷ್ಣದ ಭ್ರಾಂತಿಯನ್ನೂ ಬೇರೆ ಕೆಲವು ಭಾರದ ಭ್ರಮೆಯನ್ನೂ ಹುಟ್ಟಿಸಬಲ್ಲವು

'ವರ್ಲ್ಡ್ ಡೈಜೆಸ್ಟ್' ನಿಂದ ರೂಪಾಂತರ

ಕೆಲ ವರ್ಷಗಳ ಕೆಳಗೆ ಕೆನಡಾದ ಒಂದು ಕಾರಖಾನೆಯಲ್ಲಿ ಹವೆ ತೀರ ತಂಡಿಯೆಂದು ಕೆಲಸಗಾರರು ಸಂಪು ಹೂಡುವದಾಗಿ ಬೆದರಿಕೆ ಹಾಕಿದರು. ಉಷ್ಣತಾಮಾಪಕದಲ್ಲಿ ನೋಡಿದಾಗ ಹವೆ ಸಾಮಾನ್ಯವಾಗಿತ್ತು.

ವಾರಾಂತ್ಯದ ರಜೆಯ ದಿನ ಕಾರಖಾನೆಯವರು ಬಣ್ಣದವರನ್ನು ಕರೆಸಿ, ಗೋಡೆಗೆ ಮೊದಲಿದ್ದ ಹಸುರು ಬಣ್ಣದ ಬದಲು ಕೆನೆಬಣ್ಣ ಹಚ್ಚಿಸಿದರು. ಉಷ್ಣತೆ ಹೆಚ್ಚಿಸಲು ಬೇರಾವ ಕ್ರಮವನ್ನೂ ಅವರು ಕೈಕೊಳ್ಳಲಿಲ್ಲ. ಆದರೂ ಸೋಮವಾರ ದಿನ ಬಂದ ಕೆಲಸಗಾರರು ಈಗ ಹವೆ ಬೆಚ್ಚಗಾಗಿದೆ ಎಂದು ಹೇಳತೊಡಗಿದರು.

ಇನ್ನೊಂದು ಕಾರಖಾನೆಯಲ್ಲಿ ಹಸುರು ಮತ್ತು ಹಳದಿ ಬಣ್ಣದ ಡಬ್ಬಿಗಳನ್ನು ಪರಿಶೀಲಿಸುತ್ತಿದ್ದ ಕೆಲಸಗಾರರಲ್ಲಿ ಹಲವರು ಒಮ್ಮೆಲೇ ಅಸ್ವಸ್ಥರಾದರು. ಪರೀಕ್ಷಿಸಿದಾಗ ಡಬ್ಬಿಗಳ ಹಿಂದಣ ಗೋಡೆಗೆ ಹೊಸದಾಗಿ ಬಣ್ಣ ಬಳಿಯಲಾಗಿತ್ತು. ಆ ಬಣ್ಣಕ್ಕೂ ಡಬ್ಬಿಗಳ ಬಣ್ಣಕ್ಕೂ "ವೈಷಮ್ಯ" ಇದ್ದುದರಿಂದಲೇ ಕೆಲಸಗಾರರು "ವರ್ಣ ವಿಕಾರ"ಕ್ಕೊಳಗಾಗಿದ್ದರೆಂದು ಗೊತ್ತಾಯಿತು.

ಹಳದಿಯೆಂಬುದು ಅಸ್ವಸ್ಥಕ್ಕೆ ಪ್ರೋತ್ಸಾಹ ನೀಯುವ ಬಣ್ಣ. ವಿಮಾನಗಳ ಒಳಭಾಗಕ್ಕೆ ಈ ಬಣ್ಣ ಹಚ್ಚುವದಿಲ್ಲ. ಯಾಕಂದರೆ ಪ್ರವಾಸಿಕರಲ್ಲಿ ಈ ಬಣ್ಣವು ಅಪಚನವನ್ನುಂಟುಮಾಡುತ್ತದೆ.

ವರ್ಣಗಳ ವಿಲಾಸದಿಂದ ಒಬ್ಬ ತಜ್ಞನು ಒಂದು ಉತ್ತಮ ಭೋಜನವನ್ನು ಅತಿಥಿಗಳಿಗೆ ರುಚಿಸದಂತೆ ಮಾಡಿದ್ದನ್ನು ಉದಾಹರಣೆ ಕೊಡಬಹುದು. ಪ್ರಸಿದ್ಧ ಅಡಿಗೆ ಭಟ್ಟನೊಬ್ಬನು ಅಂದಿನ ಅಡಿಗೆ ಮಾಡಿದ್ದನು. ಆದರೆ ಬಣ್ಣದ ತಜ್ಞನು ವರ್ಣಶೋಧಕ ಪಟಲಗಳಿಂದ ಕೋಣೆಯಲ್ಲಿ ಕೆಂಪು ಮತ್ತು ಹಸುರು ಹೊರತು ಮತ್ತಾವ ಬಣ್ಣವೂ ಉಳಿಯದಂತೆ ನೋಡಿಕೊಂಡನು. ಹೀಗಾಗಿ ಕಾಫಿ ಹಳದಿಯಾಗಿಯೂ, ಹುಳಿಯ ಹೋಳು ಬೂದಿ ಬಣ್ಣದ್ದಾಗಿಯೂ ಸಬ್ಬಸಿಕೆ ಪಲ್ಲೆ ನಸುಗೆಂಪಾಗಿಯೂ ಕಾಣಿಸಿದವು. ಈ ಆಹಾರವನ್ನು ತಿನ್ನಲು ಯತ್ನಿಸಿದ ಅತಿಥಿಗಳಲ್ಲಿ ಹಲವರು ಊಟದ ನಂತರ ತಮಗೆ ಅಸ್ವಸ್ಥವಾಗಿದೆಯೆಂದು ದೂರಲಾರಂಭಿಸಿದರು.

ಕೆಲಕೆಲ ಜನಾಂಗಗಳಿಗೆ ಕೆಲಕೆಲ ಬಣ್ಣಗಳು ಒಗ್ಗುವದಿಲ್ಲೆಂದು ಉದ್ದಿಮೆಗಾರರ ಲಕ್ಷ್ಯಕ್ಕೆ ಬಂದಿದೆ. ಚೀನದಲ್ಲಿ ತಮ್ಮ ಟಾಚಣಿಗಳ (ಗುಂಡು ಸೂಜಿ) ಮಾರಾಟ ಒಮ್ಮೆಲೇ ಇಳಿಮುಖವಾದದ್ದನ್ನು ನೋಡಿ ಒಂದು ಸಲ ಬ್ರಿಟಿಶ ನಿರ್ಯಾತಕರು ಗಾಬರಿಯಾದರು. ಕಡೆಗೆ ನೋಡುವಾಗ ಗುಂಡುಸೂಜಿಗಳನ್ನು ಪ್ಯಾಕ್ ಮಾಡಲು ಉಪಯೋಗಿಸುವ ನೀಲಿ ಕಾಗದವೇ ಇದಕ್ಕೆ ಕಾರಣವೆಂದು ಗೊತ್ತಾಯಿತು. ಚೀನದಲ್ಲಿ ನೀಲಿಯು ಸಾವಿನ ದ್ಯೋತಕವೆನಿಸುವದರಿಂದ ಗಿರಾಕಿಗಳು ಬ್ರಿಟಿಶ ಗುಂಡುಸೂಜಿಗಳ ಮೇಲೆ ಮುನಿದಿದ್ದರು.

ಅಮೇರಿಕದಲ್ಲಿ ಬಣ್ಣಗಳ ತಜ್ಞರಿಗೆ ಒಳ್ಳೇ ಸಂಬಳ ಸಿಗುತ್ತದೆ. ಉದ್ದಿಮೆಗಾರರಿಗೆ ವರ್ಣಯೋಜನೆಯಿಂದ ಮಾರಾಟ ಹೆಚ್ಚಿಸಬಹುದೆಂದು ಖಂಡಿತವಾಗಿದೆ.

ಮಾಂಸದ ವ್ಯಾಪಾರಿ ಸಂಸ್ಥೆಯೊಂದು ತನ್ನ ಸರಕುಗಳನ್ನು ಬಿಳಿ ಬಣ್ಣ ಬಳಿದ ಕೋಣೆಯಲ್ಲಿ ಪ್ರದರ್ಶನಕ್ಕಿಟ್ಟಿತ್ತು. ವರ್ಣತಜ್ಞನು "ಬಿಳಿ ಬಣ್ಣದ ಮುಂದೆ ಮಾಂಸ ಕಂದಾಗಿ ಕಾಣುತ್ತದೆ. ಗೋಡೆಗಳಿಗೆ ನೀಲಿ-ಹಸುರು ಬಳಿಯಿರಿ. ಅಂದರೆ ಮಾಂಸ ಇನ್ನಷ್ಟು ಕೆಂಪಾಗಿ ತೋರುವದು" ಎಂದುಪದೇಶಿಸಿದ. ಡೈರೆಕ್ಟರರಿಗೆ ನಂಬಿಕೆ ಬರಲಿಲ್ಲವಾದರೂ ನೋಡೋಣೆಂದು ಬಣ್ಣ ಬದಲಾಯಿಸಿದರು. ಹೊಸ ಬಣ್ಣಗಳ ಹಿನ್ನೆಲೆಯಿಂದ ಮಾಂಸದ ಆಕರ್ಷಣೆ ಹೆಚ್ಚಾಗಿ ಮಾರಾಟ ಕೂಡಲೇ ಏರಿತು.

ಹೋಟೆಲುಗಳೂ ಬಣ್ಣ ಬದಲಾವಣೆಯಿಂದ ಲಾಭಹೊಂದಿವೆ. ಒಂದು ಹೋಟೆಲಿನಲ್ಲಿ ಸಾಲದು (Salad)ಗಳನ್ನು ಹಸುರು ತಟ್ಟೆಗಳಲ್ಲಿ ಒದಗಿಸಲಾರಂಭಿಸಿದಾಗ ಹೋಳುಗಳು ದೊಡ್ಡವಾಗಿಯೂ ಹಸುರಾಗಿಯೂ ಕಾಣಿಸಿದ್ದರಿಂದ ಗಿರಾಕಿಗಳು ಹೆಚ್ಚು ಪ್ರಸನ್ನರಾದರು.

ಲೇಖನ ಸಾಮಗ್ರಿಗಳ ಕಾರಖಾನೆಯೊಂದು

ಖಾತೆ ಕಿರ್ದಿ ಪುಸ್ತಕಗಳಿಗೆ ಬಿಳಿಯ ಬದಲು ನಸುಹಸುರು ಬಣ್ಣದ ಕಾಗದವನ್ನೂ ಅವುಗಳ ಲ್ಲಿನ ಗೆರೆಗಳಿಗೆ ಸಾಧಾರಣವಾಗಿ ಬಳಸುವ ಕೆಂಪು ಮತ್ತು ನೀಲಿ ಬಣ್ಣಗಳ ಬದಲು ತಿಳಿ-ಕಂದು ಮತ್ತು ಕಡುಹಸುರು ಬಣ್ಣವನ್ನೂ ಉಪಯೋಗಿಸಿತು. ಮಾರಾಟ ಕೂಡಲೇ ಉತ್ಕರ್ಷ ಹೊಂದಿತು. ಕಾರಣವಿಷ್ಟೆ: ಈ ಹೊಸ ಕಾಗದದ ಮೇಲೆ ಬಿದ್ದ ಬೆಳಕು ಕಣ್ಣು ಕುಕ್ಕುವದಿಲ್ಲವೆಂದು ಕಾರಕೂನರಿಗೆ ತಿಳಿದು ಅದನ್ನೇ ಅವರು ಕೊಳ್ಳತೊಡಗಿದ್ದರು.

ಕೆಂಪು ಅಥವಾ ಕಪ್ಪು ಬಣ್ಣವುಳ್ಳ ಪದಾರ್ಥಗಳನ್ನು ಎತ್ತಿದಾಗ ನಮಗೆ ಭಾರವೆನಿಸುತ್ತದೆಂದು ಮನಶ್ಶಾಸ್ತ್ರಜ್ಞರು ಕಂಡುಹಿಡಿದಿದ್ದಾರೆ. ಅಷ್ಟೇ ಭಾರದ ಪದಾರ್ಥಗಳು ನಸುನೀಲ ಅಥವಾ ಹಳದಿ ಬಣ್ಣದವಿದ್ದರೆ ಹಗುರಾಗಿರುವಂತೆ ಭಾಸವಾಗುತ್ತದೆ.

ಯಂತ್ರಗಳಿಗೆ ಪ್ರಕಾಶವುಳ್ಳ ಬಣ್ಣಗಳಿದ್ದರೆ ಕೆಲಸಗಾರರು ಹೆಚ್ಚು ಉತ್ಪಾದನೆ ಮಾಡುವರೆಂದು ಉದ್ದಿಮೆಗಾರರು ಮನಗಂಡಿದ್ದಾರೆ. ಯಾಕಂದರೆ ಪ್ರಕಾಶಮಾನ ಸ್ಥಳದಲ್ಲಿ ಕೆಲಸ ಮಾಡುವಾಗ ಉತ್ಸಾಹ ಬರುವದು ಮನುಷ್ಯ ಸ್ವಭಾವ.

ಕೆಲ ಕೀಟಗಳಿಗೆ ಕೆಲ ಬಣ್ಣಗಳನ್ನು ಕಂಡರಾಗುವದಿಲ್ಲೆಂದೂ ಗೊತ್ತಾಗಿದೆ. ಪ್ರತಿ ವರ್ಷ ಹಡಗು ಕಂಪನಿಗಳಿಗೆ ಲಕ್ಷಾಂತರ ರೂಪಾಯಿ ಹಾನಿಯುಂಟು ಮಾಡುವ ಕಡಲ ಹಕ್ಕಿಗಳು, ಹಡಗುಗಳಿಗೆ ನಸುಹಸುರು ಬಣ್ಣ ಬಳಿದರೆ, ಅಷ್ಟು ತ್ರಾಸ ಕೊಡುವದಿಲ್ಲ. ಒಬ್ಬ ಕಾರಖಾನೆ ಯೊಡೆಯನು ಸೂರ್ಯನ ಅತೀತ ನೇರಳೆ ಕಿರಣಗಳನ್ನು ತಡೆಯಲು ಒಂದು ಕಿಡಿಕಿಗೆ ನೀಲಿ ಬಣ್ಣ ಹಚ್ಚಿದಾಗ, ಆ ಕಿಡಿಕಿಯ ಬಳಿ ನೊಣಗಳು ಸುಳಿಯುವದು ನಿಂತುಹೋಯಿತು.



ಡಾ. ಚ್ರಾಹಾ ಎಂಬವರು ಒಂದು ಬಗೆಯ ಉಡುಪನ್ನು ತಯಾರಿಸಿದ್ದಾರೆ. ಈ ಉಡುಪಿನಲ್ಲಿ ನಾವು ಬಯಸುವಷ್ಟು ಉಷ್ಣತೆ ಅಥವಾ ತಂಪನ್ನು ದೇಹಕ್ಕೆ ನೀಡುವಂಥ ಉಷ್ಣ ಇಲ್ಲವೆ ತಂಪು ವಾಯುವಿನ ನಲಿಕೆಗಳು ಇರುತ್ತವೆ. ಈ ಉಡುಪು ಧರಿಸಿ ತಾಪವಿಲ್ಲದೆ ಹೆಚ್ಚು ಸಮಯದ ವರೆಗೆ ಕೆಲಸ ಮಾಡಬಹುದಾಗಿದೆ.

**ಪುಸ್ತಕ ವಿಭಾಗ**



ಸ್ಪಾನಿಶ ಕಾದಂಬರಿ

# ಡಾನ್ ಕ್ವಿಹೋ

(DON QUIXOTE)

**ಮೂಲ: ಸರ್ವಾಂಟಿಸ್ • ಕನ್ನಡ: ಶ್ರೀ. ವಿ. ಎಂ. ಇನಾಂದಾರ್**

---

ಸರ್ವಾಂಟಿಸನು ಬರೆದ "ಡಾನ್ ಕ್ವೀಹೋ" ಕಾದಂಬರಿ ವಿಶ್ವವಿಖ್ಯಾತವಾಗಿದೆ. ಗತವೈಭವದ ಪುನರುಜ್ಜೀವನಕ್ಕಾಗಿ ಹಂಬಲಿಸುವ ಜನರ ಮೌಢ್ಯದ ಮಹಾಪ್ರಹಸನವಿದು. ಓದಿ ಓದಿ ಮರುಳಾದ ಡಾನ್ ಕ್ವಿಹೋನ ಹುಚ್ಚು ಸಾಹಸಗಳು ಎಂಥವನಿಗೂ ನಗು ಬರಿಸುವಂತಿವೆ. ಸರ್ವಾಂಟಿಸನು ತನ್ನ ಮೂರ್ಖ ನಾಯಕನ ಹೆಸರನ್ನು ಅಜರಾಮರವಾಗಿ ಮಾಡಿದ್ದಾನೆ. ಹುಚ್ಚಾಬಟ್ಟೆ ವರ್ತಿಸುವವನನ್ನು "ಕ್ವಿಗ್ಝಾಟಿಕ" ಮನುಷ್ಯನೆಂದು ಕರೆಯಲಾಗುತ್ತದೆ. ೩೫೦ ವರ್ಷಗಳ ಹಿಂದೆ ಬರೆದ ಈ ಕಾದಂಬರಿ ಇಂದಿಗೂ ಸಜೀವವಾಗಿದೆ. ಈ ಕಾದಂಬರಿಯ ಸಾರವನ್ನು ಶ್ರೀ ಇನಾಂದಾರರು ಸರಸ-ಸರಳವಾಗಿ ಇಲ್ಲಿ ಸಂಗ್ರಹಿಸಿದ್ದಾರೆ.

---

(೧)

ಸ್ಪೇನ್ ದೇಶದ ಲಾಮಾಂಚಾ ಎಂಬ ಒಂದು ಹಳ್ಳಿಯಲ್ಲಿ ಅಲಾಂರ್ಝೋ ಕ್ವಿಹಾಡಾ ಎಂಬ ನಡುವಯಸ್ಸಿನ ಗೃಹಸ್ಥನೊಬ್ಬನಿದ್ದ. ಎತ್ತರದ ನಿಲುವು; ಗಟ್ಟಿಮುಟ್ಟಾದ ದೇಹ, ನೋಡುವುದಕ್ಕೆ ಅಷ್ಟಕ್ಕಷ್ಟೆ. ಮನೆಯಲ್ಲಿದ್ದವರು ಮೂರು ಜನ ಮಾತ್ರ. ಈತನ ಹೊರತು ಅಣ್ಣನ ಮಗಳು ಒಬ್ಬಳು. ಮನೆಗೆಲಸಗಳನ್ನು ಮಾಡುತ್ತಿದ್ದವಳು ಇನ್ನೊಬ್ಬಳು. ಒಂದು ಬಡಕಲು ಕುದುರೆ, ಒಂದು ನಾಯಿ; ಒಟ್ಟು ಇಷ್ಟು ಸಂಸಾರ ಈತನದು.

ಕ್ವಿಹಾಡಾನಿಗೆ ಒಂದು ವ್ಯಸನವಿತ್ತು. ಅದೆಂದರೆ ಕಥೆ-ಕಾದಂಬರಿಗಳನ್ನು ಓದುವುದು. ಅದರಲ್ಲಿಯೂ ಹಳೆಯ ಕಾಲದ ವೀರರ, ಸರದಾರರ ರೋಮಾಂಚಕಾರಿಯಾದ ಅದ್ಭುತ ಸಾಹಸದ ಕತೆಗಳನ್ನು ಓದುವುದೆಂದರೆ ಆತನಿಗೆ ಹುಚ್ಚು. ಹಗಲು ರಾತ್ರಿ ಅದೇ ಕೆಲಸ. ಊಟ ನಿದ್ರೆಗಳ ಪರಿವೆಯಿಲ್ಲದೆ ಸಾಹಸದ ಕತೆಗಳನ್ನು ಓದುತ್ತಿದ್ದ. ಅವನೇನೂ ಅಂಥ ಅನುಕೂಲವಂತನಲ್ಲ. ಆದರೆ ಓದುವ ಹುಚ್ಚು ಬೆಳೆದ ಹಾಗೆ ಇದ್ದಬಿದ್ದ ಆಸ್ತಿಪಾಸ್ತಿಯನ್ನು ದೂರಿಬಿಟ್ಟು ಸಾಹಸದ ಕತೆಗಳ ಪುಸ್ತಕಗಳನ್ನು ಕೊಂಡು ತಂದು ಓದುವವರೆಗೂ ಬಂದಿತು ಆತನ ಸ್ಥಿತಿ. ಬೇರೆ ಯೋಚನೆಯೇ ಆತನಿಗೆ ಉಳಿಯಲಿಲ್ಲ. ಆತ ಕಾಣುತ್ತಿದ್ದ ಕನಸುಗಳು ಕೂಡ ವೀರ ಅದ್ಭುತಗಳ ವಿಚಾರವಾಗಿಯೆ; ಆದರೆ ರಾತ್ರಿ ಮಲಗಿದರಲ್ಲವೆ ಆತ ಕನಸು ಕಾಣುವುದು? ಆತನ ಬದುಕೇ ಒಂದು ಸಾಹಸದ ಕನಸಾಯಿತು. ಸಾಹಸದ ಮೋಹ ಆತನ ಅಂತರಂಗವನ್ನಾವರಿಸಿತು.

ಊರ ಚರ್ಚ್ ಪಾದ್ರಿ, ಆತನಿಗೆ ತೀರ ಹತ್ತಿರದ ಸ್ನೇಹಿತ. ಆದರೆ ಕ್ವಿಹಾಡಾನ ಸಾಹಸದ ಕತೆಗಳನ್ನು ಕೇಳುವುದೇ ಆತನಿಗೆ ಮುಖ್ಯ ಕೆಲಸವಾಗಿತ್ತು. ಕೂಡಿದಾಗಲೆಲ್ಲ ಅದೇ ಮಾತು. ಹಳೆಯ ಕಾಲದ ವೀರರು, ಸರದಾರರು, ಸಂಕಟಗಳಲ್ಲಿ ಸಿಲುಕಿಬಿದ್ದ ಸುಂದರಿಯರ ಸಹಾಯಕ್ಕೆಂದು ಜೀವವನ್ನೇ ಪಣಕ್ಕಿರಿಸುತ್ತಿದ್ದ ಸಾಹಸಿಗಳು, ಇವರ ಹೊರತು ಬೇರೆ ವಿಷಯವೇ ಆತ ಸಿಗಿರಲಿಲ್ಲ. "ಅವೆಲ್ಲ ಕಟ್ಟು ಕತೆಗಳು. ಹಳ್ಳಿಯ ಹುಚ್ಚು ಹುಡುಗರು ಕೂಡ ಅಂಥ ಹುಚ್ಚು ಕತೆಗಳನ್ನು ಕಟ್ಟಬಹುದು. ಅವನ್ನು ನಂಬಬಾರದು" ಎಂದು ಎಂದಾದರೂ ಪಾದ್ರಿಯು ವಿವೇಕದ ಮಾತನ್ನು ಹೇಳಿದರೆ ಕ್ವಿಹಾಡಾ ರೇಗುತ್ತಿದ್ದ. ವಿತಂಡವಾದವನ್ನು ಹೂಡುತ್ತಿದ್ದ. ಹೀಗಾಗಿ ಅದ್ಭುತ ಸಾಹಸಗಳ ಹುಚ್ಚು ಆತನ ತಲೆಗೇರಿತು. ಕಥಾನಾಯಕರ ಹಾಗೆ ತಾನಾದರೂ ಯಾತಕ್ಕೆ ಸಾಹಸಗಳನ್ನು ಎಸಗಬಾರದು? ತಾನಾದರೂ ವೀರ ಸರದಾರನಾಗಿ ಸಂಕಟಗಳಲ್ಲಿ ಸಿಕ್ಕುಬಿದ್ದವರನ್ನು, ಅದರಲ್ಲಿಯೂ ಸುಂದರಿಯರನ್ನು, ಬಿಡುಗಡೆ ಮಾಡುವುದರಲ್ಲಿ ಯಾಕೆ ಪಣತೊಟ್ಟು ಪ್ರಪಂಚವನ್ನು ಸುತ್ತಬಾರದು? ಎಂದುಕೊಂಡ. ಯೋಚನೆ ತಲೆಯಲ್ಲಿ ಮೂಡುವುದೊಂದೇ ತಡ. ಮಿಂಚಿದ ಯೋಜನೆ ನಿರ್ಧಾರವಾಯಿತು. ಕಥಾನಾಯಕರ ಹಾಗೆ ತಾನಾದರೂ ಸಾಹಸಗಳನ್ನು ಎಸಗಿ, ಪರಾಕ್ರಮಗಳನ್ನು ಸಾಧಿಸಿ ಮಾತೃಭೂಮಿಗೆ ಮರಳಿದರೆ ತನಗೆ ರಾಜನಿಂದ ಅದೆಂಥ ಸನ್ಮಾನವಾದೀತು! ತನ್ನ ಹೆಸರು ಹೇಗೆ ನಾಡಿನ ಇತಿಹಾಸದಲ್ಲಿ ಅಜರಾಮರವಾದೀತು! ಎಂದು ಮುಂತಾಗಿ ಕನಸು ಕಾಣತೊಡಗಿದ. ಕನಸನ್ನು ನನಸಾಗಿಸುವುದು, ಅದೇ ಧ್ಯೇಯ ಎಂದು ಹಟ ಹಿಡಿದ. ತನ್ನೊಡನೆ ಪಣತೊಟ್ಟ. ಸಿದ್ಧತೆಗೆ ತೊಡಗಿದ.

ಪೂರ್ವಜರ ನೆನಹು ಎಂದು ನೆಲಮನೆಯಲ್ಲಿ ಬಿದ್ದಿದ್ದ ಯುದ್ಧ ಸಲಕರಣೆಗಳನ್ನು ಕಲೆಹಾಕಿದ. ಕವಚ, ಖಡ್ಗ, ತಲೆಕಾಪು, ಢಾಲು, ಬರ್ಚಿಗಳನ್ನು ಸಿದ್ಧಗೊಳಿಸಿದ. ಜಂಗು ಹಿಡಿದ ಅವನ್ನೆಲ್ಲ ರಾತ್ರಿಯೆಲ್ಲವೂ ತಿಕ್ಕಿ ತೊಳೆದು ಅಣಿಮಾಡಿದ. ಕುದುರೆಯಂತೂ ಇದ್ದೇ ಇತ್ತು. ಬಡಕಲಾದರೇನಾಯಿತು? ತನ್ನನ್ನು ನಂಬಿಕೊಂಡಿರಲಿಲ್ಲವೆ ಅದು? ಹೀಗೆಂದು ಅದಕ್ಕೆಯೆ "ರಾಖಿನಾಂಟೆ" ಎಂದು ಬೇರೆಯಾಗಿ ಚೆಲುವಾಗಿ ಹೆಸರನ್ನಿಟ್ಟ. ತನ್ನ ಹೆಸರು ಕೂಡ ಚೆಲುವಾಗಿರಲಿಲ್ಲವೆಂದು ತೋರಿತು. ಡಾನ್ ಕ್ವಿಹೋ ಎಂದರೆ ಬಾಯಿ



ಸರದಾರಿಕೆಯ ಸನ್ನಾಹ

ತುಂಬುವ ಹೆಸರು ಎಂದು ತೋರಿತು. ತನ್ನ ಹೆಸರಿನ ಜೊತೆಯಲ್ಲಿ ತನ್ನ ಊರ ಹೆಸರೂ ಇರಲಿ ಎಂದು ಘನ ಗಂಭೀರವಾಗಿ ಕೇಳುವಂತೆ "ಲಾಮಾಂಚಾದ ಸರದಾರ, ಡಾನ್ ಕ್ವಿಹೋ" ಎಂದು ಹೆಸರನ್ನಿಟ್ಟುಕೊಂಡ.

ಹೆಸರಾಯಿತು; ಹುಮ್ಮಸ್ಸಾಯಿತು. ಆದರೆ ಇದೆಲ್ಲ ಯಾತಕ್ಕೆ? ಓದಿದ ಪ್ರತಿಯೊಂದು ಕತೆಯಲ್ಲಿಯೂ ನಾಯಕ ಯುವತಿಯೊಬ್ಬಳನ್ನು ಪ್ರೀತಿಸುತ್ತಿರುತ್ತಾನೆ. ಆ ಪ್ರೀತಿಗಾಗಿಯೆ ಸಾಹಸ ವೆಸಗುತ್ತಾನೆ. ಈ ಪ್ರೀತಿಯಿಲ್ಲದೆ ಸಾಹಸವೆ ಇಲ್ಲ. ಹಾಗಾದರೆ ತಾನು ಯಾರನ್ನು ಪ್ರೀತಿಸುವುದು? ತನ್ನ ಸ್ಫೂರ್ತಿದೇವತೆ ಯಾರು? ತಲೆ ಕೆರೆದುಕೊಂಡ. ಹೌದು, ಒಂದು ಕಾಲಕ್ಕೆ ತಾನು ಯುವಕನಾಗಿದ್ದಾಗ ಹಳ್ಳಿಯ ಒಬ್ಬ ಹುಡುಗಿಯನ್ನು ಪ್ರೀತಿಸಿದ್ದ. ಆಕೆಗೆ ಆ ವಿಷಯ ತಿಳಿಯದು. ಈತನಾದರೂ ಬಾಯಿಬಿಚ್ಚಿ ಹೇಳಿರಲಿಲ್ಲ. ಆದರೇನಾಯಿತು? ಪ್ರೀತಿ ನಿಜ. ಆಕೆಯನ್ನೇ ಇಂದು ಮತ್ತೆ ಸ್ಫೂರ್ತಿದೇವತೆಯನ್ನಾಗಿ ಮಾಡಿಕೊಳ್ಳುವುದೆಂದುಕೊಂಡ. ಆಕೆಯ ಹಳ್ಳಿಯ ಹೆಸರನ್ನು ಬದಲಾಯಿಸಿ ಡಲ್ಸಿನಿಯಾ ಎಂದ. ಹೌದು ಡಲ್ಸಿನಿಯಾ! ಎಂಥ ಹೆಸರು! ಆ ಹೆಸರಿಗಾಗಿ ಪ್ರಾಣಾರ್ಪಣೆ ಮಾಡಬಹುದು ಎಂದುಕೊಂಡ. ಎಲ್ಲ ಸಿದ್ಧತೆಯು ಆದ ಹಾಗಾಯಿತು. ಹೀಗೆ ಸನ್ನಾಹ ಮಾಡಿಕೊಂಡು ಜುಲೈ ತಿಂಗಳ ಒಂದು ಬೆಳಗಿನಲ್ಲಿ ಯಾರಿಗೂ ಹೇಳದಲೆ ಮನೆಯ ಹಿಂಬಾಗಿಲಿನಿಂದ ಹೊರಬಿದ್ದ — ಶೂರ ಸರದಾರನಾಗಿ ಸಾಹಸಗಳನ್ನೆಸಗಲಿಕ್ಕೆ!

(೨)

ಹೊರಟನೇನೋ ನಿಜ. ಆದರೆ ತಾನು ಆ ಕಾಲದ ಪದ್ಧತಿಗನುಸಾರವಾಗಿ ವಿಧಿಪೂರ್ವಕವಾಗಿ ಸರದಾರ ಪದವಿಯನ್ನು ಪಡೆಯದಿದ್ದರೆ ಕಥಾನಾಯಕರ ಹಾಗೆ ಪರಾಕ್ರಮಗಳನ್ನು ಸಾಧಿಸುವುದೆಂತು? ಲೋಕ ಬೆರಗಾಗುವುದೆಂತು? ಎಂದು ಸಂದೇಹವಾಯಿತು. ಆದರೆ ಮುಂದಿಟ್ಟ ಹೆಜ್ಜೆಯನ್ನು ಹಿಂತೆಗೆದುಕೊಳ್ಳುವ ಹಾಗಿರಲಿಲ್ಲ. ಯೋಚನೆ ಮಾಡುತ್ತಿದ್ದ ಹಾಗೆ ದಾರಿಯಲ್ಲಿ ಇನ್ನಾವ ಸರದಾರನಾದರೂ ಸಿಕ್ಕರೆ ಆತನಿಂದ ದೀಕ್ಷೆ ಪಡೆದರಾಯಿತು ಎಂದು ಸಮಾಧಾನ ಹೇಳಿಕೊಂಡ; ತನ್ನ ಸ್ಫೂರ್ತಿದೇವತೆಯಾದ ಡಲ್ಸಿನಿಯಾಳನ್ನು ಮತ್ತೊಮ್ಮೆ ಸ್ಮರಿಸಿಕೊಂಡು ಮುಂದೆ ಸಾಗಿದ. ಇಡೀ ದಿವಸ ತಿರುಗಿದರೂ ತನ್ನ ಪರಾಕ್ರಮವನ್ನು ತೋರ್ಪಡಿಸಲಿಕ್ಕೆ ಒಂದೂ ಸಂಧಿ ದೊರಕಲಿಲ್ಲ. ಉಗ್ರವಾಗಿ ಉರಿಯುತ್ತಿದ್ದ ಬಿಸಿಲು ಆತನ ತಲೆಯಲ್ಲಿದ್ದ ಬಿದ್ದ ಮಿದುಳನ್ನೂ ಕರಗಿಸಿರಬೇಕು. ಸಂಜೆಯ ಸುಮಾರಿಗೆ ಹಸಿದು ಕಂಗಾಲಾದ. ಕುದುರೆ ದಣಿದು ಒಂದು ಹೆಜ್ಜೆಯನ್ನೂ ಮುಂದಿಡದಾಯಿತು. ಅತ್ತಿತ್ತ ಕಣ್ಣು ಹಾಯಿಸುವಷ್ಟರಲ್ಲಿ ದಾರಿಹೋಕರಿಗಾಗಿ ವಸತಿ ಸೌಕರ್ಯಗಳನ್ನು ಒದಗಿಸುವ ಒಂದು ತಂಗುಮನೆ ಕಣ್ಣಿಗೆ ಬಿದ್ದಿತು. ಬಾಗಿಲಲ್ಲಿ ಇಬ್ಬರು ಯುವತಿಯರು ನಿಂತಿದ್ದರು. ಅದ್ಭುತದ ಕಲ್ಪನೆಗೆ ಮಾರುಹೋದ ಕ್ವಿಹೋನಿಗೆ ಅದು ತಂಗುಮನೆಯಾಗಿರದೆ ಯಾವುದೋ ಸರದಾರನೊಬ್ಬನ ಕೋಟೆಯಾಗಿರಲೇಬೇಕೆಂದು ತೋರಿತು. ಆ ಯುವತಿಯರು ಆ ಸರದಾರನ ಮಕ್ಕಳಾಗಿರಬೇಕು ಎಂದು ಮುಂತಾಗಿ ಯೋಚಿಸಿ ಅವರಿದ್ದೆಡೆಗೆ ಬಂದು ಘನ ಗಂಭೀರವಾಗಿ ಹೇಳಿದ. "ನೀವು ಹೆದರಬೇಕಿಲ್ಲ. ನಿಜವಾದ ಸರದಾರ ಯಾರಿಗೂ ತೊಂದರೆ ಕೊಡುವುದಿಲ್ಲ. ಅದರಲ್ಲಿಯೂ ನಿಮ್ಮಂಥ ಚೆಲುವೆಯರಿಗೆ ಯಾರು ತೊಂದರೆ ಮಾಡಿಯಾರು?" ಯುವತಿಯರು ಮಾತುಗಳನ್ನು ಕೇಳಿ ಮುಗುಳುನಗೆ ನಕ್ಕರು. ಒಂದು ಕ್ಷಣ ತಡೆದು, ಆತನನ್ನು ದಿಟ್ಟಿಸಿ ಗಟ್ಟಿಯಾಗಿ ನಕ್ಕುಬಿಟ್ಟರು. ಕ್ವಿಹೋನಿಗೆ ಆ ನಗೆಯಿಂದ ಕೊಂಚ ಕೋಪ ಬಂದಿತು. ಆದರೂ ಹೇಳಿದ–ತನ್ನದೇ ಆದ ರೀತಿಯಲ್ಲಿ: "ನಿಮ್ಮಂಥವರಿಗೆ ಸಹಾಯವಾಗಲೆಂದೇ ನಾನು ಹೊರಟದ್ದು. ಚೆಲುವೆಯರಿಗೆ ವಿನಯವೆ ಭೂಷಣ ಎಂದು ನಾನು ಹೇಳಬೇಕೆ? ನಿಮ್ಮನ್ನು ನೋಯಿಸುವುದಾಗಲಿ, ನಾಚಿಸುವುದಾಗಲಿ ನನಗೆ ಬೇಕಿಲ್ಲ. ನಿಮಗೆ ಅಧೀನನಾಗಿ ಬಾಳಬೇಕೆನ್ನುವುದೊಂದೇ ನನ್ನ ಬಯಕೆ!"

ಈ ಮಾತು ಅವರಿಬ್ಬರಿಗೆ ಎಷ್ಟರಮಟ್ಟಿಗೆ ಅರ್ಥವಾಯಿತೋ! ಅವರ ನಗು ಮಾತ್ರ ಬೆಳೆಯುತ್ತಿತ್ತು. ಕ್ವಿಹೋ ಇನ್ನೊಂದು ಭಾಷಣ ಬಿಗಿಯುವವ; ಅಷ್ಟರಲ್ಲಿ ಆ ತಂಗುಮನೆಯ ಒಡೆಯ ಹೊರಬಂದ. ದಪ್ಪನಾದ ಆತ ಆ ಕುದುರೆ, ಅದನ್ನೇರಿದ ಆ ಸವಾರನ ಅವತಾರವನ್ನು ನೋಡಿ ತಡೆಯಲಾಗದ ನಗುವನ್ನು ತಡೆದು ಸ್ವಾಗತ ಬಯಸಿದ. ಬಂದವ ಆ ಕೋಟೆಯ ಕೊತವಾಲನಾಗಿರಬೇಕೆಂದೇ ಭಾವಿಸಿ ಕ್ವಿಹೋ ಆಢ್ಯತೆಯಿಂದ ಆ ರಾತ್ರಿ ತಮ್ಮ ಉಪಚಾರ-ಊಟ ಅಲ್ಲಿಯೇ ಆಗಬೇಕೆಂದೂ, ತನ್ನ ಘನವಾದ ಕುದುರೆಯನ್ನು ಚೆನ್ನಾಗಿ ನೋಡಿಕೊಳ್ಳಬೇಕೆಂದೂ ಹೇಳಿದ. ಒಡೆಯ ಆ ಬಡಕಲು ಪ್ರಾಣಿಯನ್ನು ಕರೆದೊಯ್ಯುತ್ತಿದ್ದಾಗ ನಕ್ಕ. ತಿರುಗಿ ಬಂದಾಗ ಆ ಯುವತಿಯರಿಬ್ಬರೂ ಆತನ ಕವಚವನ್ನು ಬಿಚ್ಚುತ್ತಿದ್ದರು. ಖಡ್ಗ, ಕವಚ, ಢಾಲು ಎಲ್ಲವನ್ನು ತೆಗೆದಿಟ್ಟಾಯಿತು. ತಲೆಕಾಪನ್ನು ಬಿಚ್ಚಲು ಮಾತ್ರ ಕ್ವಿಹೋ ಒಪ್ಪಲಿಲ್ಲ. ಕಾರಣವಿಷ್ಟೇ. ಯಾರದೋ ತಲೆಅಳತೆಯದು ಅದು. ತಲೆಯ ಮೇಲೆಯೆ ಅದು ಗಟ್ಟಿಯಾಗಿ ಉಳಿಯುವಂತೆ ಅದನ್ನು ನೂಲುಪಟ್ಟಿಗಳಿಂದ ಕಟ್ಟಿಕೊಂಡಿದ್ದ. ಬಿಚ್ಚಿದರೆ ಮತ್ತೆ ಕಟ್ಟುವುದು ಕಷ್ಟ. ಹೀಗೆಂದು ಅದೊಂದನ್ನು ತಲೆಯ ಮೇಲಿಟ್ಟುಕೊಂಡೇ ಊಟಕ್ಕೆ ಸಿದ್ಧನಾದ. ಬಾಗಿಲ ಹತ್ತಿರದಲ್ಲಿಯೆ ಸಿದ್ಧಗೊಳಿಸಿದ ಮೇಜಿನೆದುರು ಬಂದು ಕುಳಿತ; ತಿನ್ನಲಿಕ್ಕೆ ವಿಶೇಷ ಆಹಾರವೇನೂ ಇರದಿದ್ದರೂ ಇದ್ದುದನ್ನು ತಿನ್ನಲು ತಲೆಕಾಪಿನಿಂದ ತೊಂದರೆಯಾಗುತ್ತಿತ್ತು. ಜಾಳಿಗೆಯ ಪರದೆ ಕ್ಷಣಕ್ಷಣಕ್ಕೂ ಅಡ್ಡಬರುತ್ತಿತ್ತು. ಪ್ರತಿಸಲವೂ ಅದನ್ನೆತ್ತಿ ತುತ್ತು ಹಾಕಿಕೊಳ್ಳಬೇಕು. ನೀರು ಕುಡಿಯುವುದಂತೂ ಪ್ರಯಾಸವೇ ಆಯಿತು. ಒಂದು ಕೈಯಿಂದ ತಲೆಕಾಪನ್ನು ಬೀಳದಹಾಗೆ ಹಿಡಿದುಕೊಳ್ಳಬೇಕು. ಇನ್ನೊಂದು ಕೈಯಿಂದ ಜಾಳಿಗೆಯನ್ನು ಎತ್ತಬೇಕು. ನೀರು ಕುಡಿಯುವುದು ಹೇಗೆ? ಕೊನೆಯಲ್ಲಿ ಆ ಯುವತಿಯರಿಬ್ಬರು ಬಿದಿರ ಕೊಳವೆಯೊಂದನ್ನು ತಂದರು; ಒಬ್ಬಳು ಅದನ್ನು ಬಾಯಿಗೆ ಹಿಡಿದಳು, ಇನ್ನೊಬ್ಬಳು ನೀರು ಸುರುವಿದಳು. ಅಂತೂ ಭೋಜನ ಸಮಾರಂಭ ಈ ರೀತಿಯಲ್ಲಿ ಮುಗಿಯಿತು. ಸರಿಯಾಗಿ ನಾಲ್ಕು ತುತ್ತು ಅನ್ನ ಹೊಟ್ಟೆಗೆ ಬಿದ್ದಿರದಿದ್ದರೂ ಕ್ವಿಹೋನಿಗೆ ಮಾತ್ರ ಪರಮಸಂತೋಷವಾಗಿತ್ತು. ತನ್ನ ಕಲ್ಪನಾಸಾಮ್ರಾಜ್ಯದಲ್ಲಿಯೇ ವಿಹರಿಸುತ್ತಿದ್ದ. ತಾನು ಬಂದು ತಂಗಿದ್ದು ಒಂದು ದುರ್ಗಮವಾದ ಕೋಟೆ; ತನ್ನನ್ನು ಉಪಚರಿಸುತ್ತಿದ್ದವರು ರಾಜಕುವರಿಯರು ಎಂದೇ ಭಾವಿಸಿದ್ದ. ಏನಾದರೂ ತನ್ನ ವೀರಜೀವನಕ್ಕೆ ಮೊದಲಾಯಿತು ಎಂಬ ಸಮಾಧಾನದಲ್ಲಿದ್ದ.

(೩)

ಎಲ್ಲರೂ ಹೊರಟುಹೋದ ಮೇಲೆ ಕ್ವಿಹೋ ಒಡೆಯನ ಕಾಲಿಗೆ ಬಿದ್ದು, "ಕೊತವಾಲರೆ, ನನ್ನದೊಂದು ಬೇಡಿಕೆ ಇದೆ. ನೀವು ನಡಸಿಕೊಡಲೇಬೇಕು. ಇಲ್ಲವೆಂದರೆ ನಾನು ಕೇಳುವ ಹಾಗೆಯೇ ಇಲ್ಲ" ಎಂದು ಮುಂತಾಗಿ ಅಂಗಲಾಚಿ ಮೇಲಕ್ಕೇಳಿಸಿದರೂ ಏಳಲಾರದೆ ಬೇಡತೊಡಗಿದ. "ಖಂಡಿತವಾಗಿ ನಡಸಿಕೊಡುವೆ. ಏನು ವಿಷಯ?" ಎಂದು ಕೇಳಿದಾಗ ಕ್ವಿಹೋ ಹೇಳಿದ. "ನಾಳೆ ಬೆಳಿಗ್ಗೆ ನೀವು ನನಗೆ ವಿಧಿಪೂರ್ವಕವಾಗಿ ವೀರನ ದೀಕ್ಷೆಯನ್ನು ದಯಪಾಲಿಸಬೇಕು. ಅಷ್ಟಾದರೆ ನಾನು ಇಡೀ ಪ್ರಪಂಚವನ್ನು ಸುತ್ತಿ ಪರಾಕ್ರಮದಿಂದ ಬೆರಗುಗೊಳಿಸಿ ನನ್ನ ಹೆಸರು ಚಿರಕಾಲ ಉಳಿಯುವಂತೆ ಮಾಡಬೇಕೆಂದಿದ್ದೇನೆ" ಎಂದು. "ಖಂಡಿತವಾಗಿ ಮಾಡುವಾ. ಇಂಥ ಮಾತಿಗೆ ಇಲ್ಲ ಎನ್ನಲಾಗುತ್ತದೆಯೆ?" ಎಂದು ಆತ ಹೇಳಿದಾಗಲೆ ಕ್ವಿಹೋ ಸಮಾಧಾನದಿಂದ ಮೇಲಕ್ಕೆದ್ದ. ತಂಗುಮನೆಯ ಒಡೆಯನಿಗೆ ಮಾತ್ರ ಆಗಲೆ ಮನದಟ್ಟಾಗಿತ್ತು—ಈತನ ತಲೆ ಸಮನಾಗಿಲ್ಲ ಎಂದು. ಆತ ಮುಂದುವರಿದು "ಪ್ರಪಂಚವನ್ನು ಬೆರಗುಗೊಳಿಸುವ ನಿಮ್ಮ ಬಯಕೆ ಸರಿಯಾದದ್ದೇ. ಆದರೆ ನಿಮ್ಮ ಹತ್ತಿರ ದುಡ್ಡಿದೆಯೆ?" ಎಂದು ಕೇಳಿದ್ದಕ್ಕೆ "ಒಂದು ಕಾಸು ಕೂಡ ಇಲ್ಲ" ಎಂದ. "ಇದು ಮಾತ್ರ ಪ್ರಮಾದ

ವಾಯಿತು. ಸಾಹಸದ ಕಥೆಗಳಲ್ಲಿ ಈ ವಿಷಯವನ್ನು ಹೇಳಿದೆಯೊ ಇಲ್ಲವೋ. ನಾನು ಮಾತ್ರ ಹೇಳಬಲ್ಲೆ. ವೀರ ಸಾಹಸಕ್ಕೆಂದು ಹೊರಟಾಗ ಆತನ ಹತ್ತಿರ ದುಡ್ಡಿರಬೇಕು. ಜೊತೆಯಲ್ಲಿ ಸೇವಕನೊಬ್ಬನಿರಬೇಕು. ನಿತ್ಯದಲ್ಲಿ ಬೇಕಾಗುವ ಸಾಮಾನುಗಳಿರಬೇಕು." ಈ ಸಲಹೆ ಸರಿಯಾದದ್ದೇ ಎಂದು ತೋರಿತು ಕ್ವಿಹೋನಿಗೆ.

ಬೆಳಗಿನಲ್ಲಿ ವೀರದೀಕ್ಷೆಯನ್ನುಪಡೆಯಬೇಕಾದವ ಮೊದಲ ರಾತ್ರಿ ತನ್ನ ಆಯುಧಗಳನ್ನು ಕಾಯುತ್ತಿರಬೇಕಾದುದು ಆ ಕಾಲದ ಒಂದು ಸಂಪ್ರದಾಯವಾಗಿತ್ತು. ಹೀಗೆಂದು ಕ್ವಿಹೋ ಹತ್ತಿರದ ಒಂದು ನೀರತೊಟ್ಟಿಯ ಕಟ್ಟೆಯಮೇಲೆ ತನ್ನಕವಚ ಖಡ್ಗಾದಿಗಳನ್ನಿಟ್ಟು ಕೈಯಲ್ಲಿ ಬರ್ಜಿಯನ್ನು ಹಿಡಿದುಕೊಂಡು ಅವನ್ನು ಕಾಯುವವನ ಹಾಗೆ ಆಚೆಯಿಂದ ಈಚೆಗೆ ಈಚೆಯಿಂದ ಆಚೆಗೆ ಹೆಜ್ಜೆ ಹಾಕತೊಡಗಿದ. ಅಲ್ಲಿಯ ಆಳುಮಕ್ಕಳಿಗೆ ಇದೊಂದು ಮೋಜಿನ ವಿಷಯವೇ ಆಗಿತ್ತು. ಕೊನೆಗೆ ರಾತ್ರಿ ಕುದುರೆಗಳಿಗಾಗಿ ನೀರು ಒಯ್ಯಲೆಂದು ಒಬ್ಬ ಆಳು ಬಂದು ಆ ಕಟ್ಟೆಯ ಮೇಲಿನ ಕವಚವನ್ನು ಸರಿಸಬೇಕೆಂದಾಗ ಕ್ವಿಹೋ ಅವನ ಮೇಲೆ ಏರಿಹೋದ. "ಎಲೈ, ಹುಲುಮಾನವನೇ. ಬದುಕು ಬೇಡವಾಗಿದ್ದರೆ ಆ ಕವಚಕ್ಕೆ ಕೈ ಇಕ್ಕು" ಎಂದು ಗದ್ದರಿಸಿದ. ತನ್ನ ಕೆಲಸದ ಕಡೆಗೆ ಗಮನವಿದ್ದ ಆ ಆಳು ಆತನ ಮಾತನ್ನು ಕೇಳದೆ ಕವಚವನ್ನು ಕೆಳಗಿರಿಸಿದ. ಕ್ವಿಹೋನ ಕೈಯಲ್ಲಿಯ ಬರ್ಜಿಯ ಕಟ್ಟಿಗೆಯ ಏಟು ಆಳಿನ ತಲೆಯಮೇಲೆ ಬಿದ್ದಿತು. ಆಳು ನೆಲಕ್ಕುರುಳಿದ. ಕ್ವಿಹೊ ಮಾತ್ರ ಕವಚವನ್ನು ಮತ್ತೆ ಕಟ್ಟೆಯ ಮೇಲಿರಿಸಿ ಶಾಂತವಾಗಿ ಅಡ್ಡಾಡತೊಡಗಿದ. ಕೆಲ ಹೊತ್ತಾದ ಮೇಲೆ ಇನ್ನೊಬ್ಬ ಆಳು ಬಂದ. ಅವನಿಗೂ ಅದೇ ಗತಿಯಾಯಿತು. ಇದನ್ನು ತಿಳಿದು ಉಳಿದವರು ಗದ್ದಲವನ್ನೆಬ್ಬಿಸಿ ಆತನ ಮೇಲೆ ಕಲ್ಲು ತೂರತೊಡಗಿದರು. ಒಡೆಯ ಎದ್ದು ಬಂದು ಎಲ್ಲರಿಗೂ ಸಮಾಧಾನ ಹೇಳಿದ– ಆತನಿಗೆ ತಲೆ ಸಮನಾಗಿಲ್ಲ, ಆತನ ಗೊಡವೆಗೆ ಹೋಗದಿರುವುದೇ ಒಳ್ಳೆಯದು ಎಂದು. ಕ್ವಿಹೊ ಮಾತ್ರ ತನ್ನ ಆಯುಧಪಾಲನೆಯನ್ನು ನಿರ್ವಿ



ಡಾನ್ ಕ್ವಿಹೋಗೆ ವೀರದೀಕ್ಷೆ ಕೊಟ್ಟದ್ದು

ಕಾರನಾಗಿ ಮಾಡುತ್ತಲೇ ಇದ್ದ.

ಆದಷ್ಟು ತೊಂದರೆ ಸಾಕು. ಈತನನ್ನು ಸಾಧ್ಯವಿದ್ದಷ್ಟು ಬೇಗನೆ ಸಾಗಿಸುವುದೇ ಒಳ್ಳೆಯದೆಂದು ಬಗೆದು ಒಡೆಯ ಬಂದು ಕ್ವಿಹೋನಿಗೆಂದ: "ಇದುವರೆಗಿನ ಆಯುಧಪಾಲನೆ ಬೇಕಾದಷ್ಟಾಯಿತು ಎಂದು ನನಗನಿಸುತ್ತದೆ. ತಮ್ಮ ಒಪ್ಪಿಗೆಯಿದ್ದರೆ ವೀರದೀಕ್ಷೆಯ ಕೆಲಸವನ್ನು ಈಗಲೇ ಮುಗಿಸಿಬಿಡಬಹುದು.'' ಕ್ವಿಹೋ ಸಂತೋಷದಿಂದ ಸಮ್ಮತಿಸಿದ. ಒಡೆಯ ಪೆಟ್ಟಿಗೆಯೊಳಗಿಂದ ಒಂದು ಹಳೆಯ ಲೆಕ್ಕದ ಪುಸ್ತಕವನ್ನು ಹಿಡಿದುಕೊಂಡು ಮಂತ್ರಗಳನ್ನು ಓದುತ್ತಿದ್ದವನ ಹಾಗೆ ಪುಟುಪುಟಿಸಿದ. ಮಗುವೊಂದು ಬಂದು ಮೇಣಬತ್ತಿಯನ್ನು ಉರಿಯಿಸಿ ಖಡ್ಗವನ್ನೆತ್ತಿ ಮೂರು ಸಲ ಅದರ ತುದಿಯಿಂದ ಕ್ವಿಹೋನ ತೋಳನ್ನು ಮುಟ್ಟಿತು. ದೀಕ್ಷೆ ಮುಗಿಯಿತು, ಎಂದು ಒಡೆಯ ಸಾರಿದ. ಇದೆಲ್ಲವೂ ನಡೆದಾಗ ಅಲ್ಲಿ ನೆರೆದವರಿಗೆಲ್ಲ ನಗು ತಡೆಯದಾಗಿತ್ತು. ಆದರೆ ನೀರ ತೊಟ್ಟಿಯ ಹತ್ತಿರದಲ್ಲಿ ನಡೆದುದನ್ನು ನೆನೆದು ಸುಮ್ಮನಾಗಿದ್ದರು. ಎಲ್ಲವೂ ಮುಗಿದ ನಂತರ ಆ ಇಬ್ಬರಲ್ಲಿಯ ಒಬ್ಬ ಯುವತಿ ಮುಂದೆ ಬಂದು ಖಡ್ಗವನ್ನು ಒರೆಯಲ್ಲಿ ಹಾಕಿ ಆತನ ನಡುವಿಗೆ ಕಟ್ಟಿದಳು. ಇನ್ನೊಬ್ಬಳು ಆತನನ್ನು ಕೈಹಿಡಿದು ಕುದುರೆಯನ್ನೇರಿಸಿದಳು. ಕ್ವಿಹೋನ ಹೃದಯ ಆನಂದ ಅಭಿಮಾನಗಳಿಂದ ತುಂಬಿ ಬಂದಿತ್ತು. ಸುತ್ತಲಿನವರೆಲ್ಲರನ್ನೂ ಬಾಯಿತುಂಬ ಆಭಾರಮನ್ನಿಸಿ ಬೆಳಗಾಗುವ ಮುನ್ನವೇ ಅವರನ್ನು ಬೀಳ್ಕೊಟ್ಟು ಸಾಗಿದ.

( ೪ )

ಬೆಳಗಿನ ನಸುಬೆಳಕಿನಲ್ಲಿ ಹೊರಟಿರುವಾಗ ತಂಗುಮನೆಯವನ ಸಲಹೆ ನೆನಪಾಗಿ ತಾನು ಸಾಹಸಕ್ಕಾಗಿ ಹೊರಡುವ ಮುನ್ನ ಮತ್ತೊಮ್ಮೆ ಮನೆಗೆ ಹೋಗಿ ಸೇವಕ-ಸಾಮಾನುಗಳನ್ನು ಸಂಗ್ರಹಿಸಿಕೊಂಡೇ ಹೊರಡುವುದು ಒಳ್ಳೆಯದೆಂದು ತೋರಿತು. ಮನೆಯ ದಾರಿಯನ್ನು ಗುರುತಿಸಿದ ಆತನ ಕುದುರೆ ಉತ್ಸಾಹದಿಂದ ಓಡತೊಡಗಿತು. ಒಂದೆರಡು ಮೈಲಿ ಬಂದಿರಬೇಕು. ದಾರಿಯಲ್ಲಿ ಇದಿರಾಗಿ ವ್ಯಾಪಾರಿಗಳ ಗುಂಪೊಂದು ಬಂದಿತು. ಅವರನ್ನು ಕಂಡೊಡನೆಯೆ ಕ್ವಿಹೋ ತಾನು ಓದಿದ ಕತೆಗಳಲ್ಲಿಯ ವೀರ ಸರದಾರರಂತೆ ನಡುದಾರಿಯಲ್ಲಿ ಕುದುರೆಯನ್ನು ನಿಲ್ಲಿಸಿ ಅವರಿಗಾಗಿ ಕಾಯುತ್ತ ನಿಂತ. ಅವರು ಹತ್ತಿರ ಬಂದ ಕೂಡಲೆ "ನನ್ನ ಸ್ಫೂರ್ತಿ ದೇವತೆಯಾದ ಡಲ್ಸಿನಿಯಾಳಿಗಿಂತ ಚೆಲುವೆಯಾದವಳು ಈ ಪ್ರಪಂಚದಲ್ಲಿ ಇನ್ನೊಬ್ಬಳಿಲ್ಲ ಎಂಬುದನ್ನು ನೀವು ಒಪ್ಪದಿದ್ದರೆ ನೀವು ಮುಂದೆ ಸಾಗುವ ಹಾಗಿಲ್ಲ," ಎಂದು ಆರ್ಭಟಿಸಿದ. ಈತನಿಗೆ ಅರೆಹುಚ್ಚಾಗಿರಬೇಕೆಂದು ಅವರಿಗೆ ಹೊಳೆದರೂ ಅವರಲ್ಲಿಯ ಒಬ್ಬ ನಗೆಯಾಡಲೆಂದು ಹೇಳಿದ: ''ಸರದಾರರೇ, ನಿಮ್ಮ ಸೌಂದರ್ಯದೇವತೆಯನ್ನು ನಾವು ಇದುವರೆಗೆ ನೋಡಲಿಲ್ಲ. ಒಮ್ಮೆ ನಮಗೆ ತೋರಿಸಿದರೆ, ಆಕೆ ಅಂಥ ಚೆಲುವೆ ಎಂದು ನಮಗೆ ತೋರಿದರೆ, ನಿಮ್ಮ ಮಾತನ್ನು ನಾವು ಖಂಡಿತವಾಗಿ ಒಪ್ಪುತ್ತೇವೆ" ಎಂದು. ಕ್ವಿಹೋ ಹೇಳಿದ: "ಎಲೈ ಭಗವಂತನೆ, ನೋಡಿ ಒಪ್ಪುವುದು ಯಾವ ದೊಡ್ಡ ಮಾತು? ನೋಡದೆಯೆ ನೀವು ಒಪ್ಪುವ ಹಾಗಿರದಿದ್ದರೆ ನೀವೆಲ್ಲರೂ ಒಟ್ಟಾಗಿಯಾಗಲಿ, ಒಬ್ಬೊಬ್ಬರಾಗಿಯಾಗಲಿ ನನ್ನೊಡನೆ ಯುದ್ಧ ಮಾಡಬೇಕು." ಮೊದಲನೆಯವ ಮತ್ತೆ ಹೇಳಿದ: ''ಆಕೆಯನ್ನಲ್ಲದಿದ್ದರೂ ಆಕೆಯ ಒಂದು ಚಿತ್ರವನ್ನಾದರೂ ನಮಗೆ ತೋರಿಸಿರಿ. ಆಕೆ ಅಪ್ರತಿಮ ಸುಂದರಿ ಎನ್ನುವುದನ್ನು ಒಪ್ಪಲು ! ನಾವು ಒಂಟಿಕಾಲ ಮೇಲೆ ಸಿದ್ಧರಿದ್ದೇವೆ. ನಿಮ್ಮ ದೇವತೆಗೆ ಒಂದು ಕಣ್ಣು ಕುರುಡು, ಇನ್ನೊಂದು ಕಣ್ಣು ಕೆಂಡಕಾರುತ್ತಿದ್ದರೂ ಒಪ್ಪುತ್ತೇವೆ, ಆಯಿತೆ?" ತನ್ನ ಸ್ಫೂರ್ತಿದೇವತೆಯನ್ನು ಈತ ಅವಮಾನ ಮಾಡುತ್ತಿದ್ದಾನೆಂದು ಕ್ವಿಹೋನಿಗೆ ತಡೆಯಲಾಗದ ರೋಷ ಉಕ್ಕಿತು. ಕೋಪಾತಿರೇಕದಿಂದ ಉರಿಯುತ್ತ "ನನ್ನ ಡಲ್ಸಿನಿಯಾಳನ್ನು ಅವಮಾನಗೊಳಿಸುತ್ತೀರಾ?'' ಎಂದವನೆ ಅವರ ಮೇಲೆ ಏರಿಹೋದ. ಆದರೆ ಏನಾಯಿತೊ ಯಾರು ಬಲ್ಲರು? ಕುದುರೆ ಕುಪ್ಪಳಿಸಿತು. ಕ್ವಿಹೋ ನೆಲಕ್ಕುರುಳಿದ. ತನ್ನ ಕವಚಾಯುಧಗಳ ಗೊಂದಲದಲ್ಲಿ ಸಿಲುಕಿ ಬಿದ್ದ ಆತನಿಗೆ ಏಳಲೂ ಆಗಲಿಲ್ಲ. ಅಲ್ಲಿಂದಲೇ ಕೂಗಿಕೊಂಡ. "ನನ್ನ ಕುದುರೆ ಕೈಕೊಟ್ಟಿತೆಂದು ಪಾರಾದಿರಿ. ಇಲ್ಲವಾದರೆ ಚೆನ್ನಾಗಿ ಕೈ ತೋರಿಸುತ್ತಿದ್ದೆ" ಎಂದು. ಇದನ್ನು ಕೇಳಿ ಹೊರಟುಹೋಗುವುದರಲ್ಲಿದ್ದ ವ್ಯಾಪಾರಿಗಳ ಆಳು ಒಬ್ಬ "ಹೀಗೇನು?" ಎಂದು ಹಿಂದಿರುಗಿ ಹತ್ತಿರ ಬಂದು ಆತನ ಬರ್ಚಿಯನ್ನೇ ಎತ್ತಿಕೊಂಡು ಅದನ್ನು ತುಂಡರಿಸಿ, ಅದರ ಬಡಿಗೆಯಿಂದ ತನ್ನ ಕೈ ಸೋಲುವ ವರೆಗೆ ಕ್ವಿ-ಹೋನನ್ನು ಹಣಿದು ಹೊರಟುಹೋದ. ಕೆಲ ಹೊತ್ತು ನರಳುತ್ತ ಬಿದ್ದುಕೊಂಡು ಕ್ವಿಹೋ ಏಳಲೆತ್ನಿಸಿದ. ಮೈಯೆಲ್ಲ ನೋವಾಗಿತ್ತು. "ಕುದುರೆಯಿಂದಲ್ಲವೆ ಈ ಅನರ್ಥವಾದದ್ದು? ಏನು ಮಾಡುವುದು? ವೀರನಾಗಿದ್ದವ ಇಂಥ ಸನ್ನಿವೇಶಗಳಿಗೂ ಸಿದ್ಧನಾಗಿರಬೇಕು" ಎಂದು ಸಮಾಧಾನ ಹೇಳಿಕೊಂಡ.

ಅವನ ಊರಿನ ಕೆಲವು ಜನ ಅದೇ ದಾರಿಯಿಂದ ಬರುತ್ತಿದ್ದಾಗ ಸರದಾರನ ದುರವಸ್ಥೆಯನ್ನು ಕಂಡು ಆತನನ್ನೆತ್ತಿ ಒಂದು ಕತ್ತೆಯ ಮೇಲೆ ಕುಳ್ಳಿರಿಸಿಕೊಂಡು ಮನೆಗೆ ತಲುಪಿಸಿದರು. ಹೇಳದಲೆ ಮನೆಯಿಂದ ಕಣ್ಮರೆಯಾಗಿದ್ದರಿಂದ ಮನೆಯಲ್ಲಿಯ ಅಣ್ಣನ ಮಗಳು, ಮನೆಯಾಳು ಇಬ್ಬರಿಗೂ ಚಿಂತೆಯಾಗಿತ್ತು. ಹೇಗಾದರೂ ಆಗಲಿ, ಮನೆಗೆ ಹಿಂತಿರುಗಿದ ಎಂಬ ಸಮಾಧಾನ ಅವರ ಹಾಗೆಯೆ ಊರವರಿಗೂ ಆಯಿತು. ಎಂದಿನಂತೆ ಸಾಯಂಕಾಲ ಪಾದ್ರಿ,

ಯೂ ಬಂದ. ನಡೆದ ಸಮಾಚಾರವೇನೆಂದು ಎಷ್ಟು ಪರಿಯಿಂದ ಕೇಳಿದರೂ ಕ್ವಿಹೋ ಬಾಯಿ ಬಿಚ್ಚಲಿಲ್ಲ. ಮೈನೋವಿನಿಂದ ಹಣ್ಣಾಗಿ ಹೋಗಿದ್ದ. ಕೊನೆಗೆ ಕ್ಷೀಣವಾಗಿ ಉಸಿರಿದ: "ಏನು ಹೇಳಲಿ, ಗೆಳೆಯ, ಭಯಂಕರರಾದ ಹತ್ತು ಜನ ರಾಕ್ಷಸರೊಡನೆ ಹೋರಾಡುತ್ತಿದ್ದಾಗ ಕುದುರೆಯಿಂದ ಬಿದ್ದೆ. ಮೈತುಂಬ ನೋವಾಗಿದೆ, ತುಸು ಗುಣವಾದ ಮೇಲೆ ನಡೆದ ಅದ್ಭುತವನ್ನು ಸವಿಸ್ತಾರವಾಗಿ ಹೇಳುವೆ.'' ಇಷ್ಟು ಹೇಳಿ ಸುಮ್ಮನಾದ.

ಊಟ ಉಪಚಾರಗಳಾದ ಮೇಲೆ ಡಾನ್‌ನಿಗೆ ನಿದ್ರೆ ಹತ್ತಿತು. ಈ ಎಲ್ಲ ಅನಾಹುತಕ್ಕೆ ಕ್ವಿಹೋನ ಪುಸ್ತಕಗಳೇ ಕಾರಣ ಎಂದು ಮನೆಯಾಳು, ಮಗಳು ಮತ್ತು ಪಾದ್ರಿ ಮೂವರೂ ಸೇರಿ ಮನೆಯಲ್ಲಿಯ ಎಲ್ಲ ಪುಸ್ತಕಗಳನ್ನು ಕಲೆಹಾಕಿ ಸುಟ್ಟುಬಿಟ್ಟರು. ಎಚ್ಚರಾದ ಮೇಲೆ ತನ್ನ ಪುಸ್ತಕಗಳೆಲ್ಲಿ ಎಂದು ಕೇಳಿದಾಗ ಮಗಳು ಹೇಳಿದಳು: ''ನೀವು ಮಲಗಿದಾಗ ಆಕಾಶದಿಂದ ಯಕ್ಷಿಣಿಯೊಬ್ಬಳು ಇಳಿದು ಬಂದು ಎಲ್ಲ ಪುಸ್ತಕಗಳನ್ನು ಸುಟ್ಟುಬಿಟ್ಟಳು. ಇಗೋ, ಇಲ್ಲಿ ಬೂದಿ ಬಿದ್ದಿದೆ. ನಾನಂತೂ ತುಂಬ ಹೆದರಿಕೊಂಡು ಏನೂ ಮಾಡದವಳಾದೆ," ಎಂದು. ಕ್ವಿಹೋ ಹೇಳಿದನು: "ನೀನು ಗಾಬರಿಯಾಗಬೇಕಾದುದೇ ಇಲ್ಲ. ಆ ಯಕ್ಷಿಣಿಯನ್ನು ನಾನು ಚೆನ್ನಾಗಿ ಬಲ್ಲೆ. ನನಗೆ ಮೈಯಲ್ಲಿ ಸರಿಯಾಗಲಿ ಆಕೆಯ ಸಮಾಚಾರವನ್ನು ಆಮೇಲೆ ಸರಿಯಾಗಿ ತೆಗೆದುಕೊಳ್ಳುತ್ತೇನೆ.''

ಮುಂದೆ ಹದಿನೈದು ದಿನ ಡಾನ್ ಎಲ್ಲಿಯೂ ಹೋಗಲಿಲ್ಲ. ಆದರೂ ಮತ್ತೆ ಹೊರಡುವ ಸಿದ್ಧತೆಗಳನ್ನು ಮಾಡಿಕೊಳ್ಳುತ್ತಿದ್ದ. ಹೊಸ ಢಾಲು ಬರ್ಚಿಗಳನ್ನು ಸಜ್ಜುಗೊಳಿಸಿದ. ದುಡ್ಡು ಕಲೆಹಾಕಿದ. ಸ್ಯಾಂಕೋ ಪಾಂಝಾ ಎಂಬ ಸೇವಕನನ್ನು ಗೊತ್ತುಮಾಡಿಕೊಂಡ. ಸ್ಯಾಂಕೊ ಬಡವ, ಪ್ರಾಮಾಣಿಕ, ಸರಳ ಸ್ವಭಾವದವ. ಮನೆಯಲ್ಲಿ ಹೆಂಡತಿ, ಮನೆತುಂಬ ಮಕ್ಕಳು. ಆದರೆ ಡಾನ್ ಕ್ವಿಹೋನ ಅದ್ಭುತ ಸಾಹಸಗಳ ಅದ್ಭುತ ವರ್ಣನೆಗಳನ್ನು ಕೇಳಿ ಪೂರ್ತಿ ಮೋಸಹೋಗಿದ್ದ. ತಾವಿಬ್ಬರೂ ಸಾಹಸಗಳನ್ನೆಸಗಿದರೆ ಸಂಪತ್ತು ಸನ್ಮಾನಗಳೆರಡೂ ಸಿಕ್ಕು ಸುಖವಾಗಿ ಬಾಳಬಹುದು ಎಂದು ಮುಂತಾಗಿ ಹೇಳಿದ್ದನ್ನು ಸುಲಭದಲ್ಲಿ ನಂಬಿದ್ದ. ತಾವಿಬ್ಬರು ಸೇರಿ ಒಂದು ನಡುಗಡ್ಡೆಯನ್ನು ಗೆಲ್ಲತಕ್ಕದ್ದೆಂದೂ ಅನಂತರ ಆ ನಡುಗಡ್ಡೆಗೆ ಸ್ಯಾಂಕೋನೇ ಗವರ್ನರನಾಗಬೇಕೆಂದೂ ಹೇಳಿದ್ದ. ಇದೆಲ್ಲಕ್ಕೆ ಮರುಳಾಗಿ ಡಾನ್ ಹೇಳಿದ ಹಾಗೆ ಕೇಳಿಕೊಂಡು ಸ್ಯಾಂಕೋ ಆತನನ್ನು ಹಿಂಬಾಲಿಸಲು ಸಿದ್ಧನಾಗಿದ್ದ. ಎಲ್ಲವೂ ಅಣಿಯಾದ ಮೇಲೆ ಒಂದು ರಾತ್ರಿ ಇಬ್ಬರೂ ಯಾರಿಗೂ ಹೇಳದೆ ಹೊರಬಿದ್ದರು. ಕ್ವಿಹೋ ತನ್ನ "ರಾಝಿ ನಾಂಟೆ" ಯನ್ನು ಸವಾರಿ ಮಾಡಿದ್ದ, ಸ್ಯಾಂಕೋ ತನ್ನ "ಡ್ಯಾಪಲ್" ಎಂಬ ಕತ್ತೆಯನ್ನೇರಿದ್ದ. ಆದರೆ ಅವನ ಪಾಲಿಗೆ ಅದು ಕನಸಿನ ಕುದುರೆಯೇ ಆಗಿತ್ತು. "ಹಾಗೆ ನೋಡಿದರೆ ಬರೀ ಗವರ್ನರ ಯಾಕೆ?" ಡಾನ್ ಹೇಳುತ್ತಿದ್ದ. "ಸಾಧ್ಯವಾದರೆ ನಿನ್ನನ್ನು ಒಂದು ರಾಜ್ಯಕ್ಕೆ ಅರಸನನ್ನಾಗಿಯೇ ಮಾಡಿಬಿಡಬಹುದು." ಸ್ಯಾಂಕೋ ಹೇಳುತ್ತಿದ್ದ: "ತಾವು ಹೇಗೆ ಹೇಳುತ್ತಿರೋ ಹಾಗಾಗಲಿ. ನನಗೇನು ಗೊತ್ತಾದೀತು? ನನ್ನ ಯೋಗ್ಯತೆ ಎಷ್ಟು ಎನ್ನುವುದು ತಮ್ಮಂಥ ಸರದಾರರಿಗೆ ತಿಳಿಯಬೇಕಲ್ಲದೆ ನನಗೆ ತಿಳಿಯುತ್ತದಯೆ?" ಎಂದು ಮುಂತಾಗಿ.

( ೫ )

ಈ ರೀತಿ ಗಾಳಿಗೋಪುರಗಳನ್ನು ಕಟ್ಟುತ್ತ ಸಾಗಿದರು. ಒಂದು ಬಯಲನ್ನು ದಾಟುತ್ತಿದ್ದಾಗ ಕ್ವಿಹೋ ನೆಟ್ಟ ದೃಷ್ಟಿಯಿಂದ ದೂರದಲ್ಲಿ ನೋಡುತ್ತ ಸ್ಯಾಂಕೋನಿಗೆ ಹೇಳಿದ: "ಅಲ್ಲಿ ನೋಡು, ಸ್ಯಾಂಕೋ, ನಮ್ಮ ದೈವಕ್ಕೆ ಎಣೆ ಇಲ್ಲ. ನಲವತ್ತು ಜನ ರಾಕ್ಷಸರು ಹೇಗೆ ಸಾಲು ಸಾಲಾಗಿ ನಿಂತಿದ್ದಾರೆ. ಅವರನ್ನು ಮುಗಿಸಿಯೆ ನಾವು ಮುಂದಕ್ಕೆ ಸಾಗಬೇಕು. ಈ ಪ್ರಪಂಚವನ್ನು ಇಂಥ ಕ್ರೂರ ರಾಕ್ಷಸರಿಂದ ಬಿಡುಗಡೆ ಮಾಡಿದ ಪುಣ್ಯ ನಮ್ಮದಾಗುತ್ತದೆ." "ಎಲ್ಲಿ



ಡಾನ್ ಕ್ವಿಹೋಃ ಪವನಚಕ್ಕಿಯ ಮೇಲೆ ದಾಳಿಮಾಡಿದ ಫಲ

ದ್ದಾರೆ ಅವರು ?" ಎಂದು ಸ್ಯಾಂಕೋ ಕೇಳಿದ್ದಕ್ಕೆ ಕ್ವಿಹೋ "ಕಾಣುವುದಿಲ್ಲವೆ ಅಲ್ಲಿ? ನೋಡು, ಹೇಗೆ ಕೈ ಚಾಚಿ ಕರಾಳವಾಗಿ ನಿಂತಿವೆ" ಎಂದ. ಸ್ಯಾಂಕೋ ಹೇಳಿದ: "ಅವರು ರಾಕ್ಷಸರಲ್ಲ, ಯಜಮಾನರೆ. ಸಾಲುಸಾಲಾಗಿ ನಿಂತ ಅವು ಪವನಚಕ್ಕಿಗಳು". "ಹುಚ್ಚು ನಿನಗೆ. ನಿನ್ನ ಬುದ್ಧಿಗೆ ಯಾವುದೂ ತಿಳಿಯುವುದಿಲ್ಲ. ನನ್ನ ಮಾತು ಕೇಳು. ಅವರು ನಿಜವಾಗಿಯೂ ರಾಕ್ಷಸರು. ಒಂದು ವೇಳೆ ನಿನಗೆ ಹೆದರಿಕೆಯಾಗುತ್ತಿದ್ದರೆ ನೀನು ಇಲ್ಲಿಯೇ ನಿಂತುಕೋ. ಒಂದೇಟಿಗೆ ನಾನು ಅವರನ್ನು ಮುಗಿಸಿ ಬರುತ್ತೇನೆ," ಎಂದವನೆ ಕ್ವಿಹೋ ಕುದುರೆಯನ್ನು ಓಡಿಸಿ ಆ ಪವನ ಚಕ್ಕಿಗಳಿದ್ದೆಡೆ ಧಾವಿಸಿದ. ಗಾಳಿ ಬೀಸತೊಡಗಿತು. ಪವನಚಕ್ಕಿಗಳು ವೇಗವಾಗಿ ತಿರುಗತೊಡಗಿದವು. ಅದನ್ನು ಕಂಡು ವೀರಾವೇಶ ತುಂಬಿದ ಡಾನ್ ಅವುಗಳ ಮೇಲೆ ಏರಿ ಹೋದ. ಮೊದಲನೆಯದರ ಹತ್ತಿರ ಹೋಗುವುದೇ ತಡ. ತಿರುಗುತ್ತಿದ್ದ ಚಕ್ಕಿಯಲ್ಲಿ ಬರ್ಚಿ ಸಿಕ್ಕು ಬಿದ್ದು ಚೂರುಚೂರಾಯಿತು. ಇನ್ನೊಂದು ಫಲಕ ಕ್ವಿಹೋನನ್ನೂ ಆತನ ಕುದುರೆಯನ್ನೂ ಕೂಡಿಯೆ ಗಾಳಿಯಲ್ಲಿ ತೂರಿ ಇಪ್ಪತ್ತಡಿಯಾಚೆ ಹೋಗಿ ಬೀಳುವಂತೆ ತಾಗಿತು. ಇದನ್ನೆಲ್ಲ ನಿರುಪಾಯನಾಗಿ ನೋಡುತ್ತ ನಿಂತಿದ್ದ ಸ್ಯಾಂಕೋ ಸಾಧ್ಯವಿದ್ದಷ್ಟು ವೇಗವಾಗಿ ಕತ್ತೆಯನ್ನು ಓಡಿಸಿ ಸಹಾಯಕ್ಕೆಂದು ಬಂದು ಎಚ್ಚರ ತಪ್ಪಿ ಬಿದ್ದ ಕ್ವಿಹೋನನ್ನು ಉಪಚರಿಸಿದ. ಡಾನ್ ಎಚ್ಚರ ಬಂದು ಪಿಳಿಪಿಳಿ ಕಣ್ಣು ಬಿಟ್ಟಾಗ ಸ್ಯಾಂಕೋ ಎಂದ: "ನಾನು ನಿಮಗೆ ಮೊದಲಿಗೆಯೆ ಹೇಳಿರಲಿಲ್ಲವೆ ಅವರು ರಾಕ್ಷಸರಲ್ಲ ಎಂದು? ತಲೆ ಸಮನಾಗಿದ್ದ ಯಾರಿಗೂ ಅಷ್ಟು ತಿಳಿಯಬಹುದಾಗಿತ್ತು." ಆದರೆ ತನ್ನ ಯೋಚನೆಯಲ್ಲಿಯೇ ಇದ್ದ ಕ್ವಿಹೋ ಹೇಳಿದ: "ಶಾಂತನಾಗು ಸ್ಯಾಂಕೋ; ನಿನಗೆ ಇದು ತಿಳಿಯದ.; ನನ್ನ ಪುಸ್ತಕಗಳನ್ನು ಸುಟ್ಟ ಯಕ್ಷಿಣಿಯದೇ ಇದೆಲ್ಲ ಆಟ. ಆಕೆಯ ಮಾಟದಿಂದ ಈ ರಾಕ್ಷಸರನ್ನೆಲ್ಲ ಪವನಚಕ್ಕಿಗಳನ್ನಾಗಿ ಮಾಡಿದಳು. ಪ್ರಪಂಚದಲ್ಲಿಯ ಎಲ್ಲ ಯಕ್ಷಿಣಿಯರನ್ನು ಈ ನನ್ನ ಖಡ್ಗದಿಂದ



ಡಾನ್ ಕ್ವಿಹೋಗೆ ಕುರುಬರ ಕವಣೆಯ ರುಚಿ ತಿಳಿದದ್ದು

ನಿರ್ನಾಮ ಮಾಡದ ಹೊರತು ನನಗೆ ಸಮಾಧಾನವಿಲ್ಲ." ಸ್ಯಾಂಕೋ ನಿಟ್ಟುಸಿರೆಳೆದು ಯಜಮಾನನನ್ನು ಮೇಲಕ್ಕೇಳಿಸಿದ. ಕುದುರೆಗೂ ಏಟು ಬಿದ್ದಿತ್ತು. ಆದರೂ ಮುಂದೆ ಸಾಗಬಹುದಾಗಿತ್ತು. ಎಲ್ಲ ಸಾಮಾನುಗಳನ್ನು ಒಟ್ಟುಗೂಡಿಸಿಕೊಂಡು ಇಬ್ಬರೂ ಆ "ರಾಕ್ಷಸರನ್ನು" ಅಲ್ಲಿಯೇ ಬಿಟ್ಟು ಮುಂದೆ ಸಾಗಿದರು.

ಮರುದಿನ ಕತ್ತೆಯೊಂದನ್ನೇರಿ ಸಾಗಿದ್ದವನ ಕೂಡ ಕಾಲುಕೆದರಿ ಕ್ವಿಹೋ ಜಗಳ ಹೂಡಿದ. ಯುದ್ಧವಾಯಿತು. ಡಾನ್ ಗೆದ್ದ. ಆದರೆ ತುಮುಲದಲ್ಲಿ ಆತನ ತಲೆಕಾಪಿನ ಅರ್ಧಭಾಗ ಕಿತ್ತು ಹೋಯಿತು. ಬಲಗಿವಿಯ ಒಂದು ಭಾಗವೂ ಕತ್ತರಿಸಿಹೋಯಿತು. ಆದರೆ ಆತನಿಗೆ ಹರಿದ ಕಿವಿಗಿಂತ ಮುರಿದ ತಲೆಕಾಪಿನದೇ ಹೆಚ್ಚಿನ ಯೋಚನೆಯಾಗಿತ್ತು. ಸೋತು ಓಡಿದವನಮೇಲೆ ಸೇಡು ತೀರಿಸಿಕೊಳ್ಳಬೇಕೆಂಬ ಕೋಪಾತಿರೇಕವೂ ಉರಿಯುತ್ತಿತ್ತು. ಇದಿರು ಬಂದ ಮೊದಲನೆಯ ವೀರ ಸರದಾರನನ್ನು ಸೋಲಿಸಿ ಆತನಿಂದಲೇ ತಲೆ ಕಾಪನ್ನು ಪಡೆಯುವುದು ಎಂದು ಆ ಕ್ಷಣಕ್ಕೆಯೆ ನಿರ್ಧಾರವಮಾಡಿದ.

( ೬ )

ಇಂಥ ವಿಕ್ರಮಗಳನ್ನು ಸಾಧಿಸುತ್ತ ಮುಂದೆ ಸಾಗುತ್ತಿದ್ದಾಗ ದೂರದಲ್ಲಿ ಧೂಳಿಯ ಮೋಡವೊಂದು ಕಾಣಿಸಿತು. ತಮ್ಮೆಡೆಗೆಯೇ ಅದು ಬರುತ್ತಿದ್ದ ಹಾಗೂ ಕಾಣಿಸಿತು. ಡಾನ್ ಸಂತೋಷಪರವಶನಾಗಿ ಚೀರಿದ. "ನೋಡು ಸ್ಯಾಂಕೊ, ಈಗ ನೋಡು ನನ್ನ ವಿಕ್ರಮವನ್ನು. ಅಗೊ ಅಲ್ಲಿ ಧೂಳಿಯ ಮೋಡ ಬರುತ್ತಿದೆಯಲ್ಲ, ಅದೇನು ಗೊತ್ತಿದೆಯೆ ? ಅದು–ಸೈನ್ಯ. ರಾಷ್ಟ್ರರಾಷ್ಟ್ರಗಳ ಸೈನ್ಯವೇ ಆರ್ಭಟಿಯಿಂದ ಈ ಕಡೆಗೆ ಬರುತ್ತಿದೆ. ನನ್ನ ಹೆಸರು ಅಜರಾಮರವಾಗುವ ಕಾಲ ಬಂದಿದೆ." ಎಂದ. "ಹಾಗಿದ್ದರೆ ಎರಡು ಸೈನ್ಯ ಬರುತ್ತಿದ್ದ ಹಾಗಿದೆಯಲ್ಲ ?" ಎಂದು ಸ್ಯಾಂಕೊ ಇನ್ನೊಂದೆಡೆ ತೋರಿಸಿ ಹೇಳಿದ. ತಿರುಗಿ ನೋಡಿದಾಗ ಅಲ್ಲಿಯೂ ಧೂಳಿಯ ಮೋಡ. ಕ್ವಿಹೋನ ಆನಂದಕ್ಕೆ ಪಾರವೇ ಉಳಿಯಲಿಲ್ಲ. ಇಷ್ಟರಲ್ಲಿಯೇ ಎರಡು ಸೈನ್ಯಗಳ ನಡುವೆ ಯುದ್ಧ ನಡೆಯುತ್ತದೆ ಎಂದು ತೂರಾಡಿದ.

ನಿಜದ ಸಂಗತಿಯೆಂದರೆ ಎರಡು ಕಡೆಯಿಂದ ಎರಡು ಕುರಿಗಳ ಹಿಂಡುಗಳು ಬರುತ್ತಿದ್ದವು. ಅದರಿಂದಾಗಿ ಧೂಳಿ ಮೇಲಕ್ಕೇಳುತ್ತಿತ್ತು. ಧೂಳಿಯ ಮೂಲಕವೆ ಅವು ಹತ್ತಿರ ಬರುವವರೆಗೆ ಕುರಿಗಳ ಹಿಂಡು ಎಂದು ಗೊತ್ತಾಗುವ ಹಾಗಿರಲಿಲ್ಲ. ಅಂತೆಯೆ ಸ್ಯಾಂಕೊನಿಗೆ ನಂಬಿಗೆಯಾಯಿತು. "ಹಾಗಿದ್ದರೆ ನಾವೀಗ ಏನು ಮಾಡುವುದು?" ಎಂದು ವಿಚಾರಿಸಿದ. "ಏನೆಂದರೆ? ಯಾವ ಸೈನ್ಯ ಸೋಲಬಹುದು ಎಂದು ಕಾಣುತ್ತದೆಯೊ ಆ ಕಡೆಗೆ ನಾವು ಸೇರಿ ಅದು ಗೆಲ್ಲುವಂತೆ ಮಾಡುವುದು. ನಮ್ಮೆದುರಿಗೆ ಬರುತ್ತಿದ್ದ ಸೈನ್ಯ ಅಲಿಫ್ಯಾನ್‌ಫರೊನದು! ಇನ್ನೊಂದು ಕಡೆಯಿಂದ ಬರುತ್ತಿದ್ದುದು ಪೆಂಟಾಪೊಲಿನ್‌ನದು" ಎಂದು ತಿಳಿದವನ ಹಾಗೆ ಹೇಳಿದ. "ಇವರ ವೈರಕ್ಕೇನು ಕಾರಣ ?" ಎಂದು ಸ್ಯಾಂಕೋ ಕೇಳಿದ್ದಕ್ಕೆ ಕ್ವಿಹೋ ಎಲ್ಲಬಲ್ಲಪ್ಪನಂತೆ ವಿವರಿಸಿದ: "ಈ ದುಷ್ಟ ರಾಜನಾದ ಅಲಿಫ್ಯಾನ್ ಫರೊನಿಗೆ ಪೆಂಟಾಪೊಲಿನ್‌ನ ಚೆಲುವೆಯಾದ ಮಗಳನ್ನು ಮದುವೆಯಾಗಬೇಕಾಗಿದೆ. ಆದರೆ ತಂದೆ ಕೊಡಲೊಪ್ಪಿಲ್ಲ. ಈಗ ನೋಡು, ಈ ಎರಡೂ ಸೈನ್ಯಗಳಲ್ಲಿಯ ವೀರರ ವಿಷಯ ಹೇಳುವೆ. ಈ ಹತ್ತಿರದ ದಿನ್ನೆಯನ್ನೇರಿ ನಿಲ್ಲುವಾ. ಎಂದರೆ ಎರಡೂ ಸೈನ್ಯಗಳನ್ನು ಸ್ಪಷ್ಟವಾಗಿ ಕಾಣಬಹುದು." ಇಬ್ಬರೂ ದಿನ್ನೆಯನ್ನೇರಿ ನಿಂತರು. ಕ್ವಿಹೋ ಕೈಮಾಡಿ ತೋರಿಸುತ್ತ ಎರಡೂ ಸೈನ್ಯಗಳಲ್ಲಿಯ ವೀರರ ಕವಚ-ಖಡ್ಗ ಆಯುಧಾದಿಗಳನ್ನು ಬಣ್ಣಿಸತೊಡಗಿದ. ಸ್ಯಾಂಕೊ ಎಲ್ಲವನ್ನು ಕೇಳುತ್ತಿದ್ದ. ಆತನ ಕಣ್ಣು ಕಾಣುತ್ತಿದ್ದುದು ಧೂಳಿಯ ಮೋಡವನ್ನು ಮಾತ್ರ. ಕೊನೆಗೆ "ನನಗಂತೂ ಯಾವುದೂ ಕಾಣುವುದಿಲ್ಲವಲ್ಲ" ಎಂದುಸಿರಿದ. "ಕಾಣುವುದಿಲ್ಲವೆ? ಕುದುರೆಗಳ ಹೇಕರಿಕೆ, ರಣಕಹಳೆಗಳ ಮೊಳಗು, ಖಡ್ಗಗಳ ಖಣಖಣಾಟ, ಕೇಳುವುದಿಲ್ಲವೆ ನಿನಗೆ? ಕಿವಿ ಕೇಳದ ಹಾಗಾಯಿತೆ ನಿನಗೆ?" "ನನಗಂತೂ ಆಡು ಕುರಿಗಳ ಬ್ಯಾಂ ಬ್ಯಾಂ ಎಂಬ ಶಬ್ದದ ಹೊರತು ಬೇರೆ ಯಾವುದೂ ಕೇಳುವುದಿಲ್ಲ" ಎಂದು ಸ್ಯಾಂಕೊ ಪ್ರಾಮಾಣಿಕವಾಗಿ ಒಪ್ಪಿದ. ಅದೇ ನಿಜ. ಕುರಿಗಳ ಹಿಂಡುಗಳು ಆಗ ತೀರ ಹತ್ತಿರಕ್ಕೆ ಬಂದಿದ್ದವು. ಈ ಮಾತನ್ನು ಗಮನಿಸದೆ ಕ್ವಿಹೋ ಹೇಳಿದ. "ನಿನಗೆ ಹೆದರಿಕೆಯಾಗುತ್ತಿದ್ದರೆ ಹಿಂದುಳಿಯಬಹುದು. ನಾನಂತೂ ಈ ರಣಧೂಳಿಯಲ್ಲಿ ಧುಮುಕುವವ. ನ್ಯಾಯವಿದ್ದೆಡೆ ವಿಜಯವನ್ನು ತರುವವ." ಎಂದವನೆ ಕುದುರೆಯನ್ನು ದಿನ್ನೆಯ ಇಳಿಜಾರಿನಗುಂಟ ಓಡಿಸಿದ. ಸ್ಯಾಂಕೊ ಕೂಗಿಕೊಳ್ಳುತ್ತಲೇ ಇದ್ದ: "ಅದು ಸೈನ್ಯವಲ್ಲ, ಯಜಮಾನರೆ, ಅದು ಕುರಿಗಳ ಹಿಂಡು," ಎಂದು. ಆದರೆ ಕ್ವಿಹೋ ಕುದುರೆಯನ್ನು ಓಡಿಸಿಯೇ ಓಡಿಸಿದ. ಕುರಿಗಳ ಹಿಂಡಿನಲ್ಲಿ ನುಗ್ಗಿ ವೀರಾವೇಶದಿಂದ ಕೂಗಾಡಿದ. ಅನೇಕ ಕುರಿಗಳು ಕುದುರೆ ಕಾಲಿಗೆ ಬಿದ್ದು ಸತ್ತವು. ಕೋಲಾಹಲವೇ ಕೋಲಾಹಲ. ಹಿಂಡು ಕಾಯುತ್ತಿದ್ದ ಕುರುಬರು ಮೊದಲಿಗೆ ಕಕ್ಕಾವಿಕ್ಕಿಯಾದರು. ಆದರೆ ಕುರಿಗಳು ದಿಕ್ಕು ಪಾಲಾಗುತ್ತಿದ್ದುದನ್ನು ಕಂಡು ತಮ್ಮ ಕವಣೆ

ಗಳನ್ನು ಬೀಸತೊಡಗಿದರು. ಕ್ವಿಹೋ ಮಾತ್ರ ಕುರಿಗಳನ್ನು ಬೆನ್ನಟ್ಟಿ ತುಮುಲವನ್ನೆಬ್ಬಿಸುತ್ತಿದ್ದ. "ಎಲೈ ದುಷ್ಟ ಅಲಿಫ್ಯಾನ್ ಫೆರೊ, ಎಲ್ಲಿ ಹೋಗುತ್ತೀ? ಇನ್ನು ನೀನು ಪಾರಾಗುವುದು ಸಾಧ್ಯವೇ ಇಲ್ಲ" ಎಂದು ಮುಂತಾಗಿ ಕೂಗಾಡುತ್ತಿದ್ದ. ಇಷ್ಟರಲ್ಲಿ ಒಂದು ಕವಣೆಕಲ್ಲು ಬಿರ್ರೆಂದು ಬಂದು ಪಕ್ಕಡಿಯಲ್ಲಿ ಬಡಿಯಿತು. ತಿರುಗಿ ನೋಡುವಷ್ಟರಲ್ಲಿ ಇನ್ನೊಂದು ಬಂದು ದವಡೆಗೆ ಬಡಿದು ಆತನನ್ನು ನೆಲಕ್ಕುರುಳಿಸಿತು. ಎಚ್ಚರ ತಪ್ಪಿತು. ಎರಡು ಮೂರು ಹಲ್ಲು ಮುರಿದವು. ಆತ ನೆಲಕ್ಕುರುಳಿದ್ದನ್ನು ಕಂಡು ಕುರುಬರು ಗಾಬರಿಯಾದರು. ಆತ ಸತ್ತರೆ ತಾವು ಸಿಕ್ಕಿ ಬೀಳಬಹುದೆಂದು ಕುರಿಗಳನ್ನು ಕಲೆಹಾಕಿ, ಸತ್ತವನ್ನು ಹೊತ್ತುಕೊಂಡು ಬರಬರನೆ ಹೊರಟು ಹೋದರು.

(೭)

ಕುರುಬರು ಹೊರಟು ಹೋದನಂತರ ಸ್ಯಾಂಕೋ ಓಡುತ್ತ ಒಡೆಯ ಬಿದ್ದೆಡೆಗೆ ಬಂದ. ಆತನಿಗೆ ಎಚ್ಚರ ಬಂದಿತ್ತು. ಆದರೆ ಎದ್ದು ಕುಳಿತುಕೊಳ್ಳುವುದು ಸಾಧ್ಯವಿರಲಿಲ್ಲ. "ನಾನು ಹೇಳಿರಲಿಲ್ಲವೆ--ಅದು ಸೈನ್ಯವಿರದೆ ಕುರಿಯ ಹಿಂಡು ಎಂದು?" ಎಂದು ಸ್ಯಾಂಕೋ ಹೇಳಿದ್ದಕ್ಕೆ ಕ್ವಿಹೋ ನಿಧಾನವಾಗಿ ಹೇಳಿದ: "ನಿನಗೆ ತಿಳಿಯದು, ಸ್ಯಾಂಕೋ. ಇದೆಲ್ಲ ಆ ಯಕ್ಷಿಣಿಯ ಮಾಟದಾಟವಾಗಿದೆ. ಸೈನ್ಯವನ್ನು ಕುರಿಯ ಹಿಂಡನ್ನಾಗಿ ಮಾಡಿ ನನ್ನನ್ನು ಮೋಸಮಾಡಿದಳಷ್ಟೆ." ಇಬ್ಬರೂ ಮತ್ತೆ ಹೊರಡಬೇಕಾದರೆ ಕೆಲವು ಗಂಟೆಗಳ ಉಪಚಾರ ಬೇಕಿತ್ತು. ಅಂತೂ ಹೊರಟರು. ನಿಧಾನವಾಗಿ ದಾರಿ ಸವೆಯುತ್ತಿತ್ತು. ಕೆಲ ಹೊತ್ತಿನ ಮೇಲೆ ಇದಿರಾಗಿ ಕುದುರೆಯನ್ನೇರಿ ಯಾರೊ ಬರುತ್ತಿದ್ದ ಹಾಗೆ ಕಂಡಿತು. ಆತನ ತಲೆಕಟ್ಟು ಚಿನ್ನದ ಹಾಗೆ ಹೊಳೆಯುತ್ತಿತ್ತು. ಅದನ್ನು ಕಂಡು ಕ್ವಿಹೋ ಹೇಳಿದ: "ನೋಡಿದೆಯಾ ಆ ಕಿರೀಟವನ್ನು? ಅದು ಮೆಂಬ್ರಿನೋನ ಕಿರೀಟ. ಖಂಡಿತವಾಗಿ." ತಾನು ಓದಿದ ಒಂದು ಕಥೆಯಲ್ಲಿಯ ಒಬ್ಬ ರಾಜನಾದ ಮೆಂಬ್ರಿನೋನ ಕಿರೀಟವನ್ನು ರೆನಾಲ್ಡ್ಸ್ ಎಂಬ ಸರದಾರ ಕಿತ್ತುಕೊಂಡು ಹೋಗಿದ್ದ. ತನ್ನೆದುರಿಗೆ ಬರುತ್ತಿದ್ದವ ರೆನಾಲ್ಡ್ಸ್ ಅಲ್ಲದೆ ಇನ್ನಾರೂ ಅಲ್ಲವೆಂದು ಕ್ವಿಹೋನಿಗೆ ಹೇಗೋ ಮನವರಿಕೆಯಾಯಿತು. ಅಲ್ಲದೆ ಇದಿರು ಬಂದ ಮೊದಲ ಸರದಾರನ ಶಿರಸ್ತ್ರಾಣವನ್ನು ತಾನು ಕಸಿದುಕೊಳ್ಳತಕ್ಕದ್ದು ಎಂಬ ತನ್ನ ಶಪಥವೂ ಜ್ಞಾಪಕಕ್ಕೆ ಬಂದಿತು. ಕಿರೀಟವೊಂದನ್ನು ಗೆಲ್ಲುವ ಅವಕಾಶ ಇಷ್ಟು ಬೇಗ ಸಿಕ್ಕುದಕ್ಕಾಗಿ ಆತನಿಗಾದ ಆನಂದ ಅಷ್ಟಿಷ್ಟಲ್ಲ. ಮತ್ತೇನಾದರೂ ಪ್ರಮಾದವಾಗಬಾರದೆಂದು ಸ್ಯಾಂಕೋ ಎಚ್ಚರ ಹೇಳಿದ್ದಕ್ಕೆ, "ಏನು ಪ್ರಮಾದವಾಗಬೇಕು? ಚಿನ್ನದ ಕಿರೀಟವನ್ನು ಹಾಕಿಕೊಂಡು ಬರುತ್ತಿರುವ ಸರದಾರ ನಿನಗೆ ಕಾಣುತ್ತಿಲ್ಲವೆ?" ಸ್ಯಾಂಕೋ ನಿಧಾನವಾಗಿ ಹೇಳಿದ: "ನನಗೆ ಕಾಣುತ್ತಿರುವ ಮಟ್ಟಿಗೆ ಯಾವನೊ ಒಬ್ಬ ಕತ್ತೆಯನ್ನೇರಿ ಬರುತ್ತಿದ್ದಾನೆ. ಆತನ ತಲೆಕಟ್ಟು ಹೊಳೆಯುತ್ತಿದೆ. ಇಷ್ಟು ಮಾತ್ರ ನಿಜ" ಎಂದು.

ಕತ್ತೆಯನ್ನೇರಿಕೊಂಡು ಬರುತ್ತಿದ್ದವ ಒಬ್ಬ ಕ್ಷೌರಿಕನಾಗಿದ್ದ. ತನ್ನ ವ್ಯವಸಾಯಕ್ಕೆಂದು ಹತ್ತಿರದ ಹಳ್ಳಿಗೆ ಹೊರಟಿದ್ದ. ತನ್ನ ಕೆಲಸಕ್ಕೆ ಬೇಕಾಗುವ ನೀರಿಗೆಂದು ತೆಗೆದುಕೊಂಡ ಹರವಾದ ಹಿತ್ತಾಳೆಯ ಪಾತ್ರೆಯೊಂದನ್ನು ಮಳೆ ಬೀಳುತ್ತಿತ್ತಾದ್ದರಿಂದ ತಲೆಯ ಮೇಲಿರಿಸಿಕೊಂಡಿದ್ದ. ಹೊಳೆಯುತ್ತಿದ್ದ ಆ ಪಾತ್ರೆಯೆ ಕ್ವಿಹೋನ ಪಾಲಿಗೆ ಮೆಂಬ್ರಿನೋನ ಚಿನ್ನದ ಕಿರೀಟವಾಗಿತ್ತು. ಹತ್ತಿರ ಬಂದಕೂಡಲೆ ಡಾನ್ ಆತನ ಮೇಲೆ ಭೀಕರವಾಗಿ ಎರಿಹೋದ. ಆ ಆಕೃತಿಯನ್ನು, ಆ ವೀರಾವೇಶವನ್ನು ಕಂಡು ಕ್ಷೌರಿಕ ಕತ್ತೆಯಿಂದ ನೆಲಕ್ಕೆ ಉದ್ದವಾಗಿ ಬಿದ್ದ. ಹಿತ್ತಾಳೆಯ ಪಾತ್ರೆ ಉರುಳಿತು. ಒಂದೆರಡು ನಿಮಿಷಗಳಲ್ಲಿ ತನ್ನ ಕತ್ತೆ, ಪಾತ್ರೆ, ಯಾವುದರ ಪರಿವೆಯೂ ಇಲ್ಲದೆ ಕ್ಷೌರಿಕ ಕಾಲಿಗೆ ಬುದ್ಧಿ ಹೇಳಿ ಕಣ್ಮರೆಯಾದ.

ತನ್ನ ಶೌರ್ಯಕ್ಕೆ ತಾನೇ ಮೆಚ್ಚಿದವನಾಗಿ ಕ್ವಿಹೋ ಉರುಳಿ ಬಿದ್ದ ಆ ಪಾತ್ರೆಯನ್ನು ಎತ್ತಿ

ಕೊಡಲು ಸ್ಯಾಂಕೊನಿಗೆ ಆಜ್ಞಾಪಿಸಿದ. ಆತ ತಂದುದನ್ನು ತನ್ನ ತಲೆಗೆ ಹಾಕಿಕೊಂಡ. ತಲೆಯ ಪ್ರಮಾಣಕ್ಕೆ ಅದು ತುಸು ದೊಡ್ಡದಾಗಿದ್ದರೂ ಯುದ್ಧಮಾಡಿ ಗೆದ್ದ ಕಿರೀಟವಲ್ಲವೆ ಅದು? ಹೀಗೆಂದು ಚಿನ್ನದ ಕಿರೀಟ ಧರಿಸಿದವನ ರೀತಿಯಲ್ಲಿ ಅದನ್ನು ಹಾಕಿಕೊಂಡ. ಸ್ಯಾಂಕೋನಿಗೆ ಮಾತ್ರ ನಗು ತಡೆಯದಾಗಿತ್ತು. ಆತ ಕೇಳಿದ, "ಮೇಂಬ್ರಿನೋನ ಚಿನ್ನದ ಕಿರೀಟ ಇದು ಎನ್ನುತ್ತೀರಿ. ಆದರೆ ಕ್ಷೌರಿಕನ ಪಾತ್ರೆಯ ಹಾಗೆ ಕಾಣುತ್ತಿದೆಯಲ್ಲ?" ಕ್ವಿಹೋ ಹೇಳಿದ, "ಹೇಗೂ ಕಾಣಲಿ. ನಿಜವಾಗಿ ಅದು ಏನಿದೆ ಎನ್ನುವುದು ನನಗೆ ಗೊತ್ತು. ಅಷ್ಟು ಸಾಕು ನನಗೆ. ಮುಂದಿನ ಊರನ್ನು ತಲುಪಿದ ಮೇಲೆ ಅಕ್ಕಸಾಲಿಗನಿಂದ ಅದನ್ನು ಸರಿಪಡಿಸುವಾ. ಇಂಥ ಕಿರೀಟ ಪ್ರಪಂಚದಲ್ಲಿಯೆ ಸಿಕ್ಕಲಾರದು! ಅದು ನನ್ನ ತಲೆಯ ಮೇಲೆ ಎಷ್ಟು ಶೋಭಿಸುತ್ತದೆ, ನೋಡಿದೆಯಾ?"

## (೮)

ಹೀಗೆ ವಿಜಯಶ್ರೀಯನ್ನು ಸಂಗ್ರಹಿಸುತ್ತ ಕ್ವಿಹೋ ಮತ್ತು ಸ್ಯಾಂಕೋ ಊರಿಂದ ಊರಿಗೆ ಪ್ರಯಾಣ ಬೆಳೆಯಿಸಿದರು. ಒಂದು ದಿನ ನೂರಾರು ಸಿಪಾಯಿಗಳು ಎಷ್ಟೋ ಜನ ಸೆರೆಯಾಳುಗಳನ್ನು ಬಂಧಿಸಿ ಸಾಲುಸಾಲಾಗಿ ನಡಸಿಕೊಂಡು ಹೋಗುತ್ತಿದ್ದುದನ್ನು ಕ್ವಿಹೋ ಕಂಡ. ಗುಲಾಮರನ್ನಾಗಿ ಮಾಡಿ ಅವರನ್ನು ಹಡಗದ ಕಡೆಗೆ ಸಾಗಿಸುತ್ತಿದ್ದಂತಿತ್ತು. ಕ್ವಿಹೋ ಕೈಸನ್ನೆ ಮಾಡಿ ಪೋಲೀಸರನ್ನು ತಡೆದು ಸೆರೆಯಾಳುಗಳಿಂದ ನಿಜ ಸಂಗತಿಯನ್ನು ತಿಳಿದುಕೊಂಡ. ಸಂಕಟದಲ್ಲಿದ್ದವರಿಗೆ ಸಹಾಯಮಾಡದಿದ್ದರೆ ಸರದಾರನೆಂಥವ? ಎಂದುಕೊಂಡು ಆ ಸೆರೆಯಾಳುಗಳನ್ನು ಕೂಡಲೆ ಬಿಟ್ಟುಕೊಡಬೇಕೆಂದು ಪೋಲಿಸರಿಗೆ ಆಜ್ಞೆಯನ್ನು ವಿಧಿಸಿದ. ಆದರೆ ಅವರು ಯಾತಕ್ಕೆ ಕೇಳಬೇಕು? ಕ್ವಿಹೋನಿಗೆ ಸಂತಾಪವಾಯಿತು. ಅವರ ಮೇಲೆ ಏರಿ ಹೋದ. ನೂರಾರು ಸಿಪಾಯಿಗಳು ಆತನನ್ನು ಕ್ಷಣಾರ್ಧದಲ್ಲಿ ನುಚ್ಚುನೂರು ಮಾಡಿಬಿಡಬಹುದಾಗಿತ್ತು. ಕ್ವಿಹೋನ ದೈವ ಬಲವತ್ತರವಾಗಿತ್ತೆಂದೇ ಹೇಳಬೇಕು. ಸಿಪಾಯಿಗಳು ಬೇರೆ ಏನನ್ನೊ ಯೋಚಿಸುತ್ತಿದ್ದಂತಿತ್ತು. ಈ ಸಮಯವನ್ನು ಸಾಧಿಸಿ ಸೆರೆಯಾಳುಗಳು ತಮ್ಮನ್ನು ಬಂಧಿಸಿದ ಹಗ್ಗಗಳನ್ನು ಬಿಚ್ಚಿಕೊಂಡು ಸಿಪಾಯಿಗಳ ಮೇಲೆ ಏರಿಹೋದರು. ರೊಚ್ಚಿಗೆದ್ದ ಸೆರೆಯಾಳುಗಳು ತಮ್ಮನ್ನು ಏನೂ ಮಾಡಿಯಾರೆಂದು ಹೆದರಿಕೊಂಡು ಸಿಪಾಯಿಗಳು ಓಡಿಹೋದರು.

ಅಕಸ್ಮಾತ್ತಾಗಿ ಹೀಗೆ ಬಿಡುಗಡೆಯಾದ ಸೆರೆಯಾಳುಗಳು ಕ್ವಿಹೋನ ಸುತ್ತಲೂ ನಿಂತು ಕೃತಜ್ಞತೆಗಳನ್ನು ಸಲ್ಲಿಸಿ ತಮ್ಮ ಬಿಡುಗಡೆಗೆ ಪ್ರತಿಫಲವಾಗಿ ತಾವು ಏನು ಮಾಡಬೇಕೆಂದು ಕೇಳಿದರು. ಕ್ವಿಹೋ ತಟ್ಟನೆ ಹೇಳಿದ: ಅವರೆಲ್ಲರೂ ಒಟ್ಟಾಗಿ ತನ್ನ ಸ್ಫೂರ್ತಿದೇವತೆಯಾದ ಡಲ್ಸಿನಿಯಾಳ ಕಡೆಗೆ ಹೋಗಿ, ಆಕೆಯೆದುರು ಮೊಳಕಾಲೂರಿ, ನಮ್ರವಾಗಿ ನಮಸ್ಕರಿಸಿ, ತಾನು ಗೈದ ವಿಕ್ರಮವನ್ನು ವಿವರಿಸಬೇಕು ಎಂದು. ಇಷ್ಟನ್ನು ಮಾಡಲು ಅವರು ಒಪ್ಪಲಿಲ್ಲ. ಅವರ ಕೃತಘ್ನತೆಯಿಂದ ಕ್ವಿಹೋನಿಗೆ ಕೋಪ ಬಂದಿತು. ಜಗಳಕ್ಕಾರಂಭವಾಯಿತು. ಅವರೆಲ್ಲರೂ ಸೇರಿ ಸುತ್ತಲಿಂದ ಕಲ್ಲುಗಳನ್ನು ಆರಿಸಿಕೊಂಡು ತೂರತೊಡಗಿದರು. ಕಲ್ಲು ತಾಕಿ ಕ್ವಿಹೋ ನೆಲಕ್ಕೆ ಬಿದ್ದ. ಆತ ಬಿದ್ದುದನ್ನು ಕಂಡು ಆ ತಂಡದ ಮುಖ್ಯಸ್ಥ ಮುಂದೆ ಬಂದು ಕ್ವಿಹೋನ "ಚಿನ್ನದ ಕಿರೀಟ"ವನ್ನು ಎತ್ತಿಕೊಂಡು ಅದರಿಂದಲೇ ಆತನ ತಲೆಯನ್ನು ಚೆನ್ನಾಗಿ ಚಚ್ಚಿದ. ಉಳಿದವರು ಕ್ವಿಹೋ ಮತ್ತು ಸ್ಯಾಂಕೋನ ಮೈಮೇಲಿನ ಬಟ್ಟೆಬರೆಗಳನ್ನು ಬಿಚ್ಚಿಕೊಂಡರು. ಪೋಲೀಸರು ಮತ್ತೆ ಬರಬಹುದೆಂದು ಬೇಗಬೇಗನೆ ಅಲ್ಲಿಂದ ಎಲ್ಲರೂ ಒಟ್ಟಾಗಿ ಕಾಲ್ತೆಗೆದರು. ಸ್ಯಾಂಕೋನಿಗೂ ಪೋಲಿಸರ ಹೆದರಿಕೆಯೆನಿಸಿತು. ಕ್ವಿಹೋ ಪೋಲೀಸರಿಗೆ ಇದಿರಾಗಿ ನಿಂತದ್ದು ನ್ಯಾಯಾಪರಾಧವೆಂದು ತೋರಿತು. ಹೀಗೆಂದು ಕೆಲ ಕಾಲ ತಾವಿಬ್ಬರೂ ಅಡವಿಯಲ್ಲಿ ಅಡಗಿಕೊಂಡಿರುವುದು ಒಳ್ಳೆಯದೆಂದು ನಿರ್ಧರಿಸಿದರು. ಕ್ರಮವಾಗಿ ಒಂದು ಗುಡ್ಡಗಾಡನ್ನು ಸೇರಿದರು. ಆದರೆ ಕರ್ಮಧರ್ಮ

ಸಂಯೋಗದಿಂದ ಓಡಿಹೋದ ಸೆರೆಯಾಳುಗಳೂ ಅಲ್ಲಿಯೆ ಆಶ್ರಯ ಪಡೆದಿದ್ದರು. ಈತ ಬಂದು ದನ್ನು ನೋಡಿ ಬೆದರಿದರು. ರಾತ್ರಿ ಇವರಿಬ್ಬರೂ ಮಲಗಿದಾಗ ಸ್ಯಾಂಕೋನ ಕತ್ತೆಯನ್ನು ಕದ್ದು ಕೊಂಡು ಅಲ್ಲಿಂದ ಪಾರಾದರು.

ತನ್ನ ಕತ್ತೆ ಕಳವಾದುದನ್ನು ಕಂಡು ಸ್ಯಾಂಕೋನಿಗೆ ವಿಪರೀತ ದುಃಖವಾಯಿತು. ಆದರೆ ಹಿಂದಿರುಗಿದ ಮೇಲೆ ತನ್ನಲ್ಲಿಯ ಐದು ಕತ್ತೆಗಳಲ್ಲಿ ಮೂರನ್ನು ಕೊಡುವೆನೆಂದು ಕ್ವಿಹೋ ಆತನಿಗೆ ಸಮಾಧಾನ ಹೇಳಿದ. ಹೀಗೆ ದಿನಗಳು ಸರಿಯುತ್ತಿದ್ದವು. ತನ್ನ ಸ್ಫೂರ್ತಿದೇವತೆಗೆ ಸಂದೇಶವನ್ನು ಕಳಿಸಬೇಕೆಂದು ಕ್ವಿಹೋನಿಗೆ ತೋರಿತು. ಆ ಕೆಲಸವನ್ನು ಸ್ಯಾಂಕೋನಿಗೆ ಒಪ್ಪಿಸಿದ. ಅಡಗಿಕೊಂಡಿದ್ದ ಸ್ಯಾಂಕೋನಿಗೂ ಬೇಸರವಾಗಿತ್ತು. ಸಂತೋಷದಿಂದ ಕೆಲಸವನ್ನು ಒಪ್ಪಿಕೊಂಡು ಕುದುರೆಯನ್ನೇರಿ ಡಲ್ಸಿನಿಯಾಳಿದ್ದೆಡೆಗೆ ಸಾಗಿದ. ದಾರಿಯಲ್ಲಿ ವಿಶ್ರಾಂತಿಗೆಂದು ಒಂದು ತಂಗುಮನೆಯಲ್ಲಿ ಉಳಿದುಕೊಂಡಾಗ ಅಕಸ್ಮಾತ್ತಾಗಿ ಆತನಿಗೆ ಅಲ್ಲಿ ಊರ ಪಾದ್ರಿ ಮತ್ತು ಕ್ಷೌರಿಕ ಇಬ್ಬರೂ ಸಿಕ್ಕರು. ಅವರು ಕ್ವಿಹೋನ ಬಗೆಯಲ್ಲಿ ವಿಚಾರಿಸಲಾಗಿ ಸ್ಯಾಂಕೋ ತಾವಿಬ್ಬರೂ ಮನೆ ಬಿಟ್ಟಾಗಿನಿಂದ ಮಾಡಿದ ಪರಾಕ್ರಮಗಳನ್ನೆಲ್ಲ ಹುಚ್ಚುಹುಚ್ಚಾಗಿ ಬಣ್ಣಿಸಿದ. ಕೇಳಿದವರಿಗೆನಿಸಿತು—ಕ್ವಿಹೋನಿಗೆ ಸರಿಯಾದ ಜೊತೆಗಾರನೇ ಈತ ಎಂದು. ಆತನ ವಿವರಣೆಗಳನ್ನು ಕೇಳಿಕೊಂಡು ಪಾದ್ರಿ ಮತ್ತು ಕ್ಷೌರಿಕ ಇಬ್ಬರೂ ಏನಾದರೂ ಒಂದು ಯುಕ್ತಿಯನ್ನು ಹೂಡಿ ಕ್ವಿಹೋನನ್ನು ಮನೆಗೆ ಕರೆದು ತರಲೇಬೇಕೆಂಬ ನಿರ್ಧಾರಕ್ಕೆ ಬಂದರು. ಆತ ಅಡಗಿಕೊಂಡಿದ್ದ ಅಡವಿಯನ್ನು ತೋರಿಸಬೇಕೆಂದು ಸ್ಯಾಂಕೋನನ್ನು ಒಪ್ಪಿಸಿದರು. ಮರುದಿನ ಮೂವರೂ ಹೊರಟರು. ದಾರಿಯಲ್ಲಿ ಪಾದ್ರಿಗೆ ಒಂದೇ ಒಂದು ಯೋಚನೆ. ಏನಾದರೂ ಪ್ರಬಲವಾದ ಕಾರಣವನ್ನು ಹೇಳಿದ ಹೊರತು ಕ್ವಿಹೋ ಹಿಂದಿರುಗಲು ಒಪ್ಪುವವನಲ್ಲ ಎಂದು. ಏನೆಂದು ಹೇಳಬೇಕು? ಈ ಯೋಜನೆಯಲ್ಲಿಯೆ ದಾರಿ ನಡೆಯುತ್ತಿದ್ದಾಗ ಪ್ರಯಾಣಿಕರ ತಂಡವೊಂದು ಇದಿರಾಗಿ ಬಂದಿತು. ಆ ತಂಡದಲ್ಲಿ ಯುವತಿಯೊಬ್ಬಳಿದ್ದಳು. ಎಲ್ಲರ ಪರಿಚಯದ ಉಪಚಾರ ಮುಗಿದ ಮೇಲೆ ಪಾದ್ರಿ ಆ ಯುವತಿಗೆ ತಾವು ಹೊರಬಿದ್ದ ಉದ್ದೇಶವನ್ನು ಹೇಳಿದ. ಕ್ವಿಹೋನ ಹುಚ್ಚು ಆ ಯುವತಿಗೆ ಮೋಜಿನದೆನಿಸಿರಬೇಕು. ಒಂದು ಯುಕ್ತಿಯನ್ನು ಹೂಡಿ ತಾನು ಕ್ವಿಹೋನನ್ನು ಹಿಂದಿರುಗಿಸುವುದರಲ್ಲಿ ಸಹಾಯಕಳಾಗುವೆನೆಂದು ಆಶ್ವಾಸನವನ್ನಿತ್ತಳು. ಯುವತಿಯ ಯುಕ್ತಿ ಯಾವುದು?

( ೯ )

ಯುಕ್ತಿ ಹೀಗಿತ್ತು. ಆ ಯುವತಿ ಡಾನ್ ಹತ್ತಿರ ಹೋಗಿ ತಾನು ಒಂದು ರಾಜ್ಯದ ರಾಣಿಯೆಂದೂ ಒಬ್ಬ ಕ್ರೂರ ರಾಕ್ಷಸನು ತನ್ನ ರಾಜ್ಯವನ್ನು ಕಸಿದುಕೊಂಡಿದ್ದನೆಂದೂ ಆ ರಾಕ್ಷಸನಿಂದ ವೀರನಾಗಿದ್ದ ಕ್ವಿಹೋ ರಾಜ್ಯವನ್ನು ಬಿಡಿಸಿಕೊಡಬೇಕೆಂದೂ ಬಿನ್ನವಿಸಬೇಕು. ಹೀಗೆ ಯೋಜನೆ ಮಾಡಿಕೊಂಡು ಎಲ್ಲರೂ ಹೊರಟರು. ಉಳಿದವರು ದೂರದಲ್ಲಿ ಉಳಿದರು. ಯುವತಿಯೊಬ್ಬಳೇ ಡಾನ್‌ನ ಹತ್ತಿರಬಂದು ಮೊಳಕಾಲೂರಿ ನಮಸ್ಕರಿಸಿ, ಕಣ್ಣೀರು ತಂದು ತನ್ನ ಕರುಣಕತೆಯನ್ನು ಸಮರ್ಥವಾಗಿ ನಟಿಸಿದಳು. ಕ್ವಿಹೋನ ಹೃದಯ ಕರಗಿ ನೀರಾಯಿತು. ಆ ರಾಕ್ಷಸನನ್ನು ತಾನು ಖಂಡಿತವಾಗಿಯೂ ಕೊಲ್ಲುವೆನೆಂದು ಪ್ರತಿಜ್ಞೆ ಮಾಡಿದ. ಖಡ್ಗ ಕವಚಾದಿಗಳನ್ನು ಕ್ಷಣಾರ್ಧದಲ್ಲಿ ಧರಿಸಿ ವೀರಾವೇಶದಿಂದ ಹೊರಟು ನಿಂತು ರಾಣಿಯನ್ನು ದಾರಿ ತೋರಿಸಬೇಕೆಂದು ಬಿನ್ನವಿಸಿದ. ಇಬ್ಬರೂ ಹೊರಟರು. ಅಕಸ್ಮಾತ್ತಾಗಿ ಎಂದೆನಿಸುವ ಹಾಗೆ ಹಿಂದುಳಿದು ನಿಂತಿದ್ದ ಪಾದ್ರಿ ಸಂತೋಷದಿಂದ ಕ್ವಿಹೋನನ್ನು ಭೇಟಿಯಾಗಿ ಲೋಕಾಭಿರಾಮವಾಗಿ ಮಾತನಾಡಿಸಿದ. ಅನಂತರ ಬೇಕೆಂತಲೆ ಯುವತಿಯನ್ನುದ್ದೇಶಿಸಿ "ದೇವಿಯವರೆ, ತಾವೀಗ ನಡೆದದ್ದು ತಮ್ಮ ರಾಜಧಾ

ನಿಯ ಕಡೆಗೆಯೆ ಅಲ್ಲವೆ ?" ಎಂದುದಕ್ಕೆ ಆಕೆ ಯೋಗ್ಯವಾದ ನಟನೆಯಿಂದ "ಹೌದು" ಎಂದು ಹೇಳಿದಳು. "ಹಾಗಿದ್ದರೆ, ಒಳ್ಳೆಯದೆ ಆಯಿತು. ನಮ್ಮೂರಾದ ಲಾಮಾಂಚಾದಲ್ಲಿಂದ ಹಾಯ್ದೇ ನೀವು ಹೋಗುವುದೆಂದಾಯಿತು" ಎಂದ ಪಾದ್ರಿ.

ಹೀಗೆಯ ದಾರಿ ಸರಿಯುತ್ತಿದ್ದಾಗ ಒಂದು ವ್ಯಕ್ತಿ ಕತ್ತೆಯನ್ನೇರಿಕೊಂಡು ಬರುತ್ತಿದ್ದುದು ಕಂಡಿತು. ಅವನು ಇನ್ನಾರೂ ಇರದೆ ಅಡವಿಯಲ್ಲಿ ಸ್ಯಾಂಕೋನ ಕತ್ತೆಯನ್ನು ಕದ್ದುಕೊಂಡು ಹೋದ ಸೆರೆಯಾಳುಗಳ ಮುಖ್ಯಸ್ಥನೇ ಆಗಿದ್ದ. ಕತ್ತೆಯೂ ಸ್ಯಾಂಕೋನ ಕತ್ತೆಯಾಗಿತ್ತು. ತನ್ನ ಕತ್ತೆಯನ್ನು ಕಂಡು ಸ್ಯಾಂಕೋ ಆತ ತಡೆಯಬೇಕೆಂದು ಗಟ್ಟಿಯಾಗಿ ಹೇಳಿದ. ಇಷ್ಟು ಜನರನ್ನು ಕಂಡು, ಸ್ಯಾಂಕೋನ ಆರ್ಭಟಿಕೆಯನ್ನು ಕೇಳಿ ಗಾಬರಿಯಾಗಿದ್ದ ಆತ ಕತ್ತೆಯಿಂದ ಹಾರಿ ಓಡಿ ಫಾರಾದ. ತನ್ನ ಕತ್ತೆ ತನಗೆ ಮತ್ತೆ ಸಿಕ್ಕಿತೆಂದು ಸ್ಯಾಂಕೋನಿಗಾದ ಆನಂದವನ್ನು ಬಣ್ಣಿಸುವದು ಸಾಧ್ಯವಿಲ್ಲ. ಅದನ್ನು ಆತ ಅಪ್ಪಿಕೊಂಡನೇನು ! ಮುತ್ತಿಟ್ಟನೇನು ! ಮುದ್ದುಮುದ್ದಾಗಿ ಅದನ್ನು ಮಾತನಾಡಿಸಿದನೇನು ! ಏನೆಂದು ಆ ಸಂತೋಷವನ್ನು ಹೇಳಬೇಕು ?

ಆ ರಾತ್ರಿ ಎಲ್ಲರೂ ಒಂದು ತಂಗುಮನೆಯಲ್ಲಿ ತಂಗಿದರು. ಎಲ್ಲರೂ ಒಂದೆಡೆ ಕುಳಿತು ವೈಭವದಿಂದ ಊಟ ಮಾಡಿದರು. ಕ್ವಿಹೋ ತುಂಬ ದಣಿದಿದ್ದರಿಂದ ಎಲ್ಲಕ್ಕೂ ಮೊದಲಿಗೆ ಎದ್ದು ಹೋಗಿ ಮಲಗಿದ. ಉಳಿದವರ ಊಟ ನಡೆದೇ ಇತ್ತು. ಅಷ್ಟರಲ್ಲಿ ಸ್ಯಾಂಕೋ ಭಯದಿಂದ ಓಡುತ್ತೋಡುತ್ತ ಬಂದು, "ಬನ್ನಿ, ಬನ್ನಿ, ನೋಡಬನ್ನಿ ನಮ್ಮ ಮಹಾರಾಣಿಯರಿಗೆ ತೊಂದರೆ ಕೊಡುತ್ತಿದ್ದ ರಾಕ್ಷಸನನ್ನು ಕ್ವಿಹೋ ಆಗಲೆ ಕೊಂದು ಹಾಕಿದ್ದಾನೆ. ತಲೆಯನ್ನೆ ತುಂಡರಿಸಿಬಿಟ್ಟಿದ್ದಾನೆ. ಕೋಣೆಯ ತುಂಬ ನೆತ್ತರು ಹರಿಯುತ್ತಿದೆ" ಎಂದ. ಎಲ್ಲರೂ ಕ್ವಿಹೋ ಮಲಗಿದ್ದ ಕೋಣೆಯತ್ತ ಧಾವಿಸಿದರು. ನಿದ್ರೆಯಲ್ಲಿಯೇ ಕತ್ತಿಯನ್ನು ಬೀಸುತ್ತ ಕ್ವಿಹೋ ಕೋಣೆಯ ತುಂಬ ಹರಿದಾಡುತ್ತಿದ್ದಾನೆ ! ನಿಜವಾದ ವಿಷಯವೆಂದರೆ, ಕ್ವಿಹೋ ಕನಸಿನಲ್ಲಿ ಆ ರಾಕ್ಷಸನನ್ನು ಕಂಡಿದ್ದ. ನಿದ್ರೆಯಲ್ಲಿಯೇ ಎದ್ದು ಆ ಕೋಣೆಯಲ್ಲಿ ತೂಗು ಹಾಕಿದ್ದ ಮದ್ಯ ತುಂಬಿದ ತೊಗಲು ಚೀಲಗಳೊಡನೆ ಯುದ್ಧವನ್ನೆಸಗಿದ್ದ. ಆ ಚೀಲಗಳೊಳಗಿಂದ ಪ್ರವಾಹವಾಗಿ ಹರಿದು ಬಂದ ಕೆಂಪು ಬಣ್ಣದ ಮದ್ಯ ಕೋಣೆಯಲ್ಲಿ ಎಲ್ಲೆಲ್ಲಿಯೂ ಹರಿದಿತ್ತು !

ಅಷ್ಟು ಮದ್ಯ ಹಾಳಾದುದನ್ನು ನೋಡಿ ತಂಗುಮನೆಯ ಒಡೆಯ ಹಾರಾಡತೊಡಗಿದ. ಇನ್ನೊಬ್ಬ ಒಂದು ಕೊಡ ತಣ್ಣೀರನ್ನು ತಂದು ಕ್ವಿಹೋನ ತಲೆಯ ಮೇಲೆ ಸುರುವಿದ. ಇದೆಲ್ಲ ದೆವ್ವಗಳ ಬೂಟಾಟಿಕೆ ಎಂದು ಸ್ಯಾಂಕೊ ಗುಲ್ಲೆಬ್ಬಿಸಿದ. ತಂಗುಮನೆಯ ಒಡೆಯನನ್ನು ಸಮಾಧಾನ ಹೇಳಿ ಸುಮ್ಮನಾಗಿಸುವುದರಲ್ಲಿ ಪಾದ್ರಿಗ ಸಾಕುಬೇಕಾಗಿತ್ತು. ಒಟ್ಟಿನಲ್ಲಿ ಗದ್ದಲವೆ ಗದ್ದಲ. ನಿಧಾನವಾಗಿ ಗದ್ದಲ ತಗ್ಗಿತು. ಕ್ವಿಹೋನಿಗೆ ಎಚ್ಚರಾಯಿತು. ತಾನು ನಿಜವಾಗಿಯೂ ರಾಕ್ಷಸನನ್ನು ಕೊಂದಿದ್ದೇನೆಂದು ಭಾವಿಸಿದ ಆತ ನಯವಿನಯಗಳಿಂದ ಆ ಯುವತಿಯೆದುರು ಮೊಣಕಾಲೂರಿ "ದೇವಿ, ನಿಮಗೆ ತೊಂದರೆ ಕೊಡುತ್ತಿದ್ದ ರಾಕ್ಷಸನನ್ನು ಕೊಂದುಹಾಕಿದ್ದೇನೆ. ನೀವಿನ್ನು ನಿರಾತಂಕವಾಗಿ ರಾಜ್ಯಭಾರ ಮಾಡಿಕೊಂಡಿರಬಹುದು" ಎಂದು ಅರಿಕೆಮಾಡಿಕೊಂಡ. ಆದ ನಷ್ಟವನ್ನು ತುಂಬಿಕೊಡುವ ಆಶ್ವಾಸನವನ್ನು ತಂಗುಮನೆಯ ಒಡೆಯ ಒಪ್ಪಿದ ನಂತರ ಎಲ್ಲರೂ ಹೋಗಿ ಮಲಗಿಕೊಂಡರು.

## (೧೦)

ಕ್ವಿಹೋನನ್ನು ಮನೆಗೆ ಕರೆದೊಯ್ಯುವ ಕೆ[illegible] ಸದಲ್ಲಿ ಆ ಯುವತಿಗೆ ಹೆಚ್ಚಿನ ತೊಂದರೆ ಬೇ[illegible] ಎಂದು ಪಾದ್ರಿ ಮತ್ತಿತರ ಸ್ನೇಹಿತರು ಬೇ[illegible] ಯಾಗಿ, ಸ್ವತಂತ್ರವಾಗಿ ಒಂದು ಯೋ[illegible] ಯನ್ನು ಹೂಡಿದರು. ಇದುವರೆಗಿನ [illegible] ಹೆಡ್ಡ ಸಾಹಸಗಳಿಂದಾಗಿ ಕ್ವಿಹೋನಿಗೆ ತುಂಬ ಗಾಯಗಳಾಗಿದ್ದವು. ಮೈ ನೋ[illegible]

ತ್ತಿತ್ತು. ಅದರಿಂದಾಗಿ ಆತ ಇಡೀ ದಿವಸ ಹಾಸಿಗೆಯಲ್ಲಿ ಬಿದ್ದುಕೊಂಡೇ ಇದ್ದ. ಆತನ ಮಿತ್ರರ ಯೋಜನೆಗೆ ಇದೊಂದು ಅನುಕೂಲವೇ ಆಯಿತು. ಅವರೆಲ್ಲರೂ ಸೇರಿ ಒಬ್ಬ ಗಾಡಿಯವನನ್ನು ಗೊತ್ತುಮಾಡಿ ಆ ಗಾಡಿಯ ಮೇಲುಗಡೆಯಲ್ಲಿ ಒಂದು ದೊಡ್ಡದಾದ ಬೋನನ್ನು ಸಿದ್ಧಗೊಳಿಸಿದರು. ರಾತ್ರಿಯ ಸಮಯ ಕ್ವಿಹೋ ಗಾಢವಾಗಿ ನಿದ್ರೆ ಹೋಗಿದ್ದ. ಆ ಸಮಯಕ್ಕೆ ಗೆಳೆಯರೆಲ್ಲರೂ ಸೇರಿ ತಮ್ಮ ಯೋಜನೆಯನ್ವಯ ವೇಷಗಳನ್ನು ಬದಲಾಯಿಸಿ, ವಿಕಾರವಾದ ಮುಖವಾಡಗಳನ್ನು ಹಾಕಿಕೊಂಡು ಕ್ವಿಹೋನ ಕೋಣೆಯನ್ನು ಸೇರಿದರು. ಎಲ್ಲರೂ ಸೇರಿ ಕ್ಷಣಾರ್ಧದಲ್ಲಿ ಆತನನ್ನು ಗಟ್ಟಿಮುಟ್ಟಾಗಿ ಕಟ್ಟಿ ಹಾಕಿ ಅನಾಮತ್ತಾಗಿ ಎತ್ತಿದರು. ಇದು ನಡೆದಾಗ ಕ್ವಿಹೋನಿಗೆ ಎಚ್ಚರಾದರೂ ಗಟ್ಟಿಮುಟ್ಟಾಗಿ ಕೈಕಾಲುಗಳೆಲ್ಲವನ್ನು ಕಟ್ಟಿಬಿಟ್ಟಿದ್ದರಿಂದ ಆತನಿಗೆ ಏನೂ ಮಾಡಲಿಕ್ಕಾಗಲಿಲ್ಲ. ಆತನನ್ನು ಹೊತ್ತವರಲ್ಲಿ ಒಬ್ಬ ವಿಚಿತ್ರವಾದ ದನಿಯಲ್ಲಿ ಹೇಳಿದ: "ನಿನ್ನನ್ನು ಸೆರೆ ಹಿಡಿಯಲಾಗಿದೆ ಎಂದು ನೀನು ಚಿಂತಿಸಬೇಕಾದದ್ದಿಲ್ಲ. ನಿನ್ನಿಂದ ಇನ್ನೂ ಅನೇಕ ಸಾಹಸದ ಕೆಲಸಗಳಾಗಬೇಕಾಗಿವೆ. ಅದಕ್ಕೆಂದೇ ಇದೆಲ್ಲ ಸಿದ್ಧತೆ" ಎಂದು. ಇದೆಲ್ಲ ಭೂತಾಟವೆಂದು ಬಗೆದ ಕ್ವಿಹೋ ಆ ಮಾತನ್ನು ಕೇಳಿಕೊಂಡು ಸುಮ್ಮನಾದ. ಆತನನ್ನು ಹೊತ್ತು ತಂದು ಗಾಡಿಯ ಮೇಲಿನ ಬೋನಿನಲ್ಲಿ ಇರಿಸಲಾಯಿತು.

ತಂಗುಮನೆಯ ಆವಾರದಿಂದ ಬೋನಿನ ಗಾಡಿಯ ಮೆರವಣಿಗೆ ಹೊರಟಿತು. ಗಾಡಿಯ ಹಿಂಬದಿಯಲ್ಲಿ ಸ್ಯಾಂಕೋ ತನ್ನ ಕತ್ತೆಯನ್ನೇರಿ ಕ್ವಿಹೋನ ಕವಚವನ್ನು, ಆಯುಧಗಳನ್ನು ಹಿಡಿದುಕೊಂಡು ನಡೆದಿದ್ದ. ಆತನ ಹಿಂದುಗಡೆಯಲ್ಲಿ ವಿಚಿತ್ರವಾದ ಮುಖವಾಡಗಳನ್ನು ಹಾಕಿಕೊಂಡ ಪಾದ್ರಿ, ಕ್ಷೌರಿಕ ಮತ್ತಿತರರು ಹೊರಟಿದ್ದರು. ಈ ರೀತಿ ಹೊರಟ ಮೆರವಣಿಗೆ ಮಜಲುಮಜಲಾಗಿ ಐದಾರು ದಿನಗಳ ನಂತರ ಕ್ವಿಹೋನ ಊರಾದ ಲಾಮಾಂಚಾಕ್ಕೆ ಬಂದಿತು. ಈ ವಿಚಿತ್ರ ದೃಶ್ಯವನ್ನು ಕಂಡು ಊರ ಜನ ಜಾತ್ರೆಯಾಗಿ ಬಂದು ಗಾಡಿಯನ್ನು ಸುತ್ತುಗಟ್ಟಿತು. ಬೋನಿನಲ್ಲಿ ಮಲಗಿದ್ದ ಪ್ರಾಣಿ ಇನ್ನಾರೂ ಇರದೆ ತಮ್ಮೂರವನೆ ಆದ ಸೆನೊರ್ ಕ್ವಿಹಾಡಾನೇ ಆಗಿದ್ದನ್ನು ತಿಳಿದು ಹುಡುಗನೊಬ್ಬ ಓಡುತ್ತ ಆತನ ಮನೆಗೆ ಹೋಗಿ ಅಣ್ಣನ ಮಗಳಿಗೆ ಮನೆಗೆಲಸದವಳಿಗೆ ತಾನು ಕಂಡ ದೃಶ್ಯವನ್ನು ವರ್ಣಿಸತೊಡಗಿದ. ಅಷ್ಟರಲ್ಲಿ ಮೆರವಣಿಗೆ ಮನೆಯೆದುರಿಗೆಯೆ ಬಂದಿತು. ಕ್ವಿಹೋನನ್ನು ಎತ್ತಿ ಒಯ್ದು ಹಾಸಿಗೆಯಲ್ಲಿ ಮಲಗಿಸಲಾಯಿತು. ನಡೆಯುತ್ತಿದ್ದುದೆಲ್ಲವನ್ನು ಬಿಚ್ಚುಗಣ್ಣಿನಿಂದ ಆತ ನೋಡುತ್ತಿದ್ದ. ಅದರರ್ಥವೆಲ್ಲ ಆತನಿಗೆ ಹೊಳೆದಿರಬೇಕು. ಸುಮ್ಮನಾಗಿಯೆ ಇದ್ದ. ಮಗಳಿಗೂ, ಮನೆಯಾಳಿಗೂ ಆತನನ್ನು ಚೆನ್ನಾಗಿ ನೋಡಿಕೊಳ್ಳಬೇಕೆಂದೂ, ಆ ವಿಕ್ಷಿಪ್ತಾಗ್ರಣಿ ಮತ್ತೆ ಮನೆಯಿಂದ ಹೊರಹೊರಡದಂತೆ ಕಣ್ಣಿಟ್ಟಿರಬೇಕೆಂದೂ ಹೇಳಿ ಪಾದ್ರಿ ತನ್ನ ಸ್ನೇಹಿತರೊಂದಿಗೆ ಹೊರಟುಹೋದ. ಹೀಗೆ ಕ್ವಿಹೋ ಆಕಸ್ಮಾತ್ತಾಗಿ ಎರಡನೆಯ ಬಾರಿ ಮನೆಗೆ ಬಂದ.

## (೧೧)

ಕ್ವಿಹೋ ಮನೆಗೆ ಬಂದು ಒಂದು ತಿಂಗಳಾಗುತ್ತಬಂದರೂ ಪಾದ್ರಿಯಾಗಲಿ, ಉಳಿದ ಗೆಳೆಯರಾಗಲಿ ಯಾರೂ ಅತ್ತಕಡೆಗೆ ಬರಲಿಲ್ಲ. ತಮ್ಮನ್ನು ಕಂಡು ಸಾಹಸದ ನೆನಹು ಮರಳಬಹುದೆಂದು ಅವರು ಬಂದಿರಲಿಲ್ಲ. ಹೇಗಿದ್ದಾನೆಂದು ವಿಚಾರಿಸುತ್ತಲೇ ಇದ್ದರು. ಪೂರ್ತಿಯಾಗಿ ಆತನಿಗೆ ಗುಣವಾಗಿದೆಯೆಂದು ತಿಳಿದನಂತರ ಒಂದು ದಿನ ಆತನ ಮಿತ್ರಮಂಡಲಿ ಆತನನ್ನು ಕಾಣಲೆಂದು ಬಂದಿತು. ಅವರನ್ನು ಕಂಡು ಸಂತೋಷಿಸಿದ ಕ್ವಿಹೋ ಕೆಲಹೊತ್ತು ಸರಿಯಾಗಿ ಮಾತನಾಡಿದ. ಆದರೆ ಕೊನೆಯಲ್ಲಿ ಮತ್ತೆ ಅದೇ ಪಲ್ಲವಿ: ರಾಕ್ಷಸರು, ಸಾಹಸಗಳು, ವೀರ ಸರದಾರರು ಇತ್ಯಾದಿಯಾಗಿ. ಈ ಸವಾರಿ ಖಂಡಿತವಾಗಿ ಮತ್ತೆ ಮನೆ ಬಿಟ್ಟು ಹೊರಡುತ್ತದೆ ಎಂದುಕೊಂಡೇ ಪಾದ್ರಿ ಆ ದಿನ ಮನೆಗೆ ಹಿಂದಿರುಗಿದ.

ಈ ಸುಮಾರಿಗೆ ಕ್ವಿಹೋ ಇನ್ನೊಬ್ಬನ ಗೆಳೆತನ ಮಾಡಿದ. ಆತನ ಹೆಸರು ಸ್ಯಾಮಸನ್ ಕ್ಯಾರಾಸ್ಕೊ. ಅವನೊಬ್ಬ ಬುದ್ಧಿವಂತ ಯುವಕ; ನಗೆಯಾಟದ ಸ್ವಭಾವದವ. ಆತ ಕ್ವಿಹೋನನ್ನು ಹುಚ್ಚುಹುಚ್ಚಾಗಿ ಹೊಗಳತೊಡಗಿದ. "ನಿನಗೆ ಸರಿಸಾಟಿಯಾದ ವೀರ ಇನ್ನೊಬ್ಬನಿಲ್ಲ; ಹಿಂದೆ ಆಗಲಿಲ್ಲ, ಮುಂದೆ ಆಗಲಾರ. ಇಡೀ ಸ್ಪೇನ್‌ನಲ್ಲಿ ನಿನ್ನ ಹೆಸರು ಇಂದು ಮೂಲೆಮೂಲೆಗಳಲ್ಲಿ ಕೇಳಬರುತ್ತಿದೆ." ಇದು ಆತನ ಹೊಗಳಿಕೆಯ ರೀತಿ. ಇಂಥ ಮಾತುಗಳಿಂದ ಕ್ವಿಹೋ ಅಟ್ಟಕ್ಕೇರಿದ್ದರೆ ಆಶ್ಚರ್ಯವಲ್ಲ. ಬಾಯಿ ತೆರೆದುಕೊಂಡು ಹತ್ತಿರದಲ್ಲಿಯೆ ಕುಳಿತಿರುತ್ತಿದ್ದ ಸ್ಯಾಂಕೊ ಎಲ್ಲವನ್ನೂ ಕೇಳಿಕೊಳ್ಳುತ್ತಿದ್ದ. ಏನಾದರೂ ಮತ್ತೆ ಹೊರಡತಕ್ಕದ್ದೆಂದು ಆತ ನಿರ್ಧರಿಸಿಕೊಂಡಿದ್ದ. ಅವನೆನ್ನುತ್ತಿದ್ದ : "ಇಲ್ಲದ ಶೌರ್ಯದ ಸೋಗು ನನಗೆ ಯಾಕೆ? ಯುದ್ಧದ ಕೆಲಸಗಳನ್ನು ನಿರ್ವಹಿಸುವುದಕ್ಕೆ ಕ್ವಿಹೋ ಸಮರ್ಥನಾಗಿದ್ದಾನೆ. ಅದೆಲ್ಲ ಅವನ ಪಾಲಿಗೆ. ನಾನೊಬ್ಬ ಸ್ವಾಮಿಭಕ್ತ ಸೇವಕ ಎಂದು ಜನ ನೆನೆದರೆ ಸಾಕು. ಒಂದು ವೇಳೆ ಆತ ನಡುಗಡ್ಡೆಯೊಂದನ್ನು ಗೆದ್ದು ನನ್ನ ವಶಕ್ಕೆ ಕೊಟ್ಟರೆ ಬೇಡ ಎಂದು ನಾನೇನೂ ಹೇಳುವವನಲ್ಲ. ಸುಳ್ಳು ಯಾಕೆ? ದೈವ ಬಂದು ಯಾವಾಗ ಬಾಗಿಲು ತಟ್ಟೀತು, ಹೇಳಲಾಗುವುದಿಲ್ಲ. ತಟ್ಟಿದ ಬಾಗಿಲನ್ನು ತೆರೆಯಲು ಸಿದ್ಧನಾಗಿರುವುದೇ ಬುದ್ಧಿಯ ಲಕ್ಷಣ!"

ತಾನು ಮತ್ತೆ ಹೊರಡಬೇಕೆಂದಿರುವುದಾಗಿ ಕ್ವಿಹೋ ತನ್ನ ಹೊಸ ಗೆಳೆಯನಿಗೆ ಹೇಳಿದಾಗ ಆತನೆಂದ, "ಒಳ್ಳೆಯ ಕೆಲಸ. ಸಾರಾಗೋಸಾ ನಗರದಲ್ಲಿ ಇಬ್ಬರು ವಿಖ್ಯಾತ ಸರದಾರರು ದ್ವಂದ್ವ ಯುದ್ಧವನ್ನಾಡುವವರಿದ್ದಾರೆ. ನೀನು ಅಲ್ಲಿಗೆ ಹೋಗಿ ಭಾಗವಹಿಸಿದರೆ ಅವರನ್ನು ಸೋಲಿಸುವುದು ಖಂಡಿತ. ಅಷ್ಟಾದ ಮೇಲೇನು ಕೇಳುವುದು? ಲೋಕೋತ್ತರವಾಗಿ ನಿನ್ನ ಕೀರ್ತಿ ನೆಲೆನಿಲ್ಲುವುದು," ಎಂಬ ಸ್ಯಾಮಸನ್ನನ ಸೂಚನೆಯನ್ನು ಮನ್ನಿಸಿ ಎಲ್ಲ ಸಿದ್ಧತೆಗಳನ್ನು ಮಾಡಿಕೊಳ್ಳುವಂತೆ ಸ್ಯಾಂಕೊನಿಗೆ ಕ್ವಿಹೋ ಹೇಳಿದ. ಈತ ಹೊರಡುವ ಸೂಚನೆ ಕಂಡುಬಂದದ್ದರಿಂದ ಮಗಳು ಮತ್ತು ಮನೆಯಾಳು ಸ್ಯಾಮಸನ್ನನಲ್ಲಿಗೆ ಬಂದು ಹೇಳಿದರು. ಆತ "ಯಾಕೆ ಚಿಂತಿಸುತ್ತೀರಿ? ನಿರಾತಂಕವಾಗಿ ಹೋಗಲಿ," ಎಂದುಬಿಟ್ಟ. ಆ ಹೆಣ್ಣುಮಕ್ಕಳು ನಿರುಪಾಯರಾಗಿ ಮನೆಗೆ ಹಿಂದಿರುಗಿದರು. ಅವರು ಹೋದ ಕೂಡಲೆ ಸ್ಯಾಮಸನ್ ಪಾದ್ರಿಯಲ್ಲಿಗೆ ಬಂದು ತನ್ನ ಯೋಜನೆಯನ್ನು ವಿವರಿಸಿಯಾದ ಮೇಲೆ ಕ್ವಿಹೋನ ಹತ್ತಿರ ಬಂದ. ಅವನ ಬೆನ್ನು ಚಪ್ಪರಿಸಿ, "ಗಂಡಸು ಎಂದರೆ ನೀನು: ಇಲ್ಲದಿದ್ದರೆ ನಾವೂ ಇದ್ದಿದ್ದೇವೆ. ನಿನ್ನ ಈ ಸಾಹಸಕ್ಕೆ ನನ್ನ ಸಂಪೂರ್ಣ ಬೆಂಬಲವಿದೆ. ನನ್ನ ಹತ್ತಿರ ಒಂದು ಒಳ್ಳೆಯ ತಲೆಕಾಪು ಇದೆ, ಅದನ್ನು ತಂದುಕೊಡಲೆ? ನಿನ್ನದು ಕಡಿದುಹೋಗಿದೆ ಎಂದು ಕೇಳಿದೆ," ಎಂದು ಮುಂತಾಗಿ ಆತನನ್ನು ಉಬ್ಬಿಸಿ, ಹುಚ್ಚು ಪೂರ್ತಿ ನೆತ್ತಿಗೇರುವಂತೆ ಮಾಡಿದ. ಮೊದಲೇ ಸಡಿಲಾದ ತಲೆ ಇನ್ನೂ ಸಡಿಲಾಯಿತು ಹೀಗಾಗಿ ಒಂದು ಸಾಯಂಕಾಲ ಎಂದಿನಂತೆ ಯಾರಿಗೂ ಹೇಳದಲೆ ಕ್ವಿಹೋ ಮತ್ತು ಸ್ಯಾಂಕೊ ಮತ್ತೆ ಸಾಹಸಾನ್ವೇಷಣೆಗಾಗಿ ಹಳ್ಳಿಯಿಂದ ಹೊರಬಿದ್ದರು.

( ೧೨ )

ಹೊರಟು ಎರಡುಮೂರು ದಿನಗಳಾಗಿದ್ದವು. ಸಂಜೆಯ ಸುಮಾರಿಗೆ ಒಂದು ಕಾಡಿಗೆ ಬಂದು ತಲುಪಿದರು. ಕತ್ತಲಾಯಿತು. ಅಲ್ಲಿಯೆ ಉಪಾಹಾರ ಮುಗಿಯಿಸಿಕೊಂಡು ತಮ್ಮ ವಾಹನಗಳನ್ನು ಕಟ್ಟಿಹಾಕಿ ನಿದ್ರೆಹೋದರು. ಮಲಗಿದ ಕೆಲ ಹೊತ್ತಿನಲ್ಲಿ ಡಾನ್ ತಟ್ಟನೆ ಎದ್ದು ಕುಳಿತ. ಇಬ್ಬರು ಕುದುರೆ ಸವಾರರು ಕಾಡಿನಲ್ಲಿ ಸಾಗುತ್ತಿದ್ದ ಹಾಗೆ ಶಬ್ದ ಕೇಳಿಸಿತ್ತು ಆತನಿಗೆ. ಕಿವಿಕೊಟ್ಟು ಕೇಳಿದ. ನಿಜ. ಯಾರೋ ಬರುತ್ತಿದ್ದರು. ಒಬ್ಬ ಏನನ್ನೋ ಹೇಳುತ್ತಿದ್ದ. ಇನ್ನೊಬ್ಬ "ಆಗಬಹುದು, ಒಡೆಯ" ಎಂದ ಹಾಗಾ

ಯಿತು. ತನ್ನ ಹಾಗೆಯೆ ಮತ್ತೆ ಯಾವನಾದರೂ ಒಬ್ಬ ಸರದಾರ ತನ್ನ ಸೇವಕನೊಂದಿಗೆ ರಾತ್ರಿ ಯೆಂದು ತಂಗಿರಬೇಕೆಂದು ಕ್ವಿಹೋ ಅನುಮಾನ ಕಟ್ಟಿದ. ಸ್ಯಾಂಕೋನನ್ನು ಏಳಿಸಿ ದನಿ ಬರುತ್ತಿದ್ದ ಕಡೆಗೆ ಸಾಗಿದ. ಆತನ ಅನುಮಾನ ಸರಿಯಾಗಿದ್ದಿತು. ಸರದಾರನೊಬ್ಬ ಸೇವಕನೊಂದಿಗೆ ತಂಗಿದ್ದ. ಮಾತುಗಳಾರಂಭವಾದವು. ಕೆಲ ಹೊತ್ತಿನಲ್ಲಿಯೆ ಇಬ್ಬರಿಗೂ ಗೆಳೆತನವೂ ಆಯಿತು. ತಮ್ಮ ತಮ್ಮ ಸಾಹಸಗಳನ್ನು ವಿವರಿಸುವುದಕ್ಕೆ ಮೊದಲಾಯಿತು. ಆ ಹೊಸ ಸರದಾರ ತನ್ನ ಸ್ಫೂರ್ತಿದೇವತೆಯಾಗಿದ್ದ ಕ್ಯಾಸಿಲ್ಡಿಯಾಳನ್ನು ಬಣ್ಣಿಸಿ, ಆಕೆಗಾಗಿ ತಾನು ಎಸಗಿದ ಸಾಹಸಗಳನ್ನು ರಸವತ್ತಾಗಿ ವಿವರಿಸಿ ಕೊನೆಗೆ, "ನಾನು ಸಾಧಿಸಬೇಕಾದದ್ದು ಯಾವುದೂ ಉಳಿದಿಲ್ಲ. ಕೊನೆಯ ಬಯಕೆಯನ್ನೂ ನಾನು ಪೂರೈಸಿಕೊಂಡಿದ್ದೇನೆ.. ಲೋಕೈಕವೀರ ಸರದಾರನಾದ ಡಾನ್ ಕ್ವಿಹೋನನ್ನು ಕೂಡ ದ್ವಂದ್ವಯುದ್ಧದಲ್ಲಿ ಸೋಲಿಸಿಬಿಟ್ಟಿದ್ದೇನೆ,'' ಎಂದ. ಈ ಮಾತನ್ನು ಕೇಳಿ ಕ್ವಿಹೋನಿಗೆ ಒಂದು ಕ್ಷಣ ಆಶ್ಚರ್ಯವಾಯಿತು. ಆದರೆ ಮರುಕ್ಷಣ ಕೋಪಾತಿರೇಕ ಉಕ್ಕಿ ಬಂದಿತು. ಆದರೂ ಅದನ್ನು ತೋರಗೊಡದೆ, "ನೀನು ಬೇಕಾದಷ್ಟು ಜನ ವೀರರನ್ನು ಉರುಳಿಸಿರಬೇಕು. ಒಪ್ಪುತ್ತೇನೆ. ಆದರೆ ಡಾನ್ ಕ್ವಿಹೋನನ್ನು ಸೋಲಿಸಿದ್ದು ಮಾತ್ರ ಸಂಪೂರ್ಣ ಸುಳ್ಳು,'' ಎಂದು ಹೇಳಿದ. ಇನ್ನೊಬ್ಬನೆಂದ, '' ಸುಳ್ಳೆ? ನಾನು ಮತ್ತೆ ಹೇಳುವೆ, ಕ್ವಿಹೋನನ್ನು ನಾನು ಸೋಲಿಸಿದ್ದು ನಿಜ, ಎಂದು. ಈ ಮಾತನ್ನು ನೀನು ನಂಬದಿದ್ದರೆ ನನ್ನ ಮಾತನ್ನು ಈ ಖಡ್ಗದಿಂದಲೇ ಸಿದ್ಧಮಾಡಿ ತೋರಿಸಬೇಕಾದೀತು.'' ತಡೆಯಲಾಗದೆ ಕ್ವಿಹೋ ಉತ್ತರ ಹೇಳಿದ: '' ನಾನೂ ಮತ್ತೆ ಹೇಳುತ್ತೇನೆ, ನೀನು ಕ್ವಿಹೋನ ಕೂಡ ಯುದ್ಧ ಮಾಡಿಲ್ಲ, ಎಂದು. ಆತನ ರೂಪ ತಾಳಿದ ಯಾವಳಾದರೂ ಒಬ್ಬ ಯಕ್ಷಿಣಿಯ ಕೂಡ ನೀನು ಹೋರಾಡಿರಬೇಕು. ನನ್ನ ಮಾತು ನಿಜ ಎಂದು ತೋರಿಸಲಿಕ್ಕೆ ಸಾಕ್ಷಾತ್ ಡಾನ್ ಕ್ವಿಹೋನೇ ನಿನ್ನೊಡನೆ ಯುದ್ಧ ಮಾಡಲು ಸಿದ್ಧನಾಗಿ ನಿಂತಿದ್ದಾನೆ.'' ಇದಕ್ಕೆ ಇನ್ನೊಬ್ಬ ಸರದಾರ ಹೇಳಿದ: '' ನಿನ್ನ ರೂಪವನ್ನು ತಾಳಿದ ಯಕ್ಷಿಣಿಯ ಕೂಡ ಹಿಂದೆ ನಾನು ಯುದ್ಧ ಮಾಡಿದ್ದರೂ ಈಗ ಮಾತ್ರ ಸಾಕ್ಷಾತ್ ಕ್ವಿಹೋನೊಡನೆ ಹೋರಾಡಿ ಸೋಲಿಸಲು ನಾನೂ ಸಿದ್ಧನಿದ್ದೇನೆ. ಆದರೆ ಒಂದು ಮಾತು. ನಮ್ಮಂಥ ಸರದಾರರು ದಾರಿಗಳ್ಳರ ಹಾಗೆ ಕತ್ತಲಲ್ಲಿ ಜಗಳವಾಡಬಾರದು. ಬೆಳಗಾದ ಮೇಲೆ ಎರಡು ಕೈ ನೋಡಿಬಿಡುವಾ. ಸೋತವ ಮಾತ್ರ ಗೆದ್ದವನಿಗೆ ಸಂಪೂರ್ಣ ಸೇವಕನಾಗಿರಬೇಕು. ಒಪ್ಪಿಗೆಯೆ ಇದಕ್ಕೆ?'' ಎಂದು ಕೇಳಿದ್ದಕ್ಕೆ '' ಖಂಡಿತವಾಗಿ'' ಎಂದು ಡಾನ್ ಸಮ್ಮತಿ ಹೇಳಿದ. ಇಬ್ಬರೂ ತಮ್ಮ ತಮ್ಮ ಸೇವಕರನ್ನು ಎಬ್ಬಿಸಿ ಬೆಳಗಿನ ದಾರಿಯನ್ನು ಕಾಯುತ್ತ ಕುಳಿತರು.

ಸೂರ್ಯೋದಯವಾಯಿತು. ಕ್ವಿಹೋ ತನ್ನ ಎದುರಾಳಿಯನ್ನು ನಿರುಕಿಸಿ ನೋಡಿದ. ಅಡಿಯಿಂದ ಮುಡಿಯವರೆಗೆ ಆತ ಧರಿಸಿದ ಕವಚದಲ್ಲಿ ಅರ್ಧ ಚಂದ್ರಾಕೃತಿಯ ಕನ್ನಡಿಯ ತುಣುಕುಗಳನ್ನು ಕೂಡಿಸಲಾಗಿತ್ತು. ತಲೆಕಾಪಿನಲ್ಲಿ ಬಣ್ಣಬಣ್ಣದ ಗರಿಗಳು ಮೆರೆಯುತ್ತಿದ್ದವು. ಮುಖದ ಮುಂದಿನ ಪರದೆಯನ್ನು ಸರಿಸಬೇಕೆಂದು ಡಾನ್ ಕೇಳಿದ. ಎದುರಾಳಿ ಒಪ್ಪಲಿಲ್ಲ. ದ್ವಂದ್ವ ಯುದ್ಧವಾದನಂತರವೇ ಮುಖವನ್ನು ತೋರಿಸುವುದು ಎಂದು ವಿನಯಪೂರ್ವಕವಾಗಿ ಹೇಳಿದ.

( ೧೩ )

ಇಬ್ಬರೂ ಸೇವಕರು ತಮ್ಮ ತಮ್ಮ ಯಜಮಾನರ ಕುದುರೆಗಳನ್ನು ಸಿದ್ಧಗೊಳಿಸಿದರು. ಜೋರಾಗಿ ಬಂದು ಒಬ್ಬರನ್ನೊಬ್ಬರು ಇದಿರುಗೊಳ್ಳುವುದೆಂದು ಇಬ್ಬರೂ ಕುದುರೆಗಳನ್ನೇರಿ ವಿರುದ್ಧ ದಿಕ್ಕುಗಳಲ್ಲಿ ಸಾಗಿದರು. ಸ್ಯಾಂಕೋ ಕ್ವಿಹೋನನ್ನು ಬೇಡಿದ. " ನಾನು ಯಾವುದಾದರೊಂದು ಗಿಡವನ್ನೇರಿ ಕುಳಿತುಕೊಳ್ಳುವೆ. ನಾನು ಮೇಲಕ್ಕೇರುವಂತೆ ಸಹಾಯ ಮಾಡು. ಆ ಸೇವಕನನ್ನು

ಕಂಡರೆ ನನಗಂತೂ ತುಂಬಾ ಹೆದರಿಕೆಯಾಗುತ್ತಿದೆ. ಏನು ಭಯಂಕರ ಮುಖ ! ಆತನ ಮೂಗು ನೋಡಿದರೆ–ಓಹ್, ನೋಡಿದೆಯಾ, ಹೇಗೆ ಮಿರಿ ಮಿರಿ ಮಿಂಚುತ್ತ ಕೆಂಪು ನಾಲಗೆಯ ಹಾಗೆ ಗದ್ದದ ವರೆಗೆ ಇಳಿಬಿದ್ದಿದೆ!" ಸ್ಯಾಂಕೋನನ್ನು ಒಂದು ಗಿಡದಮೇಲಕ್ಕೇರಿಸಿ ಕ್ವಿಹೋ ಕುದುರೆಯನ್ನೇರಿ ಹಿಂದಿರುಗಿ ಹಾರಿಬರಲು ಸಿದ್ಧನಾದ. ಆದರೆ— ಇದಿರು ನೋಡಿದರೆ ಎದುರಾಳಿ ನಿಂತಲ್ಲಿಯೆ ನಿಂತಿದ್ದಾನೆ! ಆತನ ಕುದುರೆ ಒಂದು ಹೆಜ್ಜೆಯನ್ನೂ ಮುಂದಿಡುತ್ತಿರಲಿಲ್ಲ. ಹೀಗಿರುವಾಗ ಕ್ವಿಹೋ ಆತನ ಮೇಲೆ ಏರಿ ಹೋಗಬಾರದಿತ್ತು. ಆದರೆ ಆತನ ಗಮನ ಈ ಕಡೆಗಿರಲಿಲ್ಲ ಕುದುರೆಯನ್ನು ವೇಗವಾಗಿ ಓಡಿಸಿ ಆತನ ಮೇಲೆ ಹಾರಿಬಂದು ಒಂದೇಟಿಗೆ ನೆಲಕ್ಕೆ ಕೆಡಹಿದ. ವಿಜಯೋನ್ಮಾದದಿಂದ ಕುದುರೆಯನ್ನಿಳಿದು ಆತ ಯಾರಿರಬೇಕೆಂದು ಮುಖಪರದೆಯನ್ನು ಸರಿಸಿದ. ಸ್ಯಾಂಕೋನಾದರೂ ಗಿಡದಿಂದ ಇಳಿದುಬಂದಿದ್ದ. ಹೀಗೆ ಸೋತು ಬಿದ್ದ ಸರದಾರನ ಮುಖ ನೋಡಿದ ಕೂಡಲೆ ಡಾನ್ ಆಶ್ಚರ್ಯದಿಂದ ಬೆಚ್ಚಿಬಿದ್ದ. ಆತ ಇನ್ನಾರೂ ಇರದೆ ಗೆಳೆಯನಾಗಿದ್ದ ಸ್ಯಾಮ್‌ಸನ್ ಕ್ಯಾರಾಸ್ಕೋ ಆಗಿದ್ದ. ಕ್ವಿಹೋನಿಗೆ ಮನವರಿಕೆಯಾಯಿತು—ಖಂಡಿತವಾಗಿ ಇದು ಯಾವಳಾದರೊಬ್ಬ ಯಕ್ಷಿಣಿಯ ಕೈವಾಡವಾಗಿರಲೇಬೇಕೆಂದು ತನ್ನ ಕತ್ತಿಯನ್ನು ಹಿರಿದುನಿಂತ. ಇದನ್ನು ಕಂಡು ಆ ಸರದಾರನ ಸೇವಕ ಧಾವಿಸಿ ಬಂದ. ಆತನ ಇಳಿಬಿದ್ದ ಉರಿಗೆಂಪು ಮೂಗು ಮಾತ್ರ ಮಾಯವಾಗಿತ್ತು! ಆತ ಬಿನ್ನವಿಸುತ್ತಿದ್ದ: "ತಾಳಬೇಕು, ದೊರೆಗಳೆ. ಇವರು ತಮ್ಮ ನೆರೆಹೊರೆಯವರಾದ ಸ್ಯಾಮ್‌ಸನ್. ನಾನು ಅವರ ಸೇವಕ. ದಯವಿಟ್ಟು ಖಡ್ಗವನ್ನು ಹಿಂತೆಗೆದುಕೊಳ್ಳಬೇಕು." ಸ್ಯಾಂಕೋ ಕೇಳಿದ "ಅದು ಸರಿ. ಆದರೆ ನಿನ್ನ ಮೂಗೇನಾಯಿತು ?" "ಇದೆಯಲ್ಲ, ಇಲ್ಲಿ ಜೇಬಿನಲ್ಲಿ!" ಎಂದು ಅಲ್ಲಿಂದ ಭಯಾನಕವಾದ ಒಂದು ಕಾಗದದ ಮುಖವಾಡವನ್ನು ತೆಗೆದು ತೋರಿಸಿದ!

ಈ ಮಾತುಗಳು ನಡೆದಾಗ ಕನ್ನಡಿಕವಚದ ಸರದಾರನ ಮೂರ್ಛೆ ಕಳೆಯಿತು. ಕ್ವಿಹೋ ತನ್ನ ಖಡ್ಗದ ತುದಿಯನ್ನು ಆತನ ಎದೆಗೆ ಇಟ್ಟ. "ಡಲ್ಸಿನಿಯಾಳಂಥ ಸುಂದರಿ ಇನ್ನೊಬ್ಬಳಿಲ್ಲ" ಎಂದು ಮೂರು ಬಾರಿ ಆತನಿಂದ ಹೇಳಿಸಿದ. ಆಕೆಯ ಹತ್ತಿರ ಹೋಗಿ ತಲೆ ಬಾಗಿ, ಮೂಗು ತಿಕ್ಕುತ್ತೇನೆ ಎಂದು ವಚನ ತೆಗೆದುಕೊಂಡ. ಅಲ್ಲದೆ ಆತ ಮೊದಲು ಸೋಲಿಸಿದವ ಡಾನ್ ಕ್ವಿಹೋ ಅಲ್ಲ ಎಂದು ಮೂರು ಬಾರಿ ಹೇಳಿಸಿಕೊಂಡ. ನಂತರವೇ ಆತನನ್ನು ಮೇಲಕ್ಕೇಳಲು ಬಿಟ್ಟ. ಇಷ್ಟಾದರೂ ಆತನಿಗೆ ಒಂದು ಸಂದೇಹ ಇದ್ದೇ ಇತ್ತು. ಈತ ನಿಜವಾಗಿಯೂ ಸ್ಯಾಮ್‌ಸನ್ನನಾಗಿರದೆ ಆತನ ರೂಪ ತಾಳಿದ ಯಕ್ಷಿಣಿಯಾಗಿರಬೇಕು, ಎಂದು.

ನಿಜವಾದ ಸಂಗತಿಯೆಂದರೆ ಪಾದ್ರಿ, ಕ್ಷೌರಿಕ ಮತ್ತು ಸ್ಯಾಮ್‌ಸನ್ ಮೂವರೂ ಸೇರಿ ಈ ಯೋಜನೆಯನ್ನು ಮಾಡಿದ್ದರು ಸ್ಯಾಮ್‌ಸನ್ ಸರದಾರನ ವೇಷದಲ್ಲಿ ಬಂದು ಕ್ವಿಹೊನನ್ನು ಸೋಲಿಸತಕ್ಕದ್ದು ; ಸೋತವ ಹೇಳಿದ ಹಾಗೆ ಕೇಳತಕ್ಕದ್ದೆಂಬ ವಚನದ ಪ್ರಕಾರ ಆತನನ್ನು ಮನೆಗೆ ಹಿಂದಿರುಗಿಸತಕ್ಕದ್ದು ಎನ್ನುವುದು ಅವರ ಯುಕ್ತಿಯಾಗಿತ್ತು. ಆದರೆ ಆಯತ್ತ ವೇಳೆಗೆ ಸ್ಯಾಮ್‌ಸನ್ನನ ಕುದುರೆ ಕೈಕೊಟ್ಟಿತ್ತು; ಯೋಜನೆಯನ್ನು ವಿಫಲಗೊಳಿಸಿತ್ತು. ಇತ್ತ ಕ್ವಿಹೊ ಮತ್ತು ಸ್ಯಾಂಕೋ ಆನಂದಪರವಶರಾಗಿ ತಮ್ಮತಮ್ಮ ವಾಹನಗಳನ್ನೇರಿಕೊಂಡು ಮುಂದೆ ಸಾಗಿದರು.

( ೧೪ )

ಒಂದು ದಿನ ಸ್ಯಾಂಕೋ ಮತ್ತು ಕ್ವಿಹೊ ಹೊರಟಿರುವಾಗ ದಾರಿಯಲ್ಲಿ ಅವರಿಗೆ ಇದಿರಾಗಿ ಒಂದು ದೊಡ್ಡ ಪೆಟ್ಟಿಗೆಯ ಗಾಲಿಗಳನ್ನು ಹಚ್ಚಿದಂತಿದ್ದ ಒಂದು ಗಾಡಿ ಬಂದಿತು. ಗಾಡಿಯವನನ್ನು ತಡೆದು ಕ್ವಿಹೋ ಕೇಳಿದ. "ಗಾಡಿ ಯಾರದು? ಅದರಲ್ಲೇನಿದೆ?" ಎಂದು ಮುಂತಾಗಿ. "ಗಾಡಿ ನನ್ನದು. ಇದರಲ್ಲಿ ಎರಡು ಭಯಂಕರ ಸಿಂಹಗಳಿವೆ. ರಾಜನಿಗೆ ಅವನ್ನು ಕಾಣಿಕೆಯಾಗಿ ಕೊಡಲೆಂದು ರಾಜಧಾನಿಗೆ ತೆಗೆ

ದುಕೊಂಡು ಹೊರಟಿದ್ದೇನೆ. ನನ್ನ ಜೊತೆಯಲ್ಲಿಯ ಈತ ಈ ಸಿಂಹಗಳ ರಕ್ಷಕ'' ಎಂದು ಗಾಡಿಯವ ಹೇಳಿದ. ಆ ರಕ್ಷಕನನ್ನು ಕುರಿತು ಕ್ವಿಹೋ ಕೇಳಿದ ''ಇದರಲ್ಲಿ ನಿಜವಾಗಿಯೂ ಸಿಂಹಗಳಿವೆಯೆ, ಅಥವಾ ಏನಾದರೂ ಗುಳಿಗೆ ಉರುಳಿಸುತ್ತಿದ್ದೀಯಾ?'' ಎಂದು. ''ನಿಜವಾಗಿಯೂ ಭಯಂಕರ ಸಿಂಹಗಳಿವೆ, ದೊರೆ. ಇಂಥ ಸಿಂಹಗಳನ್ನು ಸ್ಪೇನ್ ದೇಶದಲ್ಲಿ ಈ ಮೊದಲು ಯಾರೂ ನೋಡಿಲ್ಲ. ಅಲ್ಲದೆ ಅವಕ್ಕೆ ಇಂದು ಹೊಟ್ಟೆಗೂ ಹಾಕಿಲ್ಲ. ದಯವಿಟ್ಟು ದಾರಿ ಬಿಡಿ. ಸಾಧ್ಯವಿದ್ದಷ್ಟು ಬೇಗನೆ ಅವನ್ನು ರಾಜಧಾನಿಗೆ ಸಾಗಿಸಬೇಕು'' ಎಂದು ಆ ರಕ್ಷಕ ಬೇಡಿಕೊಂಡ. ಆದರೆ ಕ್ವಿಹೋ ಅಲ್ಲಿಂದ ಕದಲಲಿಲ್ಲ. ಅದಕ್ಕೆ ಬದಲಾಗಿ ಘನವಾಗಿ ಆಜ್ಞಾಪಿಸಿದ: "ಆ ಬಾಗಿಲನ್ನು ತೆರೆ. ಈ ವೀರ ಕ್ವಿಹೋ ಹಸಿದ ಸಿಂಹಗಳನ್ನು ಹೇಗೆ ಎದುರಿಸಬಲ್ಲ ಎಂಬುದನ್ನು ಈ ಪ್ರಪಂಚ ತಿಳಿಯಲಿ'' ಎಂದು.

ಸ್ಯಾಂಕೊ, ಗಾಡಿಯವ, ಸಿಂಹಗಳ ರಕ್ಷಕ ಎಲ್ಲರೂ ಸೇರಿ ಅಂಥ ಸಾಹಸ ಬೇಡ ಎಂದು ಪರಿಪರಿಯಾಗಿ ಬೇಡಿಕೊಂಡರೂ ಕ್ವಿಹೋ ಗಾಡಿಯವನಿಗೆ ಹೇಳಿದ: ''ನನ್ನ ಅಪ್ಪಣೆಯಂತೆ ಬಾಗಿಲನ್ನು ತೆರೆಯದಿದ್ದರೆ ನೀವಿಬ್ಬರೂ ಈ ಖಡ್ಗಕ್ಕೆ ಗುರಿಯಾಗಬೇಕಾದೀತು. ಎಚ್ಚರ," ಎಂದು. ಉಪಾಯಗಾಣದೆ ಗಾಡಿಯವ ಮತ್ತು ಸ್ಯಾಂಕೊ ಇಬ್ಬರೂ ದೂರದಲ್ಲಿ ಸುರಕ್ಷಿತವಾದ ಒಂದೆಡೆ ಹೋಗಿ ನಿಂತರು. ರಕ್ಷಕ ಬಾಗಿಲನ್ನು ತೆರೆದ. ಚಿನ್ನದಂಥ ಮೈಬಣ್ಣದ ಒಂದು ಪ್ರಚಂಡವಾದ ಸಿಂಹ ಆಚೆಯ ಮೂಲೆಯಿಂದ ನಿಧಾನವಾಗಿ ಎದ್ದು ಬಾಗಿಲ ಹತ್ತಿರಕ್ಕೆ ಬಂದಿತು. ಮೈ ಮುರಿದುಕೊಂಡಿತು. ದೊಡ್ಡದಾಗಿ ಬಾಯಿ ತೆರೆದು ಆಕಳಿಸಿತು. ಆಮೇಲೆ ತನ್ನ ಪಂಜಗಳನ್ನು, ಮೈಯನ್ನು ನೆಕ್ಕುತ್ತ ಕುಳಿತುಕೊಂಡಿತು. ಬಾಗಿಲಾಚೆಯ ಬೆಳಕಿಗೆ ಕಣ್ಣುಗಳನ್ನು ಅರೆಮುಚ್ಚಿ ಅತ್ತಿತ್ತ ನೋಡಿ ಹಿಂತಿರುಗಿ ಮತ್ತೆ ತನ್ನ ಸ್ಥಳಕ್ಕೆ ಹೋಗಿ ಬಿದ್ದುಕೊಂಡಿತು. ಕ್ವಿಹೋನಿಗೆ ಇದರಿಂದ ಸಮಾಧಾನವಾಗಲಿಲ್ಲ.



ಕ್ವಿಹೋನ ಅಂತ್ಯಕಾಲ

ಅದನ್ನು ಬಡಿದೆಬ್ಬಿಸಿ ಹೊರಬರುವಂತೆ ಮಾಡಬೇಕೆಂದು ರಕ್ಷಕನಿಗೆ ಹೇಳಿದ. ಆದರೆ ಆತ, "ಬೇಡ ದೊರೆಗಳೆ. ಈಗ ನೀವು ಮಾಡಿದ ಪರಾಕ್ರಮವನ್ನು ಅದುವರೆಗೆ ಯಾರೂ ಮಾಡಲಿಲ್ಲ. ವೈರಿಗಾಗಿ ನೀವು ಕಾಯುತ್ತ ನಿಂತಾಗ ವೈರಿ ಮುಂದೆ ಬಾರದಿದ್ದರೆ ಆತ ಸೋತಕ್ಕಿಂತಲೂ ಹೆಚ್ಚು. ಆಹ್ವಾನ ಮಾಡಿದವನಿಗೆ ಅದು ಖಂಡಿತವಾಗಿ ವಿಜಯ." ಕ್ವಿಹೋ "ಹೌದು. ನೀನೆನ್ನುವುದೂ ನಿಜವೆ. ಹಾಗಿದ್ದರೆ ಬಾಗಿಲನ್ನು ಮುಚ್ಚಿಬಿಡು. ಆದರೆ ಒಂದು ಕೆಲಸವನ್ನು ನೀನು ಮಾಡಲೇಬೇಕು. ಅದೆಂದರೆ ನಿನಗೆ ಇದಿರುಬಂದ ಪ್ರತಿಯೊಬ್ಬನಿಗೂ ಇದೀಗ ನಾನು ಸಾಧಿಸಿದ ವಿಕ್ರಮವನ್ನು ವಿವರವಾಗಿ ಹೇಳಬೇಕು." ಎಂದ. "ಅಷ್ಟನ್ನು ಮಾಡಲಾರೆನೆ? ತಪ್ಪದೆ ಮಾಡುವೆ" ಎಂದು ಮಾತುಕೊಟ್ಟು ಗಾಡಿಯವನು ಒಡನೆ ಬಂಡಿಯನ್ನು ಸಾಗಿಸಿಕೊಂಡು ಹೋದ. ಅವರಿಬ್ಬರೂ ಹೊರಡುವ ಮುನ್ನ ಅವರಿಂದ ಬಾಯಿತುಂಬ ಹೊಗಳಿಸಿಕೊಂಡು ಅವರಿಗೆ ಒಂದೊಂದು ವರಾಹಗಳನ್ನು ಕೊಟ್ಟು ಸ್ಯಾಂಕೊನೊಂದಿಗೆ ತನ್ನ ದಾರಿಯನ್ನು ಹಿಡಿದು ಕ್ವಿಹೋ ಮುಂದುವರಿದ.

( ೧೫ )

ಮುಂದುವರಿಯುತ್ತಿದ್ದ ಹಾಗೆ ಒಂದು ದಿನ ಇಬ್ಬರೂ ಒಂದು ನದೀತೀರಕ್ಕೆ ಬಂದರು. ದಡಕ್ಕೆ ಹತ್ತಿರ ಕಟ್ಟಲಾಗಿದ್ದ ಒಂದು ದೋಣಿಯನ್ನು ಕಂಡು ಕ್ವಿಹೋ ಕುದುರೆಯಿಂದಿಳಿದು ಸ್ಯಾಂಕೊ

ನಿಗೂ ಇಳಿಯಹೇಳಿದನಲ್ಲದೆ ತನ್ನ ಕುದುರೆಯನ್ನೂ ಆತನ ಕತ್ತೆಯನ್ನೂ ಎಲ್ಲಿಯಾದರೂ ಕಟ್ಟಿ ಮೇಯುತ್ತಿರುವಂತೆ ಏರ್ಪಾಡು ಮಾಡಲು ಹೇಳಿದ. ಸ್ಯಾಂಕೋನ ಮುದ್ರೆ ಪ್ರಶ್ನಾರ್ಥಕದ ಮೂರ್ತಸ್ವರೂಪವಾದಂತಿತ್ತು. ಕ್ವಿ ಹೋ ಹೇಳಿದ: "ಪೆದ್ದನ ಹಾಗೆ ಹಾಗೇನು ನೋಡುತ್ತ ನಿಂತಿರುವಿ? ನನ್ನ ಮಾತನ್ನುಕೇಳು. ಈ ದೋಣಿಯನ್ನು ನಮಗಾಗಿಯೆ ಇಲ್ಲಿ ಇರಿಸಲಾಗಿದೆ. ಆಚೆಯ ದಡದಲ್ಲಿ ಯಾರಾದರೂ ಸಂಕಟದಲ್ಲಿ ಸಿಕ್ಕಿರಬೇಕು. ನಾವು ದಾಟಿ ಅಲ್ಲಿಗೆ ಹೋಗಿ ಅವರನ್ನು ಬಿಡಿಸಬೇಕೆಂದೇ ಯಕ್ಷಿಣಿಯೊಬ್ಬಳು ಈ ದೋಣಿಯನ್ನು ಮಂತ್ರಮಾಟಗಳ ಮೂಲಕ ಇಲ್ಲಿರಿಸಿದ್ದಾಳೆ, ತಟ್ಟನೆ ಹೊರಡಬಾರದೆ?" ನಿರುತ್ಸಾಹದಲ್ಲಿಯೆ ಸ್ಯಾಂಕೋ ಹೇಳಿದ: "ಆಗಬಹುದು, ದೊರೆ. ಮಂತ್ರಮಾಟದ ದೋಣಿ ಇದು ಎಂದು ನನಗೇನೂ ತೋರುವುದಿಲ್ಲ. ಯಾವನಾದರೊಬ್ಬ ಬಡ ಮೀನುಗಾರ ಇಲ್ಲಿ ಕಟ್ಟಿಟ್ಟು ಹೋಗಿರಬೇಕು ಅಷ್ಟೆ." ಕ್ವಿಹೋನ ಲಕ್ಷ್ಯ ಈ ಮಾತಿನ ಕಡೆಗೆ ಇರಲೇ ಇಲ್ಲ. ಅವನಾಗಲೆ ದೋಣಿಯನ್ನು ಬಿಚ್ಚಿ ಅದರಲ್ಲಿ ಹೋಗಿ ಕುಳಿತೇಬಿಟ್ಟ. ನಿರ್ವಾಹವಿಲ್ಲದೆ ಸ್ಯಾಂಕೋನೂ ಹೋಗಿ ಕುಳಿತ. ದೋಣಿ ಸಾಗಿತು. ನಡುನೀರಿಗೆ ಬಂದಾಗ ಸ್ಯಾಂಕೋನಿಗೆ ಹೆದರಿಕೆಯಾಗತೊಡಗಿತು. ಸರಿಯಾಗಿ ಹುಟ್ಟು ಹಾಕುವುದು ಇಬ್ಬರಿಗೂ ತಿಳಿಯದು. ನೀರಿನ ಪಾತ್ರ ದೊಡ್ಡದು. ಸೆಳವು ಬೆಳೆಯುತ್ತಿತ್ತು. ಇದು ಸಾವಿಗೆ ಔತಣವಲ್ಲದೆ ಇನ್ನೇನೂ ಅಲ್ಲ ಎಂದೇ ಆತ ಭಾವಿಸಿದ. ಆದರೆ ಕ್ವಿಹೋ ಹೇಳುತ್ತಿದ್ದ, "ನೋಡಿದೆಯಾ ಹೇಗೆ ದೋಣಿ ತಾನಾಗಿಯೆ ವೇಗವಾಗಿ ಸಾಗುತ್ತಿದೆ! ಇಷ್ಟರಲ್ಲಿಯೆ ನಾವು ಸಮುದ್ರವನ್ನು ಸೇರಿಬಿಡಬಹುದು. ಆಮೇಲೆ ಯಾವ ಹೆದರಿಕೆಯೂ ಇಲ್ಲ!" ಸೆಳವಿನಗುಂಟ ದೋಣಿ ವೇಗವಾಗಿ ಸಾಗಿತ್ತು. ವೇಗಕ್ಕೆ ಸರಿಯಾಗಿ ಕ್ವಿಹೋನ ಉತ್ಸಾಹ ಬೆಳೆಯುತ್ತಿತ್ತು ಆತ ಗಟ್ಟಿಯಾಗಿ ಹೇಳುತ್ತಿದ್ದ: "ಅಲ್ಲಿ ನೋಡು, ಸ್ಯಾಂಕೊ. ಅಲ್ಲಿದೆ ನೋಡು ಕೋಟೆ! ಅದರಲ್ಲಿಯೆ ಒಬ್ಬ ಸರದಾರನನ್ನೂ ಒಬ್ಬ ರಾಜಕುವರಿಯನ್ನೂ ಸೆರೆಯಾಗಿಟ್ಟಿರುವುದು. ನಾವು ಹೋಗುವುದು ಅಲ್ಲಿಯೆ." ಸ್ಯಾಂಕೋ ಕೇಳಿದ "ಎಲ್ಲಿದೆ ಕೋಟೆ? ಎದುರಿಗೆ ಕಾಣುತ್ತಿರುವುದು ನೀರಿನ ಚಕ್ಕಿ! ಧಾನ್ಯ ಬೀಸುವುದಕ್ಕೆಂತ ಯಂತ್ರ ಮಾಡಿಕೊಂಡಿದ್ದಾರೆ." ಆದರೆ ಕ್ವಿಹೋ ಹೇಳಿದ "ಹುಚ್ಚು ನಿನಗೆ. ಹಾಗೆ ಕಾಣುತ್ತಿದ್ದರೂ ಅದರ ನಿಜವಾದ ಸ್ವರೂಪ ಬೇರೆಯಾಗಿದೆ, ನನಗೆ ಖಂಡಿತವಾಗಿ ಗೊತ್ತು. ಈ ಯಕ್ಷಿಣಿ ಯಾವುದನ್ನು ಏನು ಮಾಡಿಯಾಳು ಹೇಳಲಾಗುವುದಿಲ್ಲ!"

ದೋಣಿ ಈಗ ತೀರ ವೇಗವಾಗಿ ಸಾಗಿತ್ತು. ನೀರಚಕ್ಕಿಗೆ ಅದು ಬಂದು ಅಪ್ಪಳಿಸುವದು ಖಂಡಿತವಾಗಿತ್ತು. ದಡದ ಮೇಲಿನ ಜನರು ಕೂಗಾಟ ಎಬ್ಬಿಸಿ ಎಚ್ಚರ ಹೇಳಿದರು. ಅವರ ಕೂಗಾಟದಿಂದ ಕ್ವಿಹೋನಿಗೆ ಇನ್ನೂ ಸ್ಫೂರ್ತಿ ಬಂದಿತು. ದೋಣಿಯಲ್ಲಿ ಎದ್ದುನಿಂತ. ಅತ್ತಿಂದಿತ್ತ ತೂರಾಡತೊಡಗಿದ—ಆವೇಶದಿಂದ. ದಡದಲ್ಲಿಯ ಜನರು ಎಷ್ಟೇ ಪ್ರಯತ್ನಿಸಿದರೂ ಹೊಯ್ದಾಡುತ್ತಿದ್ದ ದೋಣಿ ತಟಕ್ಕನೆ ಬುಡಮೇಲಾಯಿತು. ಇಬ್ಬರೂ ವೀರರ ಮುಳುಗುತೇಲು ಪ್ರಾರಂಭವಾಯಿತು. ದಡದಲ್ಲಿ ನಿಂತಿದ್ದ ಇಬ್ಬರು ಮೂವರು ನೀರಿಗೆ ಹಾರಿ ಕ್ವಿಹೋ ಮತ್ತು ಸ್ಯಾಂಕೋನನ್ನು ದಂಡೆಗೆ ಎಳೆದು ತೆಗೆದರು. ದೋಣಿ ಮಾತ್ರ ಚಕ್ರಕ್ಕೆ ಅಪ್ಪಳಿಸಿ ಪುಡಿಪುಡಿಯಾಯಿತು. ಅದರ ಒಡೆಯರಾದ ಮೀನುಗಾರರು ಧಾವಿಸಿ ಬಂದರು. ಸಂತಾಪದಿಂದ ಸ್ಯಾಂಕೋನ ಮೇಲೆ ಏರಿಹೋದರು. ಡಾನ್ ನಡುವೆಯೆ ಬಂದು "ಈ ಕೋಟೆಯಲ್ಲಿ ಸೆರೆಯಾದವರನ್ನು ನೀವು ನಮ್ಮ ಸ್ವಾಧೀನಪಡಿಸಿದರೆ ಒಡೆದು ಹೋದ ಈ ದೋಣಿಗಾಗಿ ನಾವು ಪರಿಹಾರ ಕೊಡುತ್ತೇವೆ. ಸೆರೆಯಾದವರನ್ನು ನಮಗೆ ಒಪ್ಪಿಸದಿದ್ದರೆ ಮಾತ್ರ ಪರಿಣಾಮ ಚೆನ್ನಾಗಲಿಕ್ಕಿಲ್ಲ," ಎಂದು ಆರ್ಭಟಿಸಿದ. ಸುತ್ತಲಿನವರಲ್ಲಿಯ ಒಬ್ಬ ಧೈರ್ಯವಾಗಿ ಮುಂದೆ ಬಂದು ಅಣಕಿನ ದನಿಯಲ್ಲಿ ಕೇಳಿದ: "ಏನು ಮಹಾಶಯರೆ, ಯಾವ ಕೋಟೆ, ಎಲ್ಲಿಯ ಸೆರೆಯಾಳು? ಏನು ಸಮಾಚಾರ? ತಮ್ಮ ತಲೆ

ಸರಿಯಾಗಿದೆಯಷ್ಟೆ ? ಧಾನ್ಯ ಬೀಸಿಕೊಂಡು ಹೋಗಲಿಕ್ಕೆ ಇಲ್ಲಿ ಬಂದ ಯಾರನ್ನಾದರೂ ಓಡಿಸಿಕೊಂಡು ಹೋಗಬೇಕಾಗಿದೆಯೇನು ತಮಗೆ? -"

ಇಷ್ಟಾದರೂ ಕ್ವಿಹೋನಿಗೆ ನಿಜ ಪರಿಸ್ಥಿತಿಯ ಅರಿವಾಗಲಿಲ್ಲ. ಮತ್ತೆ ಆ ಯಕ್ಷಣಿಯೆ ಕೈಕೊಟ್ಟಳೆಂದು ಆತನಿಗೆ ಪೂರ್ತಿ ಮನವರಿಕೆಯಾಗಿತ್ತು. ಅದೇ ಮಾತನ್ನೇ ಮತ್ತೆ ಮತ್ತೆ ಸ್ಯಾಂಕೋನಿಗೆ ಹೇಳಿದ. ಕೊನೆಯಲ್ಲಿ ನಿರಾಶನಾಗಿ, ನಿರುಪಾಯನಾಗಿ ಯಕ್ಷಿಣಿಯನ್ನು ಶಪಿಸುತ್ತ ಸ್ಯಾಂಕೋನಿಂದ ಮೀನುಗಾರರಿಗೆ ದೋಣಿಯ ಬೆಲೆಯಷ್ಟು ಹಣವನ್ನು ಕೊಡಿಸಿ ಮೈಯುದ್ಧಕ್ಕೂ ತೊಯ್ದುಹೋದ ಬಟ್ಟೆಗಳನ್ನು ಹಾಕಿಕೊಂಡೇ ಮುಂದೆ ಸಾಗಿದ.

(೧೬)

ಕೆಲವು ದಿವಸಗಳ ನಂತರ ಸವಾರರಿಬ್ಬರೂ ಬಾರ್ಸೆಲೋನಾ ನಗರವನ್ನು ತಲುಪಿದರು. ಡಾನ್ ಅಂಟೋನಿಯೋ ಎಂಬ ಗೃಹಸ್ಥನಲ್ಲಿ ತಂಗಿದರು. ಒಂದು ದಿನ ಬೆಳಗಿನ ಸಮಯದಲ್ಲಿ ತನ್ನ ಸಕಲಸನ್ನಾಹದೊಂದಿಗೆ ಕ್ವಿಹೋ ಸಮುದ್ರ ತೀರದಲ್ಲಿ ಅಟ್ಟಹಾಸದಿಂದ ಅಡ್ಡಾಡುತ್ತಿದ್ದಾಗ ತನ್ನ ಹಾಗೆಯೆ ವೇಷವನ್ನು ಧರಿಸಿದ ಒಬ್ಬ ವ್ಯಕ್ತಿಯನ್ನು ಕಂಡ. ಬರುತ್ತಿದ್ದವನ ಢಾಲಿನ ಮೇಲೆ ಪೂರ್ಣಚಂದ್ರನ ಚಿತ್ರವನ್ನು ಬರೆಯಲಾಗಿತ್ತು. ಕ್ವಿಹೋನನ್ನು ಕಂಡ ಕೂಡಲೆ ಆತ "ವಿಖ್ಯಾತ ಸರದಾರ ಕ್ವಿಹೋ ಅಲ್ಲವೆ ನೀನು? ನಾನೂ ಒಬ್ಬ ಸರದಾರ. ನನ್ನ ಹೆಸರು ಬೆಳುದಿಂಗಳ ಬಹಾದ್ದೂರ. ನನ್ನ ಸ್ಫೂರ್ತಿ ದೇವತೆ ನಿನ್ನ ಆ ಮೂರು ಕಾಸಿನ ಡಲ್ಸಿನಿಯಾಳಿಗಿಂತ ನೂರುಪಟ್ಟು ಸುಂದರಿಯಾಗಿದ್ದಾಳೆಂಬುದನ್ನು ನೀನು ಒಪ್ಪಬೇಕು. ಇಲ್ಲವಾದರೆ ನನ್ನೊಡನೆ ಯುದ್ಧಮಾಡಬೇಕು. ನೀನು ಸೋತೆಯಾದರೆ ಮರುಮಾತನಾಡದೆ ಶಸ್ತ್ರಗಳನ್ನಿಟ್ಟು ಮನೆಗೆ ಮರಳಬೇಕು. ನಾನು ಸೋತೆನಾದರೆ, ನನ್ನ ಈ ಆಯುಧಗಳು, ಈ ಕುದುರೆ, ನನ್ನ ಕೀರ್ತಿ ಎಲ್ಲವೂ ನಿನ್ನವು. ನಿನ್ನ ದಾಸಾನುದಾಸನಾಗಿ ನೀನು ಹೇಳಿದ ಹಾಗೆ ಕೇಳುವೆ. ಒಪ್ಪಿಗೆಯೆ? "

ಈ ಬಿರುಸುಮಾತಿನ ಬಗೆಯನ್ನು ನೆನೆದು ಕ್ವಿಹೋ ಆಶ್ಚರ್ಯಚಕಿತನಾದಷ್ಟೇ ಗಾಬರಿಯೂ ಆಗಿದ್ದ. ಕಣ್ಣರಳಿಸಿ ಆತನನ್ನೇ ನೋಡುತ್ತಿದ್ದ. ಆದರೆ ಇಂಥ ಆಹ್ವಾನ ಬಂದಾಗ ಹಿಂತೆಗೆಯುವುದೇ ? ಸಾಧ್ಯವೆ ಇಲ್ಲ! ಎಂದು ಆಹ್ವಾನವನ್ನು ಸ್ವೀಕರಿಸಿದ. ಅಷ್ಟು ಹೊತ್ತಿಗೆ ಡಾನ್ ಅಂಟೋನಿಯೋ ಮತ್ತು ಊರಲ್ಲಿಯ ಅನೇಕರು ಅಲ್ಲಿಗೆ ಬಂದಿದ್ದರು. ಅವರು ಬಂದುದನ್ನು ಕಂಡು ಕ್ವಿಹೋನಿಗೆ ಸ್ಫೂರ್ತಿ ಇಮ್ಮಡಿಸಿತು.

ಇಬ್ಬರೂ ವೀರರು ಸಿದ್ಧರಾದರು. ಕುದುರೆಗಳನ್ನೇರಿ ವೀರಾವೇಶದಿಂದ ಒಬ್ಬರ ಮೇಲೊಬ್ಬರು ಏರಿ ಹೋದರು. ಕ್ವಿಹೋನ ಬಡಕಲು 'ರಾಝಿನಾಂಟೆ'ಗಿಂತ ಎಷ್ಟೋ ಪಾಲು ಬೆಳುದಿಂಗಳ ಬಹಾದ್ದೂರನ ಕುದುರೆ ಚಪಲವಾಗಿತ್ತು. ಅದನ್ನೇರಿ ಬಂದು ಹಾಯ್ದಾಗ ಕ್ವಿಹೋ ತನ್ನ ಕುದುರೆಯೊಂದಿಗೆ ಗಾಳಿಯ ಪಾಲಾಗಿ ಆಚೆಗೆ ಹೋಗಿ ಬಿದ್ದ. ಬೆಳುದಿಂಗಳ ಬಹಾದ್ದೂರ ಕ್ವಿಹೋ ಬಿದ್ದಲ್ಲಿಗೆ ನಡೆದು ಬಂದು ತನ್ನ ಬರ್ಚಿಯ ತುದಿಯನ್ನು ಕ್ವಿಹೋನ ಕುತ್ತಿಗೆಯ ಮೇಲಿರಿಸಿ ಒಪ್ಪಿಕೊಂಡ ಶರ್ತುಗಳ ನೆನಪು ಕೊಟ್ಟ. ಬತ್ತಿ ಹೋದ ದನಿಯಲ್ಲಿ ಕ್ವಿಹೋ ಉಸಿರಿದ. "ಏನಾದರೂ ಆಯಿತು. ನನ್ನ ಡಲ್ಸಿನಿಯಾ ಮಾತ್ರ ತ್ರಿಭುವನ ಸುಂದರಿ ಎಂದೇ ನಾನು ಹೇಳುವವ. ನನ ಘನತೆಯನ್ನು ಕಸಿದುಕೊಂಡ ನೀನು ನನ್ನ ಪ್ರಾಣವನ್ನೂ ಕಸಿದುಕೊಳ್ಳಬಹುದು," ಎಂದು.

ಆದರೆ ಬೆಳುದಿಂಗಳ ಬಹಾದ್ದೂರನಿಗೆ ಆತನ ಪ್ರಾಣವನ್ನು ಕಸಿದುಕೊಳ್ಳುವುದು ಬೇಡವಾಗಿತ್ತು. ಮೊದಲು ಒಪ್ಪಿದಂತೆ ಶಸ್ತ್ರಗಳನ್ನು ಬಿಟ್ಟುಕೊಟ್ಟು ಮನೆಗೆ ಮರಳಿ ಹೋಗಲು ಸರದಾರನಿಗೆ ಒಪ್ಪಬಹುದಾದ ರೀತಿಯಲ್ಲಿ ಕ್ವಿಹೋ ಒಪ್ಪಿದ. ನಿರಾಶನಾಗಿ, ನಿತ್ರಾಣನಾಗಿ ಬಿದ್ದಿದ್ದ ಆತನನ್ನು ಉಳಿದವರು ಎತ್ತಿಕೊಂಡು ಊರಲ್ಲಿ ತಂದರು. ಯಜಮಾನನ ಸೋಲಿನಿಂದ ದುಃಖಪಟ್ಟ ಸ್ಯಾಂಕೋನಾದರೂ ಆತನ ಹಿಂದೆ ಹಿಂದೆಯೇ ಜೋಲು ಮೋರೆ ಹಾಕಿಕೊಂಡು ಸಾಗಿದ್ದ.

(೧೭)

ಕ್ವಿಹೋನನ್ನು ಕೊನೆಯಾಗಿ ಸೋಲಿಸಿದ ಸರದಾರ ಸ್ಯಾಮ್‌ಸನ್ ಕ್ಯಾರಾಸ್ಕೋನಾಗಿದ್ದನೆಂಬುದನ್ನು ಆಗಲೆ ಊಹಿಸಬಹುದು. ಯುಕ್ತಿಪ್ರಯುಕ್ತಿಗಳಿಂದ ಆತನನ್ನು ಮನೆಗೆ ಹಿಂದಿರುಗಿಸಬೇಕೆಂದು ಪಾದ್ರಿಯನ್ನು ಮೊದಲ್ಗೊಂಡು ಕ್ವಿಹೋನ ಮಿತ್ರರೆಲ್ಲರೂ ಹೆಣಗುತ್ತಿದ್ದರು. ಕನ್ನಡಿ ಕವಚದ ಸರದಾರನಾಗಿ ಬಂದು ಸೋತು ಹೋದವನೆ ಬೆಳುದಿಂಗಳ ಬಹಾದ್ದೂರನಾಗಿ ಕ್ವಿಹೋನನ್ನು ಸೋಲಿಸಿದ. ಕೊಟ್ಟ ಮಾತಿಗೆ ಸರಿಯಾಗಿ ಆತ ಹಿಂದಿರುಗುವನೆಂಬ ಭರವಸೆಯಿಂದ ಆತ ಆಂಟೋನಿಯೋನಿಗೆ ಇದ್ದ ವಿಷಯವನ್ನೆಲ್ಲ ವಿವರಿಸಿ ಹಳ್ಳಿಗೆ ಹಿಂದಿರುಗಿದ.

ಸುಮಾರು ಒಂದು ವಾರ ಕಾಲವನ್ನು ಕ್ವಿಹೋ ಬಾರ್ಸೆನೋನಾ ನಗರದಲ್ಲಿ ಅಂಟೋನಿಯೋನ ಮನೆಯಲ್ಲಿ ತನ್ನ ಹಾಸಿಗೆಯಲ್ಲಿಯೇ ಕಳೆದ. ಆ ನಂತರ ಒಂದು ದಿನ ಬೆಳಿಗ್ಗೆ ತನ್ನ ಕುದುರೆಯನ್ನೇರಿದ. ಕವಚ, ಆಯುಧ ಮುಂತಾದವುಗಳನ್ನು ಬಿಚ್ಚಿಕೊಟ್ಟು ಸ್ಯಾಂಕೋನಿಗೆ ಅವನ್ನೆಲ್ಲ ತರಹೇಳಿದ. ಮನಸ್ಸಿಲ್ಲದ ಮನಸ್ಸಿನಿಂದ ಮನೆಯ ದಾರಿಯನ್ನು ಹಿಡಿದ. ಸೋಲಿನ ಅವಮಾನ ಸಹಿಸಲಸಾಧ್ಯವಾಗಿತ್ತು. ಆತನ ದುಃಖದಲ್ಲಿ ಸಹಭಾಗಿಯಾಗಿ ಸ್ಯಾಂಕೋ ಆತನನ್ನು ಹಿಂಬಾಲಿಸಿದ್ದ. ಹಾಗೂ ಹೀಗೂ ದಾರಿ ಸವೆಯಿತು ಕ್ವಿಹೋ ಊರನ್ನು ತಲುಪಿದ. ಆತ ಹಿಂದಿರುಗಿ ಬಂದ ಸಮಾಚಾರವನ್ನು ತಿಳಿದು ಆತನ ಗೆಳೆಯರಾದ ಪಾದ್ರಿ, ಕ್ಷೌರಿಕ, ಸ್ಯಾಮ್‌ಸನ್ ಎಲ್ಲರೂ ಧಾವಿಸಿ ಬಂದು, ಸಹಾನುಭೂತಿಪೂರ್ವಕವಾಗಿ ಆತನನ್ನುಮನೆಗೆ ಮುಟ್ಟಿಸಿದರು. ಹಾಸಿಗೆಯಲ್ಲಿ ಮಲಗಿಸಿದರು, ಉಪಚರಿಸಿದರು. ಕ್ವಿಹೋನ ದೇಹದಣಿದಿತ್ತು. ಮನ ನೊಂದಿತ್ತು. ಆತನಿಗೆ ಜ್ವರ ಬರಲಾರಂಭವಾಯಿತು. ಗೆಳೆಯರು, ವೈದ್ಯರು ಔಷಧೋಪಚಾರ ಮಾಡಿದರು. ಆತನನ್ನು ಹುರಿದುಂಬಿಸಲು ಅನೇಕ ಯತ್ನಗಳನ್ನು ಮಾಡಿದರು. ಪ್ರಯೋಜನವಾಗಲಿಲ್ಲ. ಸ್ವಾಮಿಭಕ್ತನಾದ ಸ್ಯಾಂಕೋನಂತೂ ಯಜಮಾನನ ಬದಿಯಿಂದ ಅಲುಗಾಡುತ್ತಿರಲಿಲ್ಲ.

ಬಂದ ಜ್ವರ ಕಡಿಮೆಯಾಗಲಿಲ್ಲ. ಒಂದು ಸಲ ತಪ್ಪಿದ ಎಚ್ಚರ ತಿರುಗಿ ಬಂದಾಗ ಸುತ್ತಲೂ ನೆರೆದ ಗೆಳೆಯರನ್ನುದ್ದೇಶಿಸಿ ಕ್ವಿಹೋ ಹೇಳಿದ: "ಗೆಳೆಯರೇ, ನಿಮ್ಮಲ್ಲಿ ಯಾರೂ ದುಃಖಪಡಬೇಕಾದದ್ದಿಲ್ಲ. ನನ್ನ ಬದುಕಿನ ಕೊನೆಯ ಗಳಿಗೆಯಲ್ಲಾದರೂ ಆಗಲಿ, ನನ್ನ ಬುದ್ಧಿ ಮತ್ತೆ ತಿಳಿಯಾಗಿದೆ. ಎಲ್ಲವೂ ಮತ್ತೆ ಮೊದಲಿನ ಹಾಗೆ ನನ್ನ ದೃಷ್ಟಿಗೆ ಸರಿಯಾಗಿ ಕಾಣತೊಡಗಿದೆ. ಇದೀಗ ನಾನು ಡಾನ್ ಕ್ವಿಹೊ ಎಂಬ ಹೆಸರಿನ ಮೂರ್ಖ ಸರದಾರನಾಗಿ ಉಳಿದಿಲ್ಲ. ಸರಳ ಸ್ವಭಾವದ ಒಂದು ಕಾಲದ ಅಲಾಂಝೋ ಕ್ವಿಹಾಡಾ ಆಗಿದ್ದೇನೆ. ನನ್ನ ಬದುಕಿನ ಅತ್ಯಮೂಲ್ಯವಾದ ಭಾಗವನ್ನು ಕಾಲ್ಪನಿಕವಾದ, ಅದ್ಭುತರಮ್ಯವಾದ ಕಟ್ಟುಕಥೆಗಳನ್ನು ಓದುವುದರಲ್ಲಿ ಹಾಳು ಮಾಡಿದೆ. ಹುಚ್ಚನ ಹಾಗೆ ಕಥೆಗಳಲ್ಲಿಯ ಹಾಗೆಯೆ ನಡೆದುಕೊಂಡೆ. ಇನ್ನೇನು ನಾನು ಬಹುಕಾಲ ಬದುಕಿ ಉಳಿಯುವುದಿಲ್ಲ. ಸಾಯುವ ಮೊದಲು ನನಗೆ ಇಷ್ಟಾದರೂ ಬುದ್ಧಿ ಹೊಳೆಯಿತು ಎನ್ನುವುದು ಈಶ್ವರನ ಕೃಪೆಯಲ್ಲದೆ ಇನ್ನೇನು?" ಎನ್ನುತ್ತಿರುವಾಗ ಆತನ ಕಣ್ಣಿನಿಂದ ಎರಡು ಹನಿ ಉದುರಿದವು. ಅರೆಕ್ಷಣ ತಡೆದು ಮುಂದುವರಿಯುತ್ತ "ಒಂದು ಕಾಲಕ್ಕೆ ನಾನು ಡಾನ್ ಕ್ವಿಹೋ ಆಗಿದ್ದೆ ಆದರೆ ಈಗ ನಾನು ಕೇವಲ ಅಲಾಂಝೋ ಕ್ವಿಹಾಡಾ. ಆದ್ದರಿಂದ ನೀವು ನನ್ನನ್ನು ಮೊದಲಿನ ಹಾಗೆಯೆ ಪ್ರೀತಿಯಿಂದ ಕಾಣಬೇಕು; ಸಹಾನುಭೂತಿಯಿಂದ ಕಾಣಬೇಕು. ಅಷ್ಟಾದರೆ ನಾನು ಸುಖವಾಗಿ ಪ್ರಾಣ ಬಿಡುವೆ" ಎಂದ. ಒಂದೆರಡು ಗಳಿಗೆಯಲ್ಲಿ ಆತನ ಪ್ರಾಣಪಕ್ಷಿ ಹಾರಿಹೋಯಿತು.

ಅಲ್ಲಿಗೆ ಡಾನ್‌ಕ್ವಿಹೋನ ಅವತಾರ ಮುಗಿಯಿತು. ಏನು ಮಾಡಿದರೂ ಒಳ್ಳೆಯವನಾತ. ಅಂತೆಯೆ ಜನ ಆತನನ್ನು ಪ್ರೀತಿಸಿತ್ತು. ಇಂದಿಗೂ ಆತನ ಕತೆಯನ್ನೋದಿದವರು ಆತನ ಬಗೆಯಲ್ಲಿ ಸಹಾನುಭೂತಿಯನ್ನೇ ವ್ಯಕ್ತ ಮಾಡುತ್ತಾರೆ.

# ನಿಮ್ಮ ಶಬ್ದ ಭಾಂಡಾರ ಬೆಳೆಯಲಿ

## ಶಬ್ದ ಭಾಂಡಾರವು ಹಣದ ಭಾಂಡಾರಕ್ಕಿಂತಲೂ ಅಮೂಲ್ಯವಾಗಿದೆ

ಇಲ್ಲಿ ಪ್ರತಿ ತಿಂಗಳು ಕೆಲವು ಶಬ್ದಗಳನ್ನು ಪರಿಚಯ ಮಾಡಿ ಕೊಡಲಾಗುವದು. ಆಯಾ ಶಬ್ದದ ಮುಂದೆ ನಾಲ್ಕು ಅರ್ಥಗಳನ್ನು ಕೊಟ್ಟಿದ್ದು, ಅವುಗಳಲ್ಲಿ ಒಂದು ಮಾತ್ರ ಸರಿಯಾಗಿರುತ್ತದೆ. ನಿಮಗೆ ಸರಿಯೆನಿಸಿದ ಅರ್ಥವನ್ನು ಮೊದಲು ಆರಿಸಿಕೊಳ್ಳಿರಿ. ಆಮೇಲೆ ಇದರ ಹಿಂದಿನ ಪುಟ ನೋಡಿರಿ. ಅಲ್ಲಿ ಸರಿಯಾದ ಅರ್ಥಗಳನ್ನು ವಿವರಿಸಿದೆ.

೧. ಪ್ರತಿಗಾಮಿ
(ಅ) ಮೆಲ್ಲಗೆ ನಡೆಯುವವ (ಆ) ಪ್ರತಿ ತೆಗೆಯುವ ಯಂತ್ರ (ಇ) ಪ್ರಗತಿ ವಿರೋಧಿ (ಈ) ಮುಂಘೋರಣೆ.

೨. ಅಪ್ರತಿಮ
(ಅ) ಇಂಥದು ಇನ್ನೊಂದಿಲ್ಲ ಎನಿಸುವಂಥ (ಆ) ಪ್ರಗತಿಪರ (ಇ) ಮೂರ್ತಿಯಿಲ್ಲದ ಗುಡಿ (ಈ) ಮೂರ್ತಿಭಂಜಕ.

೩. ಪೂರ್ವಗ್ರಹ
(ಅ) ಒಂದು ಗ್ರಹ (ಆ) ಹಳೇ ಮನೆ (ಇ) ವಿಗ್ರಹ (ಈ) ತಿಳಿದುಕೊಳ್ಳದೆ ಮಾಡಿಕೊಂಡ ಅಭಿಪ್ರಾಯ.

೪. ಕದಾಚಿತ್
(ಅ) ಕದ ಮುಚ್ಚಿದ್ದು (ಆ) ಅಪರೂಪವಾಗಿ (ಇ) ಚಿತ್ತುಕಾಟು (ಈ) ತೆರೆದ ಬಾಗಿಲು.

೫. ಕೋಲಾಹಲ
(ಅ) ಒಂದು ವಿಧದ ದೆವ್ವದ ಕುಣಿತ (ಆ) ಕೋಲಾಟ (ಇ) ಗೊಂದಲ (ಈ) ಅವಸರ.

೬. ತಡಕು
(ಅ) ತೊಡಕು (ಆ) ಗಡಿಬಿಡಿ (ಇ) ತಡಮಾಡು (ಈ) ಕತ್ತಲಲ್ಲಿ ಹುಡುಕು.

೭. ಗ್ರಾಮೀಣ
(ಅ) ಹಳ್ಳಿಗಾಡಿನ (ಆ) ಕಲ್ಲಿನ (ಇ) ಒಂದು ಜಾತಿಯ ಮೀನ (ಈ) ಗೊಂದಲ ಬಡಕ.

೮. ಗಮನಾರ್ಹ
(ಅ, ಗುರಿ (ಆ) ಯಾತ್ರೆ ಹೊರಟ (ಇ) ನೆನಪಿಡಬೇಕಾದ (ಈ) ಲಕ್ಷಿಸಬೇಕಾದ.

೯. ಘರ್ಷಣೆ
(ಅ) ತಿಕ್ಕಾಟ (ಆ) ಒತ್ತಾಯ (ಇ) ಗರ್ಜನೆ (ಈ) ಮುಟ್ಟುವದು.

೧೦. ತಥ್ಯ
(ಅ) ಸುಳ್ಳು (ಆ) ಜಡ್ಡಾದಾಗಿನ ಆರೈಕೆ (ಇ) ಸತ್ಯ, ವಾಸ್ತವಿಕ ವಿಷಯ (ಈ) ನಿತ್ಯ.

೧೧. ದೇಶಾವರ
(ಅ) ದೇಶಾಂತರ (ಆ) ಪ್ರದೇಶ (ಇ) ಇದ್ದೂರಿನ (ಈ) ತಿರುಪೆ.

೧೨. ತಾದಾತ್ಮ್ಯ
(ಅ) ಒಂದು ವಿಷಯದಲ್ಲಿ ಸಂಪೂರ್ಣ ಮಗ್ನವಾಗಿರುವುದು (ಆ) ಆಧ್ಯಾತ್ಮಿಕ (ಇ) ಅಂತರಂಗ (ಈ) ಬೆರೆಯುವದು.

# ‘ಶಬ್ದ ಭಾಂಡಾರ’ದ ಸರಿಯಾದ ಅರ್ಥಗಳು

೧. **ಪ್ರತಿಗಾಮಿ.** (ಇ) ಪ್ರಗತಿವಿರೋಧಿ; ಹಿಂದೆ ಇದ್ದದ್ದೇ ಒಳಿತೆನ್ನುವ ರಾಜಕೀಯ ಅಥವಾ ಆರ್ಥಿಕ ವಿಚಾರವುಳ್ಳವ; ಸಂಪ್ರದಾಯವಾದಿ. ಉದಾ: ಮುಸ್ಲಿಂ ಲೀಗಿನ ಆರ್ಥಿಕ ವಿಚಾರಗಳು ಪ್ರತಿಗಾಮಿಯಾಗಿದ್ದವು. (ಸಂಸ್ಕೃತ, ಪ್ರತಿ = ಹಿಂದೆ, ಗಾಮಿ = ಹೋಗುವವ).

೨. **ಅಪ್ರತಿಮ.** (ಅ) ಇಂಥದು ಇನ್ನೊಂದಿಲ್ಲ ಎನಿಸುವಂಥ; ಎದುರಿಲ್ಲದ; ಅಪೂರ್ವ. ಉದಾ: ಅವಳ ಸೌಂದರ್ಯ ಅಪ್ರತಿಮವಾಗಿತ್ತು. (ಸಂಸ್ಕೃತ, ಅ = ಇಲ್ಲ; ಪ್ರತಿಮಾ = ಹೋಲುವಂಥದು.)

೩. **ಪೂರ್ವಗ್ರಹ.** (ಈ) ತಿಳಿದುಕೊಳ್ಳುವ ಮೊದಲೇ ಮಾಡಿಕೊಂಡ ಅಭಿಪ್ರಾಯ; ನಿಷ್ಕಾರಣ ಕಲುಷಿತ ಗ್ರಹಿಕೆ. ಉದಾ: ನ್ಯಾಯಾಧೀಶರು ಪೂರ್ವಗ್ರಹಪೀಡಿತರಾಗಿದ್ದರು. (ಸಂಸ್ಕೃತ, ಪೂರ್ವ = ಮೊದಲು; ಗ್ರಹ = ಗ್ರಹಿಕೆ).

೪. **ಕದಾಚಿತ್.** (ಅ) ಅಪೂರ್ವವಾಗಿ, ವಿರಳವಾಗಿ; ಎಂದಾದರೊಮ್ಮೆ; ಒಂದೊಮ್ಮೆಗೆ. ಉದಾ: ಕದಾಚಿತ್ ನನಗೇನಾದರೂ ಆದರೆ—. (ಸಂಸ್ಕೃತ).

೫. **ಕೋಲಾಹಲ.** (ಇ) ಗೊಂದಲ; ಗಲಾಟೆ; ತಳಮಳ; ಅಸ್ಪಷ್ಟ ಕೂಗಾಟ. ಉದಾ: ಪಾಕಿಸ್ತಾನದಲ್ಲಿ ಯಾವಾಗಲೂ ರಾಜಕೀಯ ಕೋಲಾಹಲವಿದೆ. (ಸಂಸ್ಕೃತ).

೬. **ತಡಕು.** (ಈ) ಕತ್ತಲಲ್ಲಿ ಹುಡುಕು; ಹುಡುಕು; ಕೈಯಾಡಿಸು; ಕೈಚಾಚು. (ಕನ್ನಡ).

೭. **ಗ್ರಾಮೀಣ.** (ಅ) ಹಳ್ಳಿಗಾಡಿನ; (ಆದ್ದರಿಂದ) ಮೂಢ. (ಸಂಸ್ಕೃತ).

೮. **ಗಮನಾರ್ಹ.** (ಈ) ಲಕ್ಷಿಸತಕ್ಕ; (ಆದ್ದರಿಂದ) ಮಹತ್ವದ. ಉದಾ: ಅವರ ಪುಸ್ತಕದಲ್ಲಿ ಅನೇಕ ಗಮನಾರ್ಹ ವಿಷಯಗಳಿವೆ. (ಸಂಸ್ಕೃತ, ಗಮನ = ಹೋಗಲು, ಅರ್ಹ = ಯೋಗ್ಯವಾದ; ಅಂದರೆ ವಿಚಾರಿಸಬೇಕಾದ).

೯. **ಘರ್ಷಣೆ.** (ಅ) ತಿಕ್ಕಾಟ; ಪುಡಿಯಾಗುವಿಕೆ; ಮರ್ದನ; ಮಸೆಯುವಿಕೆ; ಒರಸುವಿಕೆ. ಉದಾ: ಜಾತೀಯ ಘರ್ಷಣೆಯನ್ನು ತಡೆಯಲು ಗಾಂಧೀಜಿ ಪ್ರಯತ್ನಿಸಿದರು. (ಸಂಸ್ಕೃತ, ಘರ್ಷ = ತಿಕ್ಕು).

೧೦. **ತಥ್ಯ.** (ಇ) ಸತ್ಯ; ವಾಸ್ತವಿಕ ಸಂಗತಿ; ವಿದ್ಯಮಾನ; ನಿಜ. ಉದಾ: ಅವನ ಮಾತಿನಲ್ಲಿ ತಥ್ಯಾಂಶಗಳಿವೆ. (ಸಂಸ್ಕೃತ).

೧೧. **ದೇಶಾವರ.** (ಈ) ತಿರುಪೆ; ಊರಿಂದೂರಿಗೆ ತಿರುಗಿ ಭಿಕ್ಷೆ ಬೇಡುವದು. ದೇಶಾವರಿ ನಗೆ ಅಂದರೆ ತಿರುಪೆಯವರ ನಗೆಯಂಥ ಸುಳ್ಳು ನಗೆ. (ಸಂಸ್ಕೃತಜನ್ಯ).

೧೨. **ತಾದಾತ್ಮ್ಯ.** (ಅ) ಒಂದು ವಿಷಯದಲ್ಲಿ ಸಂಪೂರ್ಣ ಮಗ್ನನಾಗಿರುವದು, ಅದರಲ್ಲೇ ಆಸಕ್ತನಾಗಿರುವದು; ಲೀನನಾಗಿರುವದು. ಉದಾ: ಭಕ್ತರು ಪರಮಾತ್ಮನಲ್ಲಿ ತಾದಾತ್ಮ್ಯ ಹೊಂದಿರುವರು. (ಸಂಸ್ಕೃತ, ತತ್ = ಅದು; ಆತ್ಮ).

---

## ನಿಮ್ಮ ಶಬ್ದಶಕ್ತಿಯ ತರಗತಿ

ನೀವು ಎಷ್ಟು ಶಬ್ದಗಳಿಗೆ ಅರ್ಥ ಆರಿಸಿದ್ದು ಸರಿಯಾಗಿದೆಯೆಂದು ಎಣಿಸಿ ಕೆಳಗಿನಂತೆ ನಿಮ್ಮ ಶಬ್ದಶಕ್ತಿಯ ತರಗತಿಗಳನ್ನು ಅರಿಯಿರಿ.

೬—೮ ಸರಿಯಿದ್ದರೆ ... ಸಾಧಾರಣ
೯—೧೦ ,, .... ಉತ್ತಮ
೧೧—೧೨ ,, .... ಅತ್ಯುತ್ತಮ

# ಅಧ್ಯಾತ್ಮ ಕಾರ್ಯಾಲಯದ ಪ್ರಕಟನೆಗಳು

## ಶ್ರೀ ದಿವಾಕರ ರಂಗನಾಥರ ಅಮೂಲ್ಯ ಗ್ರಂಥಗಳು

| | |
|---|---|
| ೧. ಅಂತರಾತ್ಮನಿಗೆ (೪ನೆಯ ಆವೃತ್ತಿ) | ರೂ. ೧—೦—೦ |
| ೨. ಗೀತೆಯ ಗುಟ್ಟು (೪ನೆಯ ಆವೃತ್ತಿ) | ೨-೧೨—೦ |
| ೩. ಗೀತಾ ನಿತ್ಯಪಾಠ (೨ನೆಯ ಆವೃತ್ತಿ) | ೦—೬—೦ |
| ೪. ಉಪನಿಷತ್ಪ್ರಕಾಶ (೫ನೆಯ ಆವೃತ್ತಿ) | ೩—೮—೦ |
| ೫. ಛಾಂದೋಗ್ಯೋಪನಿಷತ್ತು (೧ನೆಯ ಆವೃತ್ತಿ) | ೩—೮—೦ |
| ೬. ಬೃಹದಾರಣ್ಯಕೋಪನಿಷತ್ತು (೧ನೆಯ ಆವೃತ್ತಿ) | ೩—೮—೦ |
| ೭. ಉಪನಿಷತ್ ರಹಸ್ಯ (೩ನೆಯ ಆವೃತ್ತಿ) | ೩—೮—೦ |
| ೮. ಉಪನಿಷತ್ಕಥಾವಲಿ (೩ನೆಯ ಆವೃತ್ತಿ) | ೧—೬—೦ |
| ೯. ಭಕ್ತಿಸೂತ್ರಗಳು (೨ನೆಯ ಆವೃತ್ತಿ) | ೦-೧೦—೦ |
| ೧೦. ಕರ್ಮಯೋಗ (೨ನೆಯ ಆವೃತ್ತಿ) | ೧—೮—೦ |
| ೧೧. ಹರಿಭಕ್ತಿ ಸುಧೆ (೩ನೆಯ ಆವೃತ್ತಿ) | ೨—೮—೦ |
| ೧೨. ರಾಮಕೃಷ್ಣ ಚರಿತಾಮೃತ (೩ನೆಯ ಆವೃತ್ತಿ) | ೩—೦—೦ |
| ೧೩. ಬಾಪೂ (೩ನೆಯ ಆವೃತ್ತಿ) | ೨—೦—೦ |
| ೧೪. ಗಾಂಧೀಜಿ (ನಾನು ಕಂಡಂತೆ) (೧ನೆಯ ಆವೃತ್ತಿ) | ೧—೪—೦ |
| ೧೫. ಸತ್ಯಾಗ್ರಹ (೨ನೆಯ ಆವೃತ್ತಿ) | ೩—೮—೦ |
| ೧೬. ಮಹಾತ್ಮರ ಮನೋರಂಗ (೨ನೆಯ ಆವೃತ್ತಿ) | ೩—೮—೦ |
| ೧೭. ಸೆರೆಯ ಮರೆಯಲ್ಲಿ (೨ನೆಯ ಆವೃತ್ತಿ) | ೨—೮—೦ |
| ೧೮. ವಚನಶಾಸ್ತ್ರ ರಹಸ್ಯ (೩ನೆಯ ಆವೃತ್ತಿ) | ೬—೦—೦ |
| ೧೯. ಮಹಾಯೋಗಿ (ಮಹರ್ಷಿ ಅರವಿಂದರು) (೧ನೆಯ ಆವೃತ್ತಿ) | ೨—೮—೦ |
| ೨೦. ಯಾತ್ರಿಕ (ಮನೋಹರ ಗ್ರಂಥಮಾಲೆಯ ಪ್ರಕಾಶನ) | ೨—೦—೦ |

ದೊರೆಯುವ ಸ್ಥಳ: ಅಧ್ಯಾತ್ಮ ಕಾರ್ಯಾಲಯ, ಹುಬ್ಬಳ್ಳಿ.

Edited, printed and published by H. R. Moharay at
the Samyukta Karnatak Press, Koppikar Road, Hubli

KASTURI . KANNADA DIGEST

October, 19

As. 12









ಲೋಕಶಿಕ್ಷಣ ಟ್ರ
ಪ್ರಕಟನೆ